ಸಂಪುಟ ೩ ಸಂಚಿಕೆ ೧ ಜನವರಿ ೨೦೦೧

# ಮಹಿಳಾ ಅಧ್ಯಯನ

## ಉತ್ತರಾಯಣ ಸಂಚಿಕೆ






ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಮಹಿಳಾ ಅಧ್ಯಯನ

## (ಉತ್ತರಾಯಣ ಸಂಚಿಕೆ)

ಸಂಪಾದಕರು

ಡಾ.ಎಚ್.ಎಸ್.ಶ್ರೀಮತಿ



ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ,ಹಂಪಿ

**MAHILA ADHYAYANA** (Half Yearly) Vol 3-1 (Jan-June 2001)
Ed.by Dr.H.S.Sreemathi
Published by the Director, Prasaranga
Kannada University, Hampi, Vidyaranya-583 276

ಪುಟ : X + ೧೫೬



ಪ್ರಧಾನ ಸಂಪಾದಕರು : ಡಾ.ಎಂ.ಎಂ.ಕಲಬುರ್ಗಿ

ಸಲಹಾ ಸಮಿತಿ : ಡಾ.ವಿಜಯಾ
ಡಾ.ಮಲ್ಲಿಕಾ ಘಂಟಿ

ಸಹಾಯಕ ಸಂಪಾದಕರು : ಡಾ.ಎಂ.ಉಷಾ
ಡಾ.ಶೈಲಜಾ ಇಂ. ಹಿರೇಮಠ

ಪ್ರಕಾಶಕರು
ಪ್ರೊ.ಎ.ವಿ.ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ
ವಿದ್ಯಾರಣ್ಯ ೫೮೩ ೨೭೬

ಬಿಡಿ ಪ್ರತಿ : ರೂ.೧೫.೦೦
ವಾರ್ಷಿಕ ಚಂದಾ : ರೂ.೩೦.೦೦

ಮುಖಪುಟ ವಿನ್ಯಾಸ
ಕೆ.ಕೆ.ಮಕಾಳಿ

ಅಕ್ಷರ ಸಂಯೋಜನೆ
ಶ್ರೀ ಸಾವಳಗಿ ಶಿವಲಿಂಗೇಶ್ವರ ಗ್ರಾಫಿಕ್ಸ್
ಕಮಲಾಪುರ

ಮುದ್ರಣ
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್
ಗದಗ

# ಮಹಿಳಾ ಸಬಲೀಕರಣದ ಪ್ರಶ್ನೆ

೨೦೦೧ನೇ ಇಸವಿಯನ್ನು 'ಮಹಿಳಾ ಸಬಲೀಕರಣ ವರ್ಷ' ಎಂದು ಘೋಷಿಸಲಾಗಿದೆ. ಇದೇನೂ ಢೋಂಗಿ ಪ್ರಚಾರವಲ್ಲ ಎಂಬುದನ್ನು ತೋರಿಸಲೆಂದೇ ಮಹಿಳೆಯರ ಸಬಲೀಕರಣಕ್ಕೆ ನೆರವಾಗಲೆಂದು, ಅವರ ಹಕ್ಕುಗಳನ್ನು ರಕ್ಷಿಸಲೆಂದು, ಹತ್ತು ಹಲವು ಕಾರ್ಯಕ್ರಮಗಳನ್ನು ಸರ್ಕಾರ ರೂಪಿಸಿದೆ. ಆದರೆ ಇಂತಹ ಎಷ್ಟೋ ರಾಜಕೀಯದ ಆಟಗಳನ್ನು ಕಾಣುತ್ತಾ, ಅನುಭವಿಸುತ್ತಾ ಬಂದಿರುವ ಮಹಿಳಾ ಚಳುವಳಿಗಳು ಮಾತ್ರ ಇದನ್ನೇನೂ ಗಂಭೀರವಾಗಿ ಪರಿಗಣಿಸಿಲ್ಲ. ಪುರುಷ ಚಿಂತನೆಯೇ ಪ್ರಧಾನವಾಗಿರವ ರಾಜಕೀಯ ನಡೆಗಳು ಮಹಿಳಾ ಪರವಾಗಿ ಇದ್ದದ್ದು ಚರಿತ್ರೆಯಲ್ಲಿ ಸಂಭವಿಸಿದ್ದೇ ಇಲ್ಲ. ಮಹಿಳೆಯರು ಕನಿಷ್ಠ ಸೌಲಭ್ಯ ಸವಲತ್ತುಗಳಿಗೂ ಪರದಾಡುವುದು ಎಂದೂ ತಪ್ಪಿಲ್ಲ. ಎಚ್ಚೆತ್ತ ಮಹಿಳೆಯರೀಗ ತಿಳುವಳಿಕೆ, ಧೈರ್ಯ ಹಾಗೂ ಸಂಘಟನೆಗಳಲ್ಲಿ ಸಬಲರಾಗುತ್ತಿದ್ದಾರಷ್ಟೇ. ಪ್ರಜಾಪ್ರಭುತ್ವ ವನ್ನು ತೋರಿಕೆಯಲ್ಲಾದರೂ ಜಾರಿಯಲ್ಲಿಡುವುದು ತೀರಾ ಅನಿವಾರ್ಯವಾಗಿರುವ ಪ್ರಸ್ತುತ ಸಂದರ್ಭದಲ್ಲಿ ಅಲಕ್ಷಿತ ಸಮುದಾಯಗಳನ್ನು ರಕ್ಷಿಸುವ, ಬೆಂಬಲಿಸುವ ಹೇಳಿಕೆಗಳನ್ನು ನೀಡುವುದು ನಿರೀಕ್ಷಿತ ರಾಜಕೀಯ ತಂತ್ರವೇ ಎನಿಸಿದರೆ ಅದನ್ನು ಸಿನಿಕತನ ಎನ್ನಲಾಗದು. ಮಹಿಳಾ ಮೀಸಲಾತಿ ಬಿಲ್ ಪ್ರಸಂಗದಲ್ಲಿ ನಡೆಯುತ್ತಿರುವ ರಾಜಕೀಯದ ಆಟಗಳನ್ನು ಕಾಣುತ್ತಿರುವ ಮಹಿಳಾ ಸಮುದಾಯ 'ಸಬಲೀಕರಣ ವರ್ಷ' ಎಂಬ ಘೋಷಣೆಯನ್ನು ಎಷ್ಟು ಗಂಭೀರವಾಗಿ ಪರಿಗಣಿಸಬೇಕು ಎಂದು ಅನುಮಾನಿಸುವುದೇ ಹೆಚ್ಚು ಸಹಜವೆನಿಸಿಬಿಡುತ್ತದೆ. ಇನ್ನು ದಿನದಿನದ ಬವಣೆಗಳಿಂದ ಪರಾಗುವ ದಾರಿಗಳನ್ನು ಕಾಣಲಾಗದ ಬಡ ಜಾತಿವರ್ಗಗಳಿಗೆ ಸೇರಿದ ಮಹಿಳೆಯರ ಪಾಲಿಗೆ 'ಸಬಲೀಕರಣ' ಎನ್ನುವುದು ಯಾವ ಅರ್ಥವೂ ಇಲ್ಲದ ಶುಷ್ಕವಾದ ಮಾತಷ್ಟೇ.

ಇಷ್ಟೆಲ್ಲಾ ಹತಾಸೆಯಿಂದ ಈ ರಾಜಕಾರಣದ ಆಟಗಳನ್ನು ನೋಡುವಾಗಲೂ, ಯಾವುದೋ ಅನಿವಾರ್ಯದಲ್ಲೇ ಆಗಲಿ ಪ್ರಜಾಪ್ರಭುತ್ವದ ಸಣ್ಣ ಎಳೆಯೊಂದು ಈ 'ಸಬಲೀಕರಣ' ಮಂತ್ರವನ್ನು ನಿಜವಾಗಿಸಿ ಮಹಿಳಾ ಸಮುದಾಯದ ಪರವಾದ ಅಷ್ಟಿಷ್ಟು ಕೆಲಸಗಳಾದರೂ ಆಗಬಹುದೇ ಎಂಬ ಆಶಾಕಿರಣವೂ ಕಾಣುತ್ತದೆ. ಮಹಿಳಾ ಚಿಂತನೆಗಳು ಹಾಗೂ ಚಳುವಳಿಗಳು ರಾಜಕಾರಣದ ಈ ಆಟವನ್ನೇ ನಿಜವಾಗಿಸುವ ತಂತ್ರಗಳನ್ನು

ಯೋಜಿಸಬೇಕು. ಸರ್ಕಾರದ ಘೋಷಣೆ ಹಾಗೂ ಕಾರ್ಯಕ್ರಮಗಳು ತಮಗೆ ತಾವೇ ಪೂರ್ಣ ಪ್ರಮಾಣದಲ್ಲಿ ಕ್ರಿಯಾಶೀಲವಾಗಿ 'ಮಹಿಳಾ ಸಬಲೀಕರಣ'ವಾಗಿ ಬಿಡಲಾರದಾದರೂ, ಇದನ್ನೇ ಒಂದು ಪ್ರಬಲ ಸಾಧನವನ್ನಾಗಿ ಬಳಸುವ ಸಾಮರ್ಥ್ಯವನ್ನೀಗ ಮಹಿಳಾ ಸಮುದಾಯ ಒಗ್ಗೂಡಿಸಿಕೊಳ್ಳುವುದು ಸಾಧ್ಯ. ಆರ್ಥಿಕ ಸ್ವಾವಲಂಬನೆ, ಸಾಮಾಜಿಕ ವಲಯಗಳಲ್ಲಿ ರಕ್ಷಣೆ ಹಾಗೂ ಮನ್ನಣೆಗಳಂತಹ ಮೂಲಭೂತ ಅನುಕೂಲಗಳು ಮಹಿಳೆಯರಿಗೆ ದಕ್ಕಬೇಕಾದರೆ, ದೇಶದ ಸಂವಿಧಾನವು ತಾತ್ವಿಕವಾಗಿ ಅವಕಾಶ ಕಲ್ಪಿಸಿರುವ ಸಮಾನತೆಯೂ ಅರ್ಥಪೂರ್ಣವೆನಿಸಬೇಕಾದರೆ ಕಾನೂನು ಜಾರಿಗೊಳ್ಳುವ ಪರಿಕ್ರಮಗಳು ನ್ಯಾಯಾಬದ್ಧವಾಗಿರಬೇಕು. ಚರಿತ್ರೆಯುದ್ದಕ್ಕೂ ಸಾಗಿಬರುತ್ತಾ ಜನಜೀವನದಲ್ಲಿ ಅವಿಭಾಜ್ಯವೆಂಬಂತೆ ಬೆರೆತು ಹೋಗಿರುವ ಲಿಂಗವ್ಯವಸ್ಥೆಯ ಎಲ್ಲಾ ಅನ್ಯಾಯಗಳನ್ನು ಒಟ್ಟೊಟ್ಟಿಗೇ ಎದುರಿಸಲಾಗದೆಂಬುದು ವಾಸ್ತವವೇ ಆದರೂ ದೇಶದ ಎಲ್ಲಾ ಪ್ರಜೆಗಳನ್ನು ಜಾತಿ ಜನಾಂಗ ವರ್ಗ, ಲಿಂಗಗಳ ಭೇದವಿಲ್ಲದೆ ಸಮಾನವಾಗಿ ಪರಿಗಣಿಸಲಾಗುವುದು ಎಂಬ ತಾತ್ವಿಕ ಚಿಂತನೆಯನ್ನಾಧರಿಸಿದ ಪ್ರಜಾಪ್ರಭುತ್ವದ ಆಡಳಿತ ಯಂತ್ರದಲ್ಲಾದರೂ ಸಾಮಾಜಿಕ ನ್ಯಾಯಕ್ಕೆ ಅವಕಾಶವಿರಬೇಕು. ಇದಕ್ಕೊಂದು ವ್ಯಾವಹಾರಿಕ ಮಾರ್ಗ ರೂಪುಗೊಳ್ಳಬೇಕು. ಈ ಹಿನ್ನೆಲೆಯಲ್ಲಿ 'ಮಾನುಷಿ' ಪತ್ರಿಕೆಯ ಸಂಪಾದಕಿ ಮಧುಕೀಶ್ವರ್ ಅವರು ನೀಡಿದ ಸಂದರ್ಶನವೊಂದರಲ್ಲಿ ಮಹಿಳೆಯರ ಸಬಲೀಕರಣಕ್ಕೆ ಉಪಯುಕ್ತವೆನಿಸುವ ಕನಿಷ್ಠ ಕೆಲವು ಕಾನೂನುಗಳಾದರೂ ಕಟ್ಟುನಿಟ್ಟಾಗಿ ಜಾರಿಗೊಳ್ಳುವ ನಿಯಮ ಪಾಲನೆಯಾಗಬೇಕು ಎಂದು ಒತ್ತಾಯಿಸಿದ್ದಾರೆ. ಇಂಥದೇ ಒಂದು ಸಂದರ್ಶನದಲ್ಲಿ ಆಲ್ ಇಂಡಯಾ ಡೆಮೊಕ್ರೆಟಿಕ್ ವಿಮೆನ್ಸ್ ಅಸೋಸಿಯೇಷನ್‌ನ ಜನರಲ್ ಸೆಕ್ರೆಟರಿ ಬೃಂದಾ ಕಾರಟ್ ಅವರು ಎಲ್ಲಕ್ಕೂ ಮೊದಲು ಆರ್ಥಿಕ ಸಬಲೀಕರಣವಾಗಬೇಕು; ಇದನ್ನು ಜಾರಿಗೊಳಿಸುವಲ್ಲಿ ಆಡಳಿತಯಂತ್ರ ಸಶಕ್ತವಾಗಬೇಕು ಎಂದಿದ್ದಾರೆ. ಹಾಗೆಯೇ ಮೇಲ್ವರ್ಗದ ಎಷ್ಟೋ ಮಹಿಳೆಯರು ಒಂದು ಘೋಷಣೆಯಾಗಿಯೇ ಆಗಲಿ, ಕೇವಲ ಕಾನೂನಿನ ಪ್ರಕಟಣೆಗಳಾಗಿಯೇ ಆಗಲಿ, ಆಫೀಸುಗಳಿಗೆ ಕಳಿಸಿದ ಅಧಿಕೃತ ಸೂಚನಾ ಪತ್ರ ಅಥವಾ ಆದೇಶಗಳಲ್ಲಿಯೇ ಆಗಲಿ, ತೋರಿಕೆಯದೇ ಇರಲಿ ಅಂತೂ ಮಹಿಳಾ ಪರವಾದ ಇಂಥಾ ಮಾತುಗಳು ಪ್ರಕಟಗೊಳ್ಳುವುದು ಕೂಡ ಪ್ರಯೋಜನಕಾರಿಯಾದದ್ದೇ ಎನ್ನುತ್ತಾರೆ. ಕೆಲವರು ಇಂಥ ಮಾತುಗಳು ಕೆಳವರ್ಗಜಾತಿ ಸಮುದಾಯದ ಮಹಿಳೆಯರಿಗೆ ಏನೇನೂ ಅನ್ವಯವಾಗುವುದಿಲ್ಲವಾದ್ದರಿಂದ ಉಪಯುಕ್ತವೆಂದು ಹೇಗೆ ಹೇಳುವುದು ಎಂದು ಅನುಮಾನಿಸುತ್ತಾರೆ. ಆದರೆ ಸಾಮಾಜಿಕ ನ್ಯಾಯಕ್ಕಾಗಿ ನಡೆಸುತ್ತಿರುವ ಹಲವು ಬಗೆಯ ಮಹಿಳಾ ಹೋರಾಟ ಹಾಗೂ ಚಳುವಳಿಗಳ ಫಲಿತಾಂಶಗಳನ್ನು ಗಮನಿಸುತ್ತಾ ಬಂದವರಿಗೆ ಕ್ರಮೇಣವಾಗಿಯಾದರೂ ಸಾಮಾಜಿಕ ಬದಲಾವಣೆಗಳು ಕಾಣಿಸತೊಡಗಿವೆ. ಅನುಮಾನಗಳಲ್ಲೇ ಸ್ಥಗಿತರಾಗುವುದಕ್ಕಿಂತ ಹೆಜ್ಜೆಗಳನ್ನು ಒಂದೊಂದಾಗಿಯಾದರೂ ಮುಂದಿಡುತ್ತಾ ಸಾಗುವುದು ಹೆಚ್ಚು ಉಪಯುಕ್ತವಾದಿತು.

'ಮಹಿಳಾ ಅಧ್ಯಯನ'ದ ಈ ಸಂಚಿಕೆಯಲ್ಲಿ ಮಹಿಳಾ ಸಾಮರ್ಥ್ಯಗಳ ಕೆಲವು ಹೊಳಹುಗಳನ್ನೂ, ಅವುಗಳಿಗೆ ಸವಾಲೆಸೆದು ನಿಲ್ಲುವ ಸಮಾಜದ ಪರಿಕ್ರಮವನ್ನೂ ಗ್ರಹಿಸುವ ಪ್ರಯತ್ನಗಳನ್ನು ಮಾಡಲಾಗಿದೆ. 'ಸಬಲೀಕರಣ'ಗೊಳ್ಳುವುದೆಂದರೆ ಏನೇನೂ ಸತ್ವವಿಲ್ಲದ ದುರ್ಬಲ ರೋಗಿಗೆ ಟಾನಿಕ್ ನೀಡುವ 'ರಕ್ಷಕ' ಮನೋಭಾವವನ್ನು ಈ ಸಮಾಜ ತೋರಬೇಕೆಂದಿಲ್ಲ. ಮಹಿಳಾ ಸಮುದಾಯದ ಸಾಮರ್ಥ್ಯಗಳನ್ನು ಹೂತುಹಾಕುವ ಪ್ರವೃತ್ತಿಯನ್ನು ಮೊದಲಿಗೆ ಅದು ಬಿಡಬೇಕು. ಸಮಾಜವಾಗಲೀ, ಅದರ ಒಂದು ಮುಖವಾದ ಆಡಳಿತಯಂತ್ರವಾಗಲೀ ಈ ಒಂದು ಸಾಮಾಜಿಕ ನ್ಯಾಯವನ್ನು ಒಪ್ಪಿದರೆ ಉಳಿದಂತೆ ಮಹಿಳಾ ಸಬಲೀಕರಣ ಸಹಜಗತಿಯಲ್ಲಿ ಆಗಿಯೇ ಆಗುತ್ತದೆ.

ಪತ್ರಿಕೆಗೆ ಉಪಯುಕ್ತವಾದ ಲೇಖನಗಳನ್ನು ನೀಡಿದ ವಿದ್ವಾಂಸರನ್ನು ನಾನು ಮೊದಲಿಗೆ ಕೃತಜ್ಞತೆಯಿಂದ ನೆನೆಯಬೇಕು. ನಮ್ಮ ವಿಭಾಗಕ್ಕೂ ಪತ್ರಿಕೆಗೂ ಸದಾ ಬೆಂಬಲವಾಗಿ ನಿಂತಿರುವ ಮಾನ್ಯ ಕುಲಪತಿಯವರಿಗೆ ಹೃತ್ಪೂರ್ವಕ ನಮಸ್ಕಾರಗಳು. ಸೂಕ್ತ ಸಲಹೆಗಳನ್ನು ನೀಡಿ ನೆರವಾದ ಪತ್ರಿಕೆಯ ಸಲಹಾ ಸಮಿತಿಯ ಡಾ.ವಿಜಯಾ ಅವರಿಗೂ, ಡಾ.ಮಲ್ಲಿಕಾ ಘಂಟಿಯವರಿಗೂ ನಾನು ಆಭಾರಿಯಾಗಿದ್ದೇನೆ. ಪತ್ರಿಕೆಯನ್ನು ಸಿದ್ಧಪಡಿಸುವಲ್ಲಿ ಜೊತೆಗೆ ನಿಂತ ನನ್ನ ವಿಭಾಗದ ಸಹೋದ್ಯೋಗಿ ಗೆಳತಿಯರಾದ ಡಾ.ಎಂ.ಉಷಾ ಹಾಗೂ ಡಾ.ಶೈಲಜಾ ಇಂ.ಹಿರೇಮಠ ಅವರಿಗೆ ವಂದನೆಗಳು. ಮುಖಪುಟ, ಮುದ್ರಣದ ತಾಂತ್ರಿಕ ಹಂತಗಳನ್ನು ನಿರ್ವಹಿಸಿದ ಶ್ರೀ ಕೆ.ಕೆ.ಮಕಾಳಿ ಹಾಗೂ ಶ್ರೀ ಸುಜ್ಞಾನಮೂರ್ತಿ ಅವರಿಗೂ, ಅಕ್ಷರ ಸಂಯೋಜನೆ ಮಾಡಿದ ಶ್ರೀ ಸಾವಳಗಿ ಶಿವಲಿಂಗೇಶ್ವರ ಗ್ರಾಫಿಕ್ಸ್, ಕಮಲಾಪುರ ಅವರಿಗೂ ಧನ್ಯವಾದಗಳು. ಪ್ರಕಾಶನದ ಹೊಣೆ ಹೊತ್ತಿರುವ ನಮ್ಮ ಪ್ರಸಾರಾಂಗದ ನಿರ್ದೇಶಕರಿಗೂ ಅವರ ಸಿಬ್ಬಂದಿಗೂ ವಂದಿಸುವೆ.

ಡಾ. ಎಚ್. ಎಸ್. ಶ್ರೀಮತಿ
ಮಹಿಳಾ ಅಧ್ಯಯನ ವಿಭಾಗ

# ಪರಿವಿಡಿ

# ಉಷಾದಾತಾರ್ ಅವರೊಂದಿಗೆ

ವಿಜಯಾ



ಭರತ ನಾಟಕ ಕಲಾ ಪ್ರಪಂಚದಲ್ಲಿ ಶ್ರೀಮತಿ ಉಷಾ ದಾತಾರ್ ರವರ ಹೆಸರು ಕರ್ನಾಟಕದಲ್ಲೆಲ್ಲಾ ಜನಪ್ರಿಯ. ಇವರು ನಾಲ್ಕು ನೃತ್ಯ ಶೈಲಿಗಳಾದ ಭರತನಾಟ್ಯ, ಮೋಹಿನಿ ಅಟ್ಟಂ, ಕೊಚುಪುಡಿ ಮತ್ತು ಕಥಕ್ಕಳಿಯಲ್ಲಿ ಪರಿಣತೆಯನ್ನು ಪಡೆದಿದ್ದಾರೆ.

ಅರಸೀಕೆರೆಯಲ್ಲಿ ಜನಿಸಿ ನೃತ್ಯ ಶಿಕ್ಷಣವನ್ನು ಸ್ವತಃ ಸಂಗೀತ ಹಾಗೂ ನೃತ್ಯ ವಿದೂಷಿಯಾಗಿರುವ ಮಾತೃಶ್ರೀ ಶ್ರೀಮತಿ ಸ್ನೇಹಪ್ರಭಾ ಅವರಿಂದ, ಸುಮಾರು ಏಳನೇ ವರ್ಷದಿಂದಲೇ ಪ್ರಾರಂಭಿಸಿದರು.

ನೃತ್ಯ ಶಿಕ್ಷಣದಲ್ಲಿ ಹೆಚ್ಚಿನ ವ್ಯಾಸಂಗ ಹಾಗೂ ನೈಪುಣ್ಯವನ್ನು ಪಡೆಯುವುದಕ್ಕಾಗಿ ವಲ್ಲತ್ತೋಳ್ ರವರು ಪ್ರಾರಂಭಿಸಿದ ಜಗದ್ವಿಖ್ಯಾತ ಕೇರಳ ಕಲಾ ಮಂಡಳಂನಲ್ಲಿದ್ದು, ಕೇರಳ ಸರ್ಕಾರದ ವಿದ್ಯಾರ್ಥಿ ವೇತನದೊಂದಿಗೆ ೫ ವರ್ಷಗಳ ಕಾಲ ಗುರುಕುಲ ಪದ್ಧತಿಯಲ್ಲಿ ೯ನೇ ವರ್ಷದಲ್ಲಿ ಶಿಕ್ಷಣ ಪಡೆದು ಮೋಹಿನಿ ಅಟ್ಟಂ ಹಾಗೂ ಭರತನಾಟ್ಯ

ದಲ್ಲಿ ಪರಿಣತಿಯನ್ನು ಪಡೆದರು. ತದನಂತರ ೧೯೭೩ರಲ್ಲಿ ಆಂಧ್ರ ಸಂಗೀತ ಅಕಾಡೆಮಿಯ ಅಡಿಯಲ್ಲಿ ಕೂಚುಪುಡಿ, ದೇವಾಲಯ ನೃತ್ಯ ಹಾಗೂ ಸಾತ್ವಿಕ ಅಭಿನಯವನ್ನು ದಕ್ಷಗುರುಗಳ ಮಾರ್ಗದರ್ಶನದಲ್ಲಿ ಕಲಿತು ಶ್ರೇಷ್ಠ ನೃತ್ಯ ಪ್ರದರ್ಶನ ನೀಡಿದ್ದಾರೆ. ನಂತರ ಮೈಸೂರು ಶೈಲಿಯ ನೃತ್ಯವನ್ನು ಖ್ಯಾತ ಗುರುಗಳಾದ ಡಾ.ವೆಂಕಟಲಕ್ಷಮ್ಮ ಮತ್ತು ದಿವಂಗತ ಜೇಜಮ್ಮನವರಿಂದ ತರಬೇತಿ ಪಡೆದರು.

ಶ್ರೀಮತಿ ದಾತಾರ್ ರವರು ನೀಡಿರುವ ನೃತ್ಯ ಪ್ರದರ್ಶನಗಳನ್ನು ಪಟ್ಟಿ ಮಾಡುವುದು ಕಷ್ಟಸಾಧ್ಯ. ದೇಶ ವಿದೇಶಗಳಲ್ಲಿ ಗಣ್ಯಾತಿಗಣ್ಯರ ಸಮಕ್ಷಮದಲ್ಲಿ ಅಸಂಖ್ಯಾತ ಕಾರ್ಯಕ್ರಮಗಳನ್ನು ಅವರು ನೀಡಿದ್ದಾರೆ. ಸದ್ಯ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ನಾಟಕ ಹಾಗೂ ನೃತ್ಯ ವಿಭಾಗದಲ್ಲಿ ರೀಡರ್ ಹುದ್ದೆಯಲ್ಲಿರುವ ಉಷಾ ದಾತಾರ್ ಅವರಿಗೆ ಸಂದ ಪ್ರಶಸ್ತಿ ಪುರುಸ್ಕಾರ ಗೌರವಗಳೂ ಪಟ್ಟಿಮಾಡಿ ಮುಗಿಸುವಂಥವಲ್ಲ.

ಇದಿಷ್ಟು ಸಂಕ್ಷಿಪ್ತ ಅಂಕಿ ಅಂಶಗಳನ್ನು ನೋಡಿದರೆ ಉಷಾದಾತಾರ್ ಒಬ್ಬ ಪ್ರತಿಭಾವಂತ ನೃತ್ಯಗಾರ್ತಿ ಎಂಬ ಒಂದು ಸಂಗತಿ ಮಾತ್ರ ಗಮನಕ್ಕೆ ಬರುತ್ತದೆ ನಿಜ. ಆದರೆ ಕಲಾಸಾಧನೆಯು ಅವರ ಜೀವನಗಾಥೆ ತೋರುವ ಹೊಳಹುಗಳು ತುಂಬಾ ವಿಸ್ಮಯಕರವಾದುದು. 'ಮಹಿಳಾ ಲೋಕ'ದಲ್ಲಿ ಸಾಮರ್ಥ್ಯ, ಸಾಧನೆಗಳು ಸಾಕಾರಗೊಳ್ಳುವ ಪ್ರಕ್ರಿಯೆ ಅದೆಷ್ಟೊಂದು ಸಂಕೀರ್ಣವಾದುದು ಎಂಬ ಕಲ್ಪನೆ ಊಹಾತೀತವಾದುದು. ಸಾಮಾನ್ಯ ಕುಟುಂಬವೊಂದರಲ್ಲಿ ಜನಿಸಿದ ಉಷಾದಾತಾರ್ ತಮ್ಮ ತಾಯಿಯ ಸೂಕ್ತ ಮಾರ್ಗದರ್ಶನ ಹಾಗೂ ಛಲದ ನೆರವಿನಿಂದ ದೊಡ್ಡ ಸಾಧಕಿಯಾಗಿ ಬೆಳೆದರು. ಇಂಥದೊಂದು ಅನುಭವ ಲೋಕದ ಒಳಹೊಕ್ಕು ಅಲ್ಲಿನ ವರ್ಣರಂಜಿತ ಸಾರ್ಥಕ ಬದುಕಿನ ನೋಟವನ್ನು ಕಾಣಿಸುವಲ್ಲಿ ಡಾ.ವಿಜಯಾ ಅವರ ಶ್ರಮ ತುಂಬಾ ಸಾರ್ಥಕ ರೂಪದ್ದಾಗಿದೆ. 'ಸಂಪರ್ಶನ' ಎನ್ನೋಣವೆಂದರೆ ಸಂದರ್ಶಕಿ ಇಲ್ಲಿ ಮಾತನಾಡಿದ್ದೇ ಕಡಿಮೆ. ಆದರೆ ಗುಪ್ತಗಾಮಿನಿಯಾದ ಅವರ ಇರವು ಬಲುಸೂಕ್ಷ್ಮದಲ್ಲಿ ಕೆಲಸ ಮಾಡಿ ಉಷಾದಾತಾರ್ ಅವರ ಬದುಕು ಸಾಧನೆಗಳ ಹಿರಿಮೆಯನ್ನು ಕಾಣಲು ನಮಗೆ ನೆರವಾಗುವಂತಿದೆ. ಇಬ್ಬರ ನಡುವಣ ಮಾತುಕತೆ 'ಹೆಂಗಸರ ಹರಟೆ'ಯಷ್ಟು ಸಹಜವಾಗಿ ಹೊಮ್ಮಿದೆ. ದೀರ್ಘವಾಗಿ ನಡೆದ ಈ ಮಹಿಳಾ ಸಂವಾದವನ್ನು ಅಷ್ಟಾಗಿ ಸಂಗ್ರಹಿಸಲು ಹೋಗದೆ ಹೆಚ್ಚುಕಡಿಮೆ ಅದಿರುವಂತೆಯೇ ಕೊಡುವ ಮೂಲಕ ಓದುಗರೂ ಅದರಲ್ಲಿ ಸಹಜವಾಗಿ ಪಾಲ್ಗೊಳ್ಳಬಹುದೆಂದು ಆಶಿಸಲಾಗಿದೆ.

**ಉಷಾ:** ನಾನು ನನ್ನ ಹುಟ್ಟಿನ ಬಗ್ಗೆ ಹೇಳೋದಾದ್ರೆ.......

ಮೊದಲು ನನ್ನ ಮನೆ ವಾತಾವರಣದ ಬಗ್ಗೆ ಹೇಳ್ತೀನಿ, ನಮ್ಮ ತಂದೆ ಮನೆ ಕಡೆ ಸ್ವಲ್ಪ ಹೆಣ್ಮಕ್ಕಳು ಅಪರೂಪ ಗಂಡುಮಕ್ಕಳೇ ಜಾಸ್ತಿ. ನಂತರ ತಾಯಿ ಮನೆ ಕಡೆ ಕೂಡ ಅಷ್ಟೆ. ನನ್ ತಾಯಿ ಒಬ್ಳೇನೆ ಮಗಳಿದ್ದಿದ್ದು. ಇನ್ನುಳಿದೋರೆಲ್ಲ ಗಂಡುಮಕ್ಕಳು. ಅದರ ಹಾಗೆ ನಮ್ಮ ತಂದೆ ಮನೆ ಕಡೆ Sportsನಲ್ಲೆಲ್ಲ ಬಾಳ ಮುಂದುವರೆದ ಜನ. ನನ್ನ ತಾಯಿ ಕಡೆ

ಕಲೆ ಅಂದ್ರೆ ಸಂಗೀತ, ನೃತ್ಯ ಈ ಮಾಧ್ಯಮದಲ್ಲೆಲ್ಲ ಮುಂದುವರೆದಂತ ಜನ. ಅಂದ್ರೆ ಕಲೇನೇ ಜೀವನಕ್ಕೋಸ್ಕರ ಆಧಾರವಾಗಿಟ್ಟುಕೊಂಡಿರಲಿಲ್ಲ. ಅವರ ದಿನಚರಿಗಳಲ್ಲಿ ಕೆಲಸಗಳನ್ನು ಮುಗಿಸಿಕೊಂಡು ಉಳಿದಿದ್ದ ಕಾಲಗಳಲ್ಲಿ ಕಲೇನ ಒಂದು ಭಜನೆ ಮೂಲಕ ಸಂಗೀತನೋ ನಾಟಕನೋ ಮಾಡಿಕೊಂಡಿದ್ರು. ನನ್ನ ತಾಯಿ ಕಡೆ ಏನೂಂದ್ರೆ ಈವಗಿನ ಸುಪ್ರಸಿದ್ಧ ಸಂಗೀತಗಾರ್ತಿ ಇದಾರಲ್ಲ-ಲತಾಮಂಗೇಶ್ಕರ್, ಅವರ ತಂದೇನೂ ನಮ್ಮ ಅಜ್ಜಿ-ನಮ್ಮ ತಾಯಿಯವರ ತಾಯಿ ಅವರೆಲ್ಲ ಮೊದ್ಲಿಂದಾನೂ ನಾಟಕ ಮಾಡೋದು ಇವೆಲ್ಲದರಲ್ಲಿ ಬಾಳ ಪ್ರಸಿದ್ಧರಾಗಿದ್ದರು. ಮರಾಠಿ ನಾಟಕಗಳಲ್ಲೆಲ್ಲ. ನಮಗೆ ಮುಂದೆ ಹೆಣ್ಮಕ್ಕಳು ಒಂದು ಹುಟ್ಟಿದ್ರೆ ಅವಳಿಗೆ ಕಲೆನಲ್ಲಿ ಮುಂದುವರಿಬೇಕು ಅನ್ನೊದಿತ್ತು ಅವರಿಗೆ. ಆವಾಗಂದ್ರೆ ಕಲೇನ ಅಷ್ಟೊಂದು ಕೀಳಾಗಿ ಕಾಣ್ತಾ ಇರಲಿಲ್ಲ. ಕಲೇನ ಒಂದು ಒಳ್ಳೆ ದೈವಿಕವಾಗಿ ಕಾಣ್ತಾ ಇದ್ದಂತ ಕಾಲ.

ಆ ತರ ಇರಬೇಕಾದರೆ ನನ್ನ ಒಂದು ಹುಟ್ಟು ಮನೇನಲ್ಲಿ ಒಂದು ಹೆಣ್ಮಗು ನಾನೇ ಪ್ರಥಮ. ನಮ್ಮ ತಂದೆ ಮನೆ ಕಡೆ ತಾಯಿ ಮನೆ ಕಡೆಯಿಂದ. so ಹುಟ್ಟಿದಾಗ ತುಂಬ ಸಂಭ್ರಮ. ನನ್ನ ಮುತ್ತಜ್ಜಿ ಒಳ್ಳೆ 'ಉಷ್ ' ಕಾಲದಲ್ಲಿ ಹುಟ್ಟಿರೊದ್ರಿಂದ 'ಉಷಾ'ಅಂತಾನೇ ಕರೀಬೇಕು ಅಂತಾ ಹೇಳಿ ಇಟ್ಟುಕೊಂಡು ಬಾಳ ಸಂಭ್ರಮದಿಂದ ಸಾಕಿ ಎಲ್ಲಾ ಮಾಡಿದ್ರು. ಅಂದ್ರೆ ಹುಟ್ಟುವಾಗಲೇ ಒಂದು ರಕ್ತ ಸಂಬಂಧ ಅಂತ ಒಂದಿರುತ್ತಲ್ಲ. ನನಗೆ ಸ್ವಲ್ಪ ಈ ನೃತ್ಯದಲ್ಲಿ ಸ್ವಲ್ಪ ಜಾಸ್ತಿ ಆಸಕ್ತಿ ಬರೋಕೆ ಶುರು ಆಯಿತು. ಅದೇ ರೀತಿ ನನ್ನ ತಾಯೀನೂ ನಾಟಕದಲ್ಲಿ ಪಾತ್ರಗಳನ್ನ ಮಾಡ್ತಾಯಿದ್ರು. ಹಿಂದೀನಲ್ಲಿ ಎಷ್ಟೋ ಡ್ರಾಮಾಗಳನ್ನು ಅವರವರೆ ರಚಿಸಿ ಅಲ್ಲೆಲ್ಲ ಮಹಿಳಾ ಸಮಾಜದಲ್ಲಿ ಮಾಡ್ತಾಯಿದ್ರು, ಸಂಗೀತ ಹಾಡ್ತಿದ್ರು. ಆಮೇಲೆ ನನ್ನ ತಾಯಿಗೆ ಅಜ್ಜ ಮತ್ತು ಅಜ್ಜಿ ಈ ನೃತ್ಯ ಅಭ್ಯಾಸ ಹೇಳಿಸಿದ್ರು. ಹುಟ್ಟಿದಾಗ ನಮ್ಮ ತಾಯಿ ಹೇಳೋ ಪ್ರಕಾರ, ಅಂದ್ರೆ ಹಿಂದೆ ಸಣ್ಮಗು ನನಗಷ್ಟು ನೆನಪಿಲ್ಲ, ಈ ಚಂದ್ರಲೇಖ ಅಂತ ಒಂದು ಸಿನಿಮಾ ಬಂದಾಗ ಅದರಲ್ಲಿ ಡ್ರಮ್ಮಲ್ಲಿ ನೈನಿಕರು ಅಡಗಿ ಕುಳಿತುಕೊಂಡು ಬೇರೆ ರಾಜನ ಮೇಲೆ ದಂಡೆತ್ತಿ ಬರುವಂತ ಸೀನ್ ನಲ್ಲಿ ಡ್ರಮ್ಮು ಮೇಲೆ ಡ್ಯಾನ್ಸ್ ಮಾಡೋ ಸೀನ್ ಇತ್ತು. ಅದನ್ನು ನೋಡ್ತಾ ನೋಡ್ತಾ ನಾನು ಪರದೆ ಹತ್ರ ಹೋಗ್ಬಿಟ್ಟು ಅಲ್ಲೆ ನೃತ್ಯ ಮಾಡ್ಲಿಕ್ಕೆ ಶುರು ಮಾಡ್ಬಿಟ್ಟಾಗ ಎಲ್ಲರಿಗೂ ಒಂದು ಖುಷಿಯಾಗಿ ಅಲ್ಲಿರೋರ್ಗೆ ಒಂದು ಮನೋರಂಜನೆಯಾಗಿ ಸಿನಿಮಾ ಬಿಟ್ಟು, ನನ್ನ ನೃತ್ಯನೇ ನೋಡಕೆ ಶುರುಮಾಡಿದ್ರಂತೆ. ಎಷ್ಟು ಎಳದ್ರು ಮತ್ತೆ ವಾಪಾಸು ಅಲ್ಲಿಗೇ ಹೋಗ್ತಿದ್ದೆ. So ನಮ್ಮ ತಾಯಿಗೇನಾಯ್ತು ಅಂದ್ರೆ ಇವಳಿಗೆ ಇದರಲ್ಲಿ ಆಸಕ್ತಿ ಇದೆ. ಯಾಕೆ ಈ ಒಂದು ಕಲೆನಲ್ಲಿ ಮುಂದುವರಿಸಬಾರ್ದು. ಯಾವುದರಲ್ಲಿ ಆಸಕ್ತಿ ಇದೆಯೋ ಅದನ್ನೇ ನಾವು ಅವರಿಗೆ ಮಾಧ್ಯಮವಾಗಿ ಕೊಡಬೇಕೂಂತ ಅವರು ಅದನ್ನು ತೀರ್ಮಾನ ಮಾಡಿದ್ರು. ಆದರೆ ಇಲ್ಲಿ ನನ್ ತಂದೆ ಕಡೆ ಏನಾಯ್ತೂ ಅಂದ್ರೆ. ಹೆಣ್ಮಗಳಲ್ವೆ ಎಷ್ಟಾದ್ರೂ ಸಮಾಜದಲ್ಲಿ ಒಂದು ಹೆಣ್ಮಗು ಅಂದ್ರೆ ಅವರನ್ನು ನೋಡೋ ರೀತಿ ರಿವಾಜೇ

ಬೇರೆ ಇರುತ್ತೆ. ಅವಳು ನೃತ್ಯಕ್ಕೆ ಅಂತ ಹೋದ್ರೆ ಜನಾ ಬೇರೆ ತರಾ ಕಾಣೋಕೆ ಶುರು ಮಾಡ್ತಾರೆ. ಕುಲೀನ ಮನೆತನದವರು ಈ ನೃತ್ಯ ಮಾಡೋದು ಅಂದ್ರೆ ಅಷ್ಟು ಸರಿಕಾಣೋದಿಲ್ಲ. ಅದ್ರಿಂದ ಬೇಡ ಅನ್ನೋದು ಒಂದು ಅವರಲ್ಲಿ ಇತ್ತು. ಆದರೆ ಚಿಕ್ಕ ಹುಡುಗಿ ಏನೋ ಮಾಡ್ತಿರಲಿ ಅಂದು ಬಿಟ್ಟು ಅಷ್ಟೊಂದು ಗಮನ ಕೊಡ್ತಿರಲಿಲ್ಲ. ಆದರೆ ಇಲ್ಲಿ ನನ್ನ ತಾಯಿ ನನ್ನ ತಂದೆ ಇಲ್ಲ ಅವಳಿಗೆ ಯಾವುದರಲ್ಲಿ ಇಷ್ಟಾನೋ ಅದರಲ್ಲಿ ಬಿಡ್ತಿವಿ ಅಂದ್ರು. ನನಗೆ ಮೊದ್ಲಿಂದನೂ ನೃತ್ಯದ ಕಡೆಗೆ ಒಲವು ಜಾಸ್ತಿ ಇತ್ತು. ಬೇರೆ ಆಟಗಳಲ್ಲಿ ಒಲವು ಜಾಸ್ತಿ ಇರಲಿಲ್ಲ. ಈ ಮಕ್ಕಳು ಮನೆ ಮಾಡ್ಕೊಂಡು ಆಟ ಆಡೋದು, ಕಲ್ಲು ಮಣ್ಣು ಆಡು, ಇದರಲ್ಲಿಲ್ಲ. ಮೂರ್ಹೊತ್ತು ನೃತ್ಯ ನೃತ್ಯ ನೃತ್ಯ... ಇದನ್ನು ನೋಡಿದ ತಕ್ಷಣ ನನ್ ತಾಯಿ ಏನ್ ಮಾಡಿದ್ರೂ ಮೊದ್ಲು ನಾನೇ ಯಾಕೆ ಇವಳಿಗೆ ಹೇಳಿಕೊಡಬಾರ್ದು. ಅಂತ ನನ್ ತಾಯಿ ನೃತ್ಯ ಕಲಿತಿದ್ರಿಂದ, ನನ್ ತಾಯಿನೇ ಮೊದ್ಲು ನನಗೆ ಗುರುವಾಗಿ ನೃತ್ಯ ಶುರುಮಾಡಿದ್ರು. ಆದ್ರೂ ನಮ್ಮ ತಾಯಿಗೆ ಸಮಾಧಾನ ಇಲ್ಲ. ನಾನು ಎಷ್ಟೇ ಕಲಿತ್ರೂ ತಾಯಿ ಅನ್ನೊದು ಒಂದು ಬರುತ್ತೆ. ಬೇರೆ ಗುರುಗಳಲ್ಲೀನೆ ಇವಳಿಗೆ ಅದನ್ನ ಅಭ್ಯಾಸ ಮಾಡಿಸ್ಬೇಕು ಅಂತ ಹೇಳಿ ಹುಡುಕ್ತಾ ಇರೋ ಕಾಲದಲ್ಲಿ. ಅವಾಗ ಪ್ರಸಿದ್ಧ ಸಂಗೀತ ವಿದ್ವಾಂಸರು ಒಬ್ಬರಿದ್ರು ರಾಜೈಂಗಾರ್ ಅಂತ. 'ಜಗದೋದ್ಧಾರನಾ' ಹಾಡೋದರಲ್ಲಿ ಬಾಳ ಫೇಮಸ್ ಆಗಿದ್ರು. ಅವರ ಮಗಳು ಅಲಮೇಲಮ್ಮ ಅಂತ. ಅಲ್ಲಿ ಅವರು ನೃತ್ಯ ಶಾಲೆ ಓಪನ್ ಮಾಡಿದ್ರು. ನಮ್ಮ ಅರಸೀಕೆರೇನಲ್ಲಿ. ಆಗ ನಮ್ಮ ತಾಯಿ ಅಲ್ಲಿಗೆ ಕರ್ಕೊಂಡು ಹೋಗಿ ಸೇರಿಸಿದ್ರು.

ವಿಜಯಾ : ನೀವು ಹುಟ್ಟಿದ್ದು ಅರಸಿಕೇರೇನಾ?

ಉಷಾ : ಅರಸೀಕೆರೆನಲ್ಲೆ ನಾನು ಹುಟ್ಟಿದ್ದು. ಆಗ ಸೇರಿಸಿದ್ರು. ಆವಾಗ ಹಲವಾರು ಚಿಕ್ ಚಿಕ್ ಪುಟ್ಟಮಕ್ಕಳನ ತಂದೆ ತಾಯಿ ಏನೋ ಒಂದು ಇದಕ್ಕೆ ಸೇರಿಸಿದ್ರು. ಆಗ್ಲೂ ಅಂದ್ರೆ ನೃತ್ಯ ಅಂದ್ರೆ ಅಷ್ಟು ಒಳ್ಳೆ ಇಲ್ಲದಿದ್ದ ಕಾಲವೇ ಅದು. ಆದ್ರು ಅಲ್ಲಿ ಕಲಿತ ಮೇಲೆ ಏನಾಯ್ತು ಅಂದ್ರೆ. ಅವರು ಯಾವ್ದೊ ಕಾರಣಕ್ಕೆ ಊರುಬಿಟ್ಟು ಹೋದಾಗ ನಮ್ ತಾಯಿಗೆ ಕಲಿತದ್ದು ಸಾಕಾಗಲಿಲ್ಲ ಅಂತಂದು ಮತ್ತೆ ಗುರುಗಳ್ನ ಹುಡುಕುತಿದ್ರು. ನಮ್ ತಾಯಿ ಹುಟ್ಟಿದ್ದು ಕೇರಳದ ಕಲ್ಲಿಕೋಟೆನಲ್ಲಿ. ಅಲ್ಲಿ ಒಂದ್ಸಲ ಹೋದಾಗ ನನ್ ತಾಯಿಗೆ ಒಬ್ರು ಸ್ನೇಹಿತೆ ಇದ್ರು. ಅವರು ದೊಡ್ಡ ಡಾನ್ಸ್ ಟ್ರೂಪ್ ನಡಸಿತಿದ್ರು. ಅದು ನಮ್ ತಾಯಿಗೆ ಗೊತ್ತಾದಾಗ ಅವರ ಡಾನ್ಸ್ ಟ್ರೂಪ್ ನ ನೋಡಾಕ ಹೋದ್ರು. ಅವಾಗ ನೆಹರೂ ಅವರದು 'ಡಿಸ್ಕವರಿ ಆಫ್ ಇಂಡಿಯಾ'ದ್ದು ಡ್ಯಾನ್ಸ್ ಪ್ರೋಗ್ರಾಮ್ ಮಾಡ್ತಯಿದ್ರು. ಯಾವುದೋ ಡೆಲ್ಲಿ ಪ್ರೋಗ್ರಾಂಗೆ ಹೋಗ್ಬೇಕು ಅಂತ. ಆ ಕಾರ್ಯಕ್ರಮ ನೋಡ್ತೀರಬೇಕಾದ್ರೆ ಅಲ್ಲಿ ಒಬ್ರು ಒಳ್ಳೆ ಡಾನ್ಸ್ ಟೀಚರ್ ನ ನೋಡಿದ್ರು ನಮ್ ತಾಯಿ. ಆಮೇಲೆ ಅವರಿಗನಿಸ್ತು ಯಾಕ ಇವರ್ನ ಊರಿಗೆ ಕರ್ಕೊಂಡು ಹೋಗಿ ನಮ್ಮ ಮಗಳಿಗೆ ಹೇಳ್ಸೋ ಜೊತೇನಲ್ಲಿ ಬೇರೆ ಮಕ್ಕಳಿಗೂ ಡಾನ್ಸ್ ಹೇಳಿ ಕೋಡೋಕೆ ಒಂದು ಶಾಲೇನ ಓಪನ್

ಮಾಡಿಬಹುದಲ್ಲ ಅಂತ. ನನ್ನ ತಾಯಿ ಅವರ ಫ್ರೆಂಡ್ ಗೆ ಕೇಳಿದ್ರು. ಅದಕ್ಕ ಅವರಂದ್ರು ಇಲ್ಲ ಅವರು ನಮ್ಮ ಕಂಪನಿಯಲ್ಲೆ ಕೆಲಸ ಮಾಡ್ತಿದಾರೆ ಬರ್ತಾರೋ ಇಲ್ಲ ಗೊತ್ತಿಲ್ಲ ನನಗೆ. ನೋಡೋಣ ಬೇರೆ ಯಾರ್ನಾದ್ರೂ ಕಳ್ಸಿಕೊಡ್ತಿನಿ ಅಂತ. But ಅವರು ತಕ್ಷಣಕ್ಕೆ ಒಪ್ಪಕೊಂಡ್ರು. ಕಣ್ಣನ್ ಮಾರನ್ ಅಂತ ಅವರ ಹೆಸರು. ಈಗ ಅವರು ಹಾಸನದಲ್ಲಿದ್ದಾರೆ. ಗುರುಗಳೇನೋ ಬಂದುಬಿಟ್ರು. ಬಂದ್ರೇನಾಯ್ತು. ಆಮೇಲೆ ನಮ್ಮ ತಾಯಿಗೆ ಸ್ವಲ್ಪ ಕಷ್ಟ ಆಗ್ಲಿಕ್ಕೆ ಶುರುವಾಗಿಬಿಡ್ತು. ಏನಂದ್ರೆ ಒಂದು ನೃತ್ಯ ಶಾಲೆ ಮಾಡ್ಬೇಕದ್ರೆ ಮಕ್ಕಳನ್ನ ಕಲೆ ಹಾಕೋದು ಅಂದ್ರೆ ಬಾಳ ಕಷ್ಟ. ಪ್ರತಿಯೊಂದು ಮನೆ ಮನೆ ಬಾಗಿಲಿಗೂ ನಮ್ಮ ತಾಯಿ ಹೋಗೋಕೆ ಶುರು ಮಾಡಿದ್ರು. ನೃತ್ಯ ಗುರುಗಳನ್ನು ಕೇರಳದಿಂದ ಕರ್ಸಿದೀವಿ. ನಿಮ್ಮ ಮಗಳನ್ನ ಕಳ್ಸಿ, ನಿಮ್ ಮಕ್ಕಳನ್ನು ಸೇರಿಸಿ. ಅಯ್ಯೋ ಬೇಡ ಬೇಡ. ಸೇರ್ಸಲ್ಲ. ಅದು ಕುಣಿಯೋದು ಅಂದ್ರೆ ಒಂತರ ಕೆಟ್ಟದಾಗಿ ನೋಡ್ತಾರೆ. ಆಮೇಲೆ ನಮ್ಮ ಮನೆಗಳಲ್ಲಿ ಜನಾ ಬರಕೂ ಹಿಂದೂ ಮುಂದೂ ನೋಡ್ತಾರೆ. ಹೆಣ್ಮಗಳೂ ಅಲ್ವ. ಅಡಿಗೆ ಮಾಡು ಮದುವೆ ಮಾಡು. ಅಷ್ಟರಲ್ಲೆ ಸೀಮಿತವಾಗಿಡಬೇಕು. ನಾವು ಓದ್ಸದೂ ಕೂಡ ಜಾಸ್ತಿ ಬಿಡಲ್ಲ. ಏನೋ ತಕ್ಕ ಮಟ್ಟಿಗೆ ಓದು ಬರಹ. ಬರೀಯೋದಕ್ಕೇನು ಬೇಕೋ ಅಷ್ಟೆ ಶಾಲೆಗೂ ಕಳಿಸೋರು. ಬೇಡ ಬೇಡ. ಇಲ್ಲ ನೀವು ಕಳ್ಸಿ. ಅದಕ್ಕ ನಾನು ಜವಾಬ್ದಾರಿ. ನಿಮ್ಮ ಮಕ್ಕಳಿಗೆ ಯಾವ ಒಂದು ಕಳಂಕ ಬರದಂಗೆ ನೋಡ್ಕೋಳ್ತೀನಿ ಅಂತ ಹೇಳಿ ಮನೆ ಮನೆಗೆ ಹೋಗಿ ಪ್ರಚಾರ ಮಾಡಿ ಕಷ್ಟಪಟ್ಟು ಸೇರಿಸಿದ್ರು. ಸೇರ್ಸೋಕೆ ಮುಂಚೆ ನಂದೇ ಒಂದು ಕಾರ್ಯಕ್ರಮನ ಅಲ್ಲಿ. ಊರ್ನಲ್ಲಿ ಇಟ್ರು.

ವಿಜಯಾ : ನಿಮ್ ತಾಯಿ ಅಷ್ಟು ಓಡಾಟ ಮಾಡಕೆ ಮನೆ ವಾತಾವರಣ....

ಉಷಾ : ಅಂದ್ರೆ ನಮ್ ತಂದೆದು ಸಹಕಾರ ಬಹಳ ಇತ್ತು. ಏಕಂದ್ರೆ ಅವರ್ದೂ ಈ ಸಂಗೀತ ನೃತ್ಯ ಮಾಧ್ಯಮ ಅಲ್ದಿದ್ರೂ ಕೂಡ ಒಂದು ಬೇರೆ ಕ್ರೀಡೆಗಳಲ್ಲೆಲ್ಲ ಇದ್ರಲ್ಲ. ನಮ್ ತಂದೆ ಅದಕ್ಕೆ ಒಪ್ಪಿಕೊಂಡ್ರು. ಮಾಡು ಪರವಾಗಿಲ್ಲ. ಒಳ್ಳೆ ರೀತಿಯಲ್ಲಿ ಮಾಡು. ನಮ್ ಜನಾನು ಸ್ವಲ್ಪ ಕಣ್ ತೆರೀಲಿ. ಹೆಣ್ಮಕ್ಕಳು ಬರೀ ಅಡಿಗೆ ಮಾಡೋದು ಆಮೇಲೆ ನಾಳೆ ಮದುವೆ ಮಾಡಿಕೊಂಡು ಹೋದ್ರೆ ಅಷ್ಟೆ ಅಂತ ಇರಬಾರ್ದು. ಸ್ವಲ್ಪ ನಮ್ಮ ಹೆಣ್ಮಕ್ಕಳು ಮುಂದುವರಿಬೇಕು ಪರವಾಗಿಲ್ಲ ಅಂತ ಅಂದ್ಬಿಟ್ರು. ನಮ್ ತಂದೆದೂ ಸಪೋರ್ಟು ಇತ್ತು. ಅದಕ್ಕೆ ನಮ್ ತಾಯಿ ಎಲ್ಲ ಕಡೆಗೂ ಹೋಗಿದ್ದು. ಆಮೇಲೆ ನಂದೆ ಒಂದು ಕಾರ್ಯಕ್ರಮ ಇಟ್ಟರೆ ಮೊದ್ಲು ನಾವೇ ನೃತ್ಯ ಮಾಡಿಬಿಟ್ರೆ, ಬೇರೆಯವರಿಗೆ ಒಂದು ಆಸ್ಪದ, ಕೆಟ್ಟದಾಗಿ ಮಾತಾಡಕೇ ಇರಲ್ವಲ್ಲ. ಕುಲೀನ ಮನೆತನದವರು ಡಾನ್ಸ್ ಮಾಡೋದು ಅಂದ್ರೆ ಸ್ವಲ್ಪ ತೊಂದ್ರೆನೆ ಅಲ್ವಾ ಅಂತ ಹೇಳಿ ಆಗ ನನ್ ತಾಯಿನೆ ನನ್ ಕೈಲಿ ಒಂದು ಕಾರ್ಯಕ್ರಮ ಮಾಡ್ಸಿದ್ರು. ಆವಾಗ ಇಲ್ಲಿ ಪ್ರಸಿದ್ಧ ನೇತ್ರ ತಜ್ಞರಿದ್ರಲ್ಲ ಡಾ.ಎಂ.ಸಿ.ಮೋದಿ ಅವರ್ದೊಂದು ಕಾರ್ಯಕ್ರಮ ಇತ್ತಿಲ್ಲ. ಆಪರೇಶನ್ ಕಣ್ಣಿಂದು ಮಾಡೋದು ಹ್ಯಾಗೆ ಅಂತ. ಆ ಒಂದು ಫಂಕ್ಷನ್ ನಲ್ಲಿ ಇದೊಂದು ಆಡ್ ಮಾಡಿದ್ರು.

ನಾನು ನೃತ್ಯ ಪ್ರದರ್ಶನ ಕೊಟ್ಟಾಗ, ಆ ಕ್ಷಣಕ್ಕೆ ಅವರಿಗೆಲ್ಲ ಖುಷಿಯಾಗಿ ಹೋಗಿಬಿಡ್ತು. ಹೌದು ನಮ್ಮ ಮಕ್ಕಳು ಹೀಗೆ ಮಾಡಿದ್ರೆ ಎಷ್ಟು ಜನ ಕೊಂಡಾಡ್ತಾರೆ. ಎಷ್ಟು ಬಕ್ಷೀಸುಗಳು ಸಿಗುತ್ತೆ ಅಲ್ವಾ ಅಂತ ಅಂದ್ಬಿಟ್ಟು ಆಮೇಲೆ ಒಬ್ರಾಗಿ ಒಬ್ರು ಆಯಿತು ಮಾಡ್ಲಿ ನಮ್ ಮಕ್ಕಳು ಅಂತ ಹೇಳಿ ನೃತ್ಯ ಮಾಡೋಕೆ ಒಪ್ಪಿಕೊಂಡ್ರು. ಶಾಲೆ ನಡೆಸೋಕೆ ಶುರುಮಾಡಿ ಎಲ್ಲ ಆಗಿ ದೊಡ್ಡ ಪ್ರಮಾಣದಲ್ಲಿ ಆಯಿತು.

ವಿಜಯ್ : ನಿಮ್ ಮನೆಯೊಳಗೆ ಶಾಲೆ ಮಾಡಿದಿರಾ?

ಉಷಾ : ಹುಂ. ಮನೆಯೊಳಗೆ. ಅವಾಗಂದ್ರೆ ಮನೇಲಿ ಬೇಕಾದಷ್ಟು ಅನುಕೂಲವಿತ್ತು. ಜಾಗ ಇತ್ತು. ನಾವಿದ್ದದ್ದು ಬಾಡಿಗೆ ಮನೆಯಾದ್ರೂ ಕೂಡ ಜಾಗ ಅನುಕೂಲವಾಗಿತ್ತು. ನಮ್ ಮಾಸ್ಟರ್‌ನ ಮನೇಲೆ ಇಟ್ ಬಿಟ್ಟದ್ರು. ಅವರಿಗೊಂದು ರೂಂ ಕೊಟ್ಟುಬಿಟ್ಟಿದ್ರು. ಅವರಿಗೆ ಭಾಷೆ ಪ್ರಾಬ್ಲೆಂ ಇತ್ತು. ಕನ್ನಡ ಬರ್ತಾ ಇರ್ಲಿಲ್ಲ. ಮಲೆಯಾಳಿ ಒಂದೇನೆ. ಅದ್ರಿಂದ ಅವರೇನು ಮಾಡಿದ್ರು ನಮ್ ಮನೇಲೆ ಒಂದು ರೂಮ್‌ಲ್ಲೆ ಇದ್ಕೊಬಿಟ್ಟಿದ್ರು. ಸಂಜೆ ಹೊತ್ತು ಕ್ಲಾಸ್‌ಸ್ ಮಾಡೋರು. ನನಗದರಲ್ಲಿ ಸ್ವಲ್ಪ ಸ್ಪೆಶಲ್. ನಮ್ ತಾಯಿನೆ ಕರ್ಕೊಂಬಂದು ಶಾಲೆನ ಓಪನ್ ಮಾಡಿಸಿದ್ದಕ್ಕೆ ನನಗೆ ನೃತ್ಯ ಕಲಿಕೆ ಅಂದು ಹೆಚ್ಚಿನ ಗಮನಕೊಟ್ಟು ಪ್ರಾಕ್ಟಿಸ್ ಮಾಡ್ಸೋರು. ನಂತರ ಏನಾಯಿತು ಅಂದ್ರೆ ಯಾವಾಗ ಈ ನೃತ್ಯ ಶಾಲೆ ಅಂತ ಆಗೋಕೆ ಶುರುವಾಯಿತು. ನಮ್ಮೂರುಗಳಲ್ಲಿ ಈ ಜಾತ್ರೆ ಕಾರ್ಯಕ್ರಮಗಳು, ಗಣಪತಿ ಹಬ್ಬ, ನವರಾತ್ರಿ ಹಬ್ಬ- ಈ ತರ ಎಲ್ಲಾ ಬಂದ್ರೆ ಅವಾಗ ಊರಿಂದ ಊರ್ನೋರು ಬಂದು ಇಲ್ಲೊಂದು ನೃತ್ಯ ಶಾಲೆ ನಡೆಸ್ತಾಯಿದಾರಂತೆ, ನೋಡೋಣಾಂತ ಪ್ರೋಗ್ರಾಂಗಳನ್ನು ಫಿಕ್ಸ್ ಮಾಡೋಕೆ ಬರೋರು. So ಅಂಗಾಗಿ ನಾವೆಲ್ಲ ಪ್ರೊಂಗಾಂ ಕೊಡ್ತಾ ಕೊಡ್ತಾ ಕೊಡ್ತಾ ಊರ್ನಲ್ಲಿ ಇದೊಂದು ಒಳ್ಳೆ ಪ್ರಚಾರ ಆಗೋಕೆ ಶುರುವಾಯಿತು. ಒಂದು ಸಲ ಶಾಲೆಯಲ್ಲಿ ಡಾನ್ಸ್ ಕಾರ್ಯಕ್ರಮ ಕೊಡು ಅಂತ ಗುರುಗಳು ಹೇಳಿದರು. ಹಾಡು ವಾದ್ಯದವರೆಲ್ಲ ಬೇಕಲ್ಲ ಸಾರ್ ಅಂದಾಗ. ಅದೇನಮ್ಮಾ ನೀನೇ ಮಾಡ್ಕೊಂಡು ಮಾಡಮ್ಮ ಒಂದು. ನಮ್ಮ ಊರು ಹುಡುಗಿ ನೀನು ಮಾಡ್ಲೆ ಬೇಕು ಅಂದಾಗ. ಅವರೂ ಗುರು ಸ್ಥಾನದಲ್ಲಿದ್ರು. ವಿದ್ಯೆ ಬರೀಲಿಕ್ಕೆ ಓದ್ಲಿಕ್ಕೆ ಹೇಳ್ಕೊಟ್ಟ ಗುರುಗಳು ಅಲ್ವಾ.

ವಿಜಯಾ : ಹುಂ

ಉಷಾ : ನಾನು ಹೋಗಿ ನಮ್ ಡಾನ್ಸ್ ಗುರುಗಳಿಗೆ ಕೇಳ್ದೆ. ಅವರು ಯಾವುದಾದ್ರು ಒಂದು ಸಂದರ್ಭ ಕಾಯ್ತಾಯಿದ್ರು. ಅವಾಗ ಇಲ್ಲ ಇಲ್ಲ. ಸ್ಕೂಲಲ್ಲೆ ನೀನು ಡಾನ್ಸ್ ಗೀನ್ಸ್ ಮಾಡಬಾರ್ದು. ಅದಕ್ಕ ನಾನು ಒಪ್ಪಿಕೊಳ್ಳಲ್ಲ ಅಂದ್ರು. ಆಗ ನಾನು ಅಳಾಕ ಶುರುಮಾಡ್ದೆ. ನಾಳೆ ಬೆಳಿಗ್ಗೆ ಸ್ಕೂಲ್‌ಗೆ ಹೋದ್ರೆ ಮೇಸ್ಟ್ರಿಗೆ ಏನು ಜವಾಬು ಹೇಳ್ಲಿ, ಅವರೂ ಗುರುಗಳೇ ಅಲ್ವಾ ಅಂದಾಗ. ಇಲ್ಲ ಇಲ್ಲ. ಮಾಡ್ಲೆ ಕೂಡ್ದು ಅಂದ್ರೆ ನೀ ಮಾಡ್ಲೆ ಕೂಡ್ದು. ನೀನು ಮಾಡಿದ್ರೆ ನಿನ್ನ ನಾನು ಕ್ಲಾಸ್‌ಗೆ ಸೇರ್ಸಲ್ಲ.

ವಿಜಯಾ : ಯಾಕ್ ಮಾಡಬಾರ್ದು ಅಂತ?

ಉಷಾ : ಇಲ್ಲಲ್ಲ ಅದೇನು ಸ್ಕೂಲಲ್ಲಿ ಯಾಕ್ ಮಾಡಬೇಕು. ಅದಕ್ಕೆ ವೇದಿಕೆನೇ ಬೇರೆ ಇದೆ. ಅಂದ್ರೆ ಮಾಡ್ಬಾರ್ದು ಅಂತೇನಿಲ್ಲ. ಅಂದ್ರೆ ನನಗೆ ಈ ತರದ ಕಟ್ಟಪ್ಪಣೆ ಹಾಕಿದ್ರೆ. ನಾನು ಹೋಗ್ಲೆ ಬೇಕಾಗುತ್ತೆ, ಹೋಗೆ ಹೋಗ್ತೀನಿ, ಅವಾಗ ನನಗೆ ಕ್ಲಾಸ್ ಗೆ ಬರೋದನ್ನ ನಿಲ್ಸಿಬಹುದಲ್ಲ ಅಂತ ಅದಕ್ಕೊಂದು ಹೊಂಚು ಹಾಕಿದ್ರು. ಆಮೇಲೆ ನನ್ನ ತಾಯಿ ಹೋಗಿ ನೀವು ಹೆಂಗೆ ನೃತ್ಯ ತರಗತಿಯಲ್ಲಿ ಅವಳ್ನ ತರಬೇತಿ ಮಾಡ್ತಿದಿರೋ ಹಾಗೆ ಅವರು ವಿದ್ಯಾಭ್ಯಾಸ ಹೇಳಿಕೊಟ್ಟ ಗುರುಗಳು. ಇಲ್ಲ ಅನ್ನಕಾಗಲ್ಲ. ನೀವು ಆತರ ಹಠ ಮಾಡ್ಬೇಡಿ ಅಂದಾಗ. ಇಲ್ಲ ಇಲ್ಲ ನಾವೆಲ್ಲ ಹಾಡಕ ಬರಲ್ಲ. ನೀವೇ ಬೇಕಾದರೆ ಹಾಡಿ ನಿಮ್ ಮಗಳಿಗೆ ನೃತ್ಯ ಕಾರ್ಯಕ್ರಮನ ಮಾಡ್ಸಿ. ಇವಳಿಗೆ ಇನ್ನು ಒಳ್ಳೆ ಗುರುಗಳು ಸಿಕ್ಕಿದ್ರೆ ಇನ್ನೂ ಮುಂದುವರಿಬಹುದೇನೋ ಅಂತ ಅಂದ್ಬಿಟ್ರು. ಆದರೆ ನನ್ ತಾಯಿ ಇಲ್ಲ ಇಲ್ಲ ಹೆಣ್ಮಗಳಲ್ವಾ ಬೇರೆ ಊರಿಗೆ ಎಲ್ಲೂ ಕರ್ಕೊಂಡು ಹೋಗಿ ಬಿಡ್ಲಿಕ್ಕೆ ತಯಾರಿಲ್ಲ. ಏನಿದ್ರೂ ಇಲ್ಲೆ ಕಲೀಲಿ ಅವಳು. ಹೆಣ್ಮಗಳಲ್ವ ಜವಾಬ್ದಾರಿ ಬೇಡ ಅಂತ ಹೇಳಿಬಿಟ್ಟು. ಆದರೆ ಬಹುಶಃ ಅಲ್ಲೆ ಕಲಿಬೇಕು ಅಂತ ಇರ್ಲಿಲ್ವೇನೋ? ದೇವರ ಅನುಗ್ರಹವೇನೋ ಗೊತ್ತಿಲ್ಲ. ಕೊನೆ ಕೊನೆಗೆ ಯಾವಾಗ ಸ್ವಲ್ಪ ಒಳ್ಳೆ ಹೆಸರು ಬರೋಕೆ ಶುರುವಾಯಿತ್ತೊ, ನನ್ ಕಾರ್ಯಕ್ರಮನೇ ಬೇಕು ಅಂತ ಜನ ಶುರು ಮಾಡಿದ್ರೋ, ಬೇರೆ ತಂದೆ ತಾಯಿ, ಮಕ್ಕಳಿಗೆ ಸ್ವಲ್ಪ ಅದು ಹೊಟ್ಟೆಕಿಚ್ಚು ಅನ್ನೊದು ಬರುತ್ತಲ್ಲ. ಶುರುವಾಗಿ ಹೋಯ್ತು. ಇಲ್ಲ ಈ ಹುಡುಗಿ ಜೊತೇಲಿದ್ರೆ, ನಮ್ ಮಕ್ಕಳಿಗೆ ಮುಂದೆ ಛಾನ್ಸ್ ಸಿಗಲ್ಲ ಅಂದ್ಬಿಟ್ಟು, ಆ ಮಾಸ್ಟರ್ ಗೆ ಸ್ವಲ್ಪ ನಮ್ಮ ಬಗ್ಗೆ ವಿರೋಧ ಬರುವಂಗೆ ನಡಕೊಳ್ಳೊಕೆ ಶುರುಮಾಡಿದ್ರು. ಸರಿ ಅವ್ರು ಬುದ್ದಿನೂ ಕೆಡ್ಸಿ ಕೊನೆಗೆ ಆ ಮಾಸ್ರು ನನಗೆ ನೃತ್ಯ ಅಭ್ಯಾಸ ಮಾಡಿಸಲೇಬಾರ್ದು ಅನ್ನೊ ಮಟ್ಟಕ್ಕೆ ತಂದಿಟ್ಟುಬಿಟ್ರು. ನನ್ ಕಲೆ ಅಲ್ಲಿಗೆ ನಿಂತು ಹೊಯ್ತು.

ವಿಜಯಾ : ಏನಾದ್ರು ಒಂದು ಇನ್ಸಿಡೆಂಟ್ ಇದೆಯೋ?

ಉಷಾ : ಆ ಇನ್ಸಿಡೆಂಟ್ ಏನಂದ್ರೆ ಇಷ್ಟು. ಇನ್ನೇನಿಲ್ಲ. ನಮ್ಮ ಶಾಲೆನಲ್ಲಿ ಓದ್ಬೇಕಾದ್ರೆ ಪ್ರತಿ ಗುರುವಾರ ಅಲ್ಲಿ ಸಾಯಿಬಾಬ ಪೂಜೆ, ಸರಸ್ವತಿ ಪೂಜೆ ಇವೆಲ್ಲ ಮಾಡ್ತೋರು. ಒಂದ್ಸಲ ದೊಡ್ಡ ಪ್ರಮಾಣದಲ್ಲಿ ಪೂಜೆ ಆದಾಗ, ಶಾಲೆಯ ಉಪಾಧ್ಯಾಯರೆಲ್ಲ ಸೇರಿಬಿಟ್ಟು, ನೀನಿಷ್ಟೊಂದು ನೃತ್ಯ ಎಲ್ಲ ಮಾಡ್ತಿಯಲ್ಲಮ್ಮಾ ಒಂದು ಕಾರ್ಯಕ್ರಮ ಕೊಡು ಅಂದ್ರು. ನಾನು ಕಾರ್ಯಕ್ರಮ ಕೊಡೋಕೆ ಒಪ್ಪಿದೆ. ಆದರೆ ಗುರುಗಳು ಈ ಕಾರ್ಯಕ್ರಮ ಮಾಡ್ಸಿ ಬೇಕಾದ್ರೆ. ನಾವು ಬರಲ್ಲ ಅಂದ್ರು. ಅಂದ್ರೆ ದೇವರ ದಯೆಯಿಂದ ನಮ್ ತಾಯಿಗೆ ಒಳ್ಳೆ ಹಾಡೋ ನಾಲೆಡ್ಜ್ ಇತ್ತು. ನಮ್ ತಾಯಿ ಉತ್ತರಾದಿ ಅದೆಲ್ಲ ಹಾಡೋರು. ಅದರಿಂದ ಪರವಾಗಿಲ್ಲ ಅವರೂ ವಿದ್ಯೆ ಹೇಳಿಕೊಟ್ಟ ಗುರುಗಳು. ಇಲ್ಲ

ಅನ್ನಬಾರ್ದು ಅಂತ ಹೇಳಿ. ಕರ್ಕೊಂಡು ಹೋಗಿ ಆ ಕಾರ್ಯಕ್ರಮದಲ್ಲಿ ನನ್ ತಾಯಿನೇ ಹಾಡಿ. ಬೇರೆ ಒಬ್ರು ತಬಲಾದವರ್ನ ಕರೆಸಿ ಕಾರ್ಯಕ್ರಮ ಕೊಡ್ಸಿದ್ರು. ಅದನ್ನೆ ಕಾಯ್ತಿದ್ರು ಕೆಲವರು. ಹೋಗಿ ಹೇಳಿದ್ರು. ನೋಡಿ ನೋಡಿ ನಿಮ್ಮ ಪರ್ಮಿಶನ್ ಇಲ್ಲ. ನೀವು ಮಾಡ್ಬೇಡ ಅಂದ್ರೂ ಅಲ್ಲಿ ಹೋಗಿ ಸ್ಕೂಲಲ್ಲಿ ಡಾನ್ಸ್ ಮಾಡಿದಾಳೆ. ನೀವು ಈಗ ಏನ್ಮಾಡ್ತಿರಿ ಅಂದಾಗ. ನಾನು ಸೇರ್ಸಲ್ಲ ಅಂದ್ರು. ಮಾರನೆ ದಿವಸ ಸ್ಕೂಲ್‌ಗೆ ಹೋದೆ ನಾನು. ಡಾನ್ಸ್ ಕ್ಲಾಸ್‌ಗೆ. ಅಷ್ಟರಲ್ಲಿ, ಅಷ್ಟೊತ್ತಿಗೆ ಗುರುಗಳು ನಮ್ ಮನೆ ಬಿಟ್ಟಬಿಟ್ಟಿದ್ರು ಆಗ್ಲೆ. ಊರ್ನವರೆಲ್ಲ ಸೇರ್ಕೊಂಡು ಬೇರೊಂದು ಮನೆ ಮಾಡಿಕೊಟ್ಟಿದ್ರು ಅವರಿಗೆ. ಮಾರನೆ ದಿವಸ ಕ್ಲಾಸ್‌ಗೆ ಹೋದಾಗ ಅವರು ನನಗಂದ್ರು ನೀನು ಕ್ಲಾಸ್ ಒಳಗಡೆ ಬರುಕೂಡ್ದು ನನ್ ಪರ್ಮಿಶನ್ ಇಲ್ದೆ, ಡಾನ್ಸ್ ಮಾಡ್ಬೇಡ ಅಂದ್ರೂನೂ ಹೋಗಿ ಸ್ಕೂಲಲ್ಲಿ ಫಂಕ್ಶನ್ ಗೆಲ್ಲ ಹೋಗಿ ಮಾಡ್ಬಿಟ್ಟು ಬಂದಿದಿಯಾ. ನಾಳೆ ಎಲ್ಲಿಬೇಕಾದ್ರೂ ಕೇಳಿದ್ರೆ, ಜಾತ್ರೆ ಜಂಗುಳಿಯಲ್ಲಿ ಮಾಡ್ಕೊಂಡು ಬರ್ತಿಯಾ. ನಿನಗೇನು ನಾಚ್ಕೆ ಗಿಚ್ಕೆ ಏನಿಲ್ಲಾ, ಕಲೆನಾ ಆರಾಧನೆ ಮಾಡೋಕೆ ಬರಲ್ಲ ನಿನಗೆ ಹಂಗೆ ಹಿಂಗೆ ಅಂತ ಬೈಲಿಕೆ ಶುರು ಮಾಡಿದ್ರು. ನೀನು ಬರ್ಬೇಡ ಕ್ಲಾಸ್ ಗೆ ಅಂದ್ರು. ನಿನ್ನ ಅಪ್ಪನಿಗೆ ಅಮ್ಮನಿಗೆ ಹೇಳಿಬಿಟ್ಟು, ತುಂಬಾ ಜಾಸ್ತಿ ಸಂಬಳ ಕೊಡೊಂತ ಡಾನ್ಸ್ ಟೀಚರ್ ನ ಮನೇಲಿಟ್ಕೊಂಡು ಕಲಿತ್ಕೊ ಹೋಗು ಅಂತ ಹೇಳಿ ಬರಬೇಡ ಇಲ್ಲಿ. ಇನ್ಮೇಲೆ ನಿನಗೆ ಪಾಠ ಮಾಡಲ್ಲ ಅಂದ್ರು. ನಾನು ಮನೆಗೆ ಹೋಗಿ ಹೇಳಿದಾಗ ನನ್ ತಾಯಿ ನಂಬಲಿಲ್ಲ. ಏಕೆಂದರೆ ಇವಳೇನೊ ಮಾಸ್ಟ್ರ ಹೊಡಿತಾರೆ ಬೈತಾರೆ ಅಂತ ಭಯಕ್ಕೆ ಸುಳ್ಳು ಹೇಳಿದ್ದಾಳೆ. ಮಕ್ಕಳು ಮಾತು ನಂಬಬಾರದು ಅಂತ ನನ್ ತಾಯಿನೇ ನನ್ನ ಕರ್ಕೊಂಡು ಹೋದ್ರು. ಅವಾಗ ಅವರು ಇಲ್ಲ ಇಲ್ಲ ಅವಳು ಹೇಳಿದ್ದು ನಿಜ. ಇನ್ಮೇಲೆ ನಿಮ್ ಮಗಳು ಬರಬಾರ್ದು. ನಿಮ್ ಮಗಳೇನಾದ್ರು ನನ್ ಡಾನ್ಸ್ ಕ್ಲಾಸ್‌ಗೆ ಬಂದ್ರೆ ಬೀಗ ಬಿದ್ಬಿಡುತ್ತೆ ಇಲ್ಲಿ. ಎಲ್ಲ ಪೇರೆಂಟ್ಸ್ ಹೇಳಿದಾರೆ. ನಿಮ್ ಮಗಳು ಡಾನ್ಸ್ ಕ್ಲಾಸ್ ಗೆ ಸೇರ್ಸಿದ್ರೆ, ಇಷ್ಟು ಜನ ಮಕ್ಕಳು ನಾವು ಕ್ಲಾಸ್‌ಗೆ ಬರಲ್ಲ ಅಂತ. ಆಗ ನಮ್ ತಾಯಿಗೆ ಸ್ವಲ್ಪ ವ್ಯಥೆ ಯಾಯಿತು. ನಾನೇ ಕರ್ಕೊಂಡು ಬಂದು ನಿಮಗೆ ಒಂದು ಜೀವನಕ್ಕೆ ಮಾರ್ಗಮಾಡಿಕೊಟ್ಟಿದ್ದು, ನನ್ ಮಗಳು ಬಂದು ನಿಮ್ ಕ್ಲಾಸ್‌ಗೆ ಬೀಗ ಬೀಳೋ ವಂತ ಪರಿಸ್ಥಿತಿ ಬಂದ್ರೆ, ಆ ಪರಿಸ್ಥಿತಿ ಬರೋದು ಬೇಡ. ನೋಡೋಣ ನನ್ ಮಗಳ ಹಣೇಬರಹದಲ್ಲಿ ಅವಳು ಕಲೆನಲ್ಲಿ ಮುಂದುವರೀಬೇಕು ಅಂತ ಇದ್ರೆ ಮುಂದುವರಿತಾಳೆ ಇಲ್ಲಾಂದ್ರೆ ಇಲ್ಲ ಬಿಡಿ ಅಂತ ಬಂದಬಿಟ್ರು. ನಮ್ ತಾಯಿಗೆ ಮನೆಗೆ ಬಂದ ಮೇಲೆ ಬಾಳ ಯೋಚನೆಯಾಯಿತು. ಏನ್ಮಾಡದಪಾ ಈಗ. ಇನ್ನು ಮುಂದೆ ನನ್ ಮಗಳೂದು ನೃತ್ಯ ಅಭ್ಯಾಸ ನಿಂತು ಹೋದ್ರೆ ನೋಡಿದ್ದೋರಿಗೆ ಒಂತರ ಅವಮಾನವಾಗುತ್ತೆ, ಏನೊಂದ್ರೆ ಅದೆ Same time ಅವರಿಗೆ ಒಂತರಾ ಹಟ ಬಂದ್ಬಿಡ್ತು. ಇಲ್ಲ ಇದರಲ್ಲಿ ನನ್ ಮಗಳನ್ನ ಈ ನೃತ್ಯ ಕಲೆನಲ್ಲಿ ಮುಂದೆ ತರಲೇಬೇಕು. ಒಳ್ಳೆ ತರಬೇತಿ ಮಾಡಿಸಲೇ ಬೇಕು. ಅಂತಹೇಳಿ ಅವರಿಗೆ ಅದೊಂದು

ಮಾನ ಕಾಪಾಡಿಕೋವಂತ ಪರಿಸ್ಥಿತಿ ಬಂದುಬಿಡ್ತು. ಒಂದು ದಿವಸ ಅಂಗಡಿಗೆ ಬಟ್ಟೆ ತರಬೇಕು ಅಂತ ಹೋದಾಗ ಒಂದು ಮಲೆಯಾಳಿ ಪೇಪರನಲ್ಲಿ ಬಟ್ಟೆ ಪ್ಯಾಕೆಟ್ ಮಾಡಿಕೊಟ್ಟಿದ್ದ ಅವನು. ಅದೇನುಕೋ ಹಿಂಗೆ ತೆಗೆದಾಗ ಅದರಲ್ಲಿ ಒಂದು ಅಡ್ವೆಟೈಸ್ ಮೆಂಟ್ ಇತ್ತು. ಕೇರಳ ಕಲಾ ಮಂಡಳಂ ನಲ್ಲಿ ಹೀಗೆ ಗುರುಕುಲ ಅಭ್ಯಾಸ ಪದ್ಧತಿಯಲ್ಲಿ ಮಕ್ಕಳನ್ನು ನಾವು ತಗೋತಯಿದೀವಿ. ಯಾರು ಬೇಕಾದ್ರು ಅಪ್ಲೆ ಮಾಡಬಹುದು ಅಂತ. ಅದಕ್ಕೆ Last Date ಇನ್ನು ಮೂರೇ ದಿವಸ. ನಮ್ ತಾಯಿ ಬೇಗ ಬೇಗನೆ ಬರೆದು ಅಪ್ಲಿಕೇಶನ್ ಹಾಕಿದ್ರು. ಹಾಕಿದ್ರೆ, ಕರೆಕ್ಟಾಗಿ ನನಗೆ ಇಂಟರ್‌ವ್ಯೂ ಬಂತು. ಅವಾಗ ನಮ್ಮ ಮನೆಯಲ್ಲಿ ಬಹಳ ಕಷ್ಟ ಅಂದ್ರೆ, ಒಂದು ಹೊತ್ತು ಊಟ ಮಾಡೋದಕ್ಕೂ ಕೂಡ ಇಲ್ಲ ಅನ್ನೋ ಪರಿಸ್ಥಿತಿ ನಮಗೆ ಇತ್ತು. ಕೇರಳಕ್ಕೆ ಹೋಗೋದಕ್ಕೆ ಛಾರ್ಜಿಗೆ ದುಡ್ಡಿಲ್ಲ. ಅಂತದರಲ್ಲಿ ನಮ್ ತಾಯಿ ಕೈನಲ್ಲಿದ್ದ ಬಳೇನ ಮಾರಿ ಕೇರಳ ಕಲಾ ಮಂಡಲದಲ್ಲಿ ಇಂಟರ್ ವ್ಯೂಗೆ ಕರಕೊಂಡು ಹೋದ್ರು. ಇಂಟರ್‌ವ್ಯೂ ಎಲ್ಲಾ ಆದ್ಮೇಲೆ ಸೆಲೆಕ್ಟ್ ಆದ್ರೆ, ಅಲ್ಲಿ ನನಗೆ ತಗಳೊಲ್ಲ ಅನ್ನೋದು ಒಂದು ಬಂದು ಬಿಡ್ತು.

**ವಿಜಯಾ :** ಯಾಕೆ?

**ಉಷಾ :** ಯಾಕೆಂದ್ರೆ ನಾನು ಕರ್ನಾಟಕದವಳು, ಇದು ಕೇರಳದವರಿಗೆ ಮಾತ್ರ, ಬೇರೆ ಸ್ಟೇಟಿನಿಂದ ಬಂದಿರೋ ಹುಡುಗಿ ಹೇಗೆ ಬಂದು ಕಲಿತಾಳೆ ಇಲ್ಲಿ. ಅವಾಗ ಮೈಸೂರು ಸ್ಟೇಟ್ ಅಂತ ಹೇಳೊರಲ್ಲ. ಮೈಸೂರು ಸ್ಟೇಟ್ ನಿಂದ ಬಂದು ಹುಡುಗಿ ಕಲಿತಾಳೆ ಅಂದ್ರೆ ಹೇಗೆ, ನಾವು ಯಾವ ನಂಬಿಕೆ ಮೇಲೆ ತಗೋಳೋದು. ಅದ್ರಿಂದ ರಿಜೆಕ್ಟ್ ಮಾಡಬಿಡೋದು ಅಂತ. ಸಿಕ್ಕಿದ್ರು ಕೂಡ ಇಲ್ಲದಂಗ ಆಯ್ತಲ ಅಂತ ಹೇಳಿ ನಾವು ಅಲ್ಲಿ ಒಂದು ಹೊಳೆ ಹರಿಯುತ್ತೆ. ಅಲ್ಲಿ ನಮ್ ತಾಯಿನೂ ತಂದೆನು ಕುಳಿತು ಕೊಂಡು ನಮ್ ಮಗಳಿಗೆ ಕೈಗೆ ಬಂದ ತುತ್ತು ಬಾಯಿಗೆ ಬರದಂಗ ಆಗೊಯ್ತಲ್ಲಪ್ಪ. ಏನಪಾ ಮಾಡೋದು ಅಂತ ತುಂಬಾ ಚಿಂತೆಯಲ್ಲಿ ಕುಳಿತಿರಬೇಕಾದ್ರೆ ಆ ಕೇರಳ ಕಲಾ ಮಂಡಲಂ ಸ್ಥಾಪನೆ ಮಾಡಿದಂತ ವಲ್ಲತ್ತೋಳ್ ಅವರ ಮಗಳು ಹೊಳೆಗೆ ಸ್ನಾನಕ್ಕೆ ಅಂತ ಬರ್ತಿದ್ರು. ಅಲ್ಲಿ ನನ್ನ ತಾಯಿನೂವೆ ಆಕೆನೂವೆ ಒಂದೇ ಕಾಲೇಜ್ ನಲ್ಲಿ ಓದಿದೋರು. ನೋಡಿ ದೇವರ ದಯೆ ಅನ್ನೊದಕ್ಕೆ...

**ವಿಜಯಾ:** ನಿಮ್ಮ ತಾಯಿ ಕಾಲೇಜನಲ್ಲಿ ಓದಿದ್ದಾರೋ....

**ಉಷಾ:** ಹೌದು. ಕೇರಳದಲ್ಲಿ. ಆಮೇಲೆ ಅವರು ನನ್ ತಾಯಿನ ನೋಡಿ ನನ್ ತಾಯಿಗೆ ಅವರು ಸಗುಣ ಸಗುಣಾ ಅಂತಾ ಕರೆಯುವರು. ಇದೇನು ಸಗುಣ ನೀನಿಲ್ಲಿಗೆ ಬಂದಿದೆಯಲ್ಲ. ಏನ್ಸಮಾಚಾರ ಅಂದ್ರು. ಹೀಗೆ ಇಂಟರ್ ವ್ಯೂಗೆ ಬಂದಿದ್ವಿ...ಹಿಂಗಾಗೊಯ್ತು. ಅದೇ ನಮ್ಮ ತಂದೆನೆ ಸ್ಥಾಪನೆ ಮಾಡಿರೊದು. ಅದೆಂಗೆ ನಿನ್ನ ಮಗಳಿಗೆ ಕೊಡಲ್ಲ ಅಂದ್ರು. ಏನಾಯ್ತು-ಅಂದ್ರು. ಹೀಗೆ ಇಂಟರ್ ವ್ಯೂ ಎಲ್ಲ

ಮುಗಿದೊಯ್ತು. ನಮಗೆ ಕರೆದು ಹಿಂಗೆ ಹೇಳಿದ್ರು... ನೀನೇನೂ ವರಿ(Worry) ಮಾಡ್ಬೇಡ. ನಾನು ಹೇಳ್ತಿನಿ ಕಮಿಟಿಯವರಿಗೆ, ಇಷ್ಟು ದೂರದಿಂದ ನಿನ್ ಮಗಳ್ನ ಕರಕೊಂಡು ಬಂದಿದೀಯ. ದೈರ್ಯವಾಗಿ ಊರಿಗ್ಹೋಗು ನೀನು ಅಂದ್ರು. ಸರಿ ನಮ್ ತಾಯಿ ನಿನ್ನೆ ನಂಬಿಕೊಂಡಿದೀನಿ ಅಂತ ಹೇಳಿ ದೈರ್ಯವಾಗಿ ಊರಿಗೆ ಬಂದ್ಬಿಟ್ರು. ನನ್ನ Luckಗೆ ನನಗೆ Seat ಸಿಕ್ಕಿದೆ ಅಂತ ಬಂತು. ಬಂದ್ಮೆಲೆ ನನ್ನ ತಂದೆ ತಾಯಿ ಕರೆದುಕೊಂಡು ಹೋದ್ರೆ. ಒಂದು ಕಂಡಿಷನ್ ಅಂದ್ರೆ ನಿಮ್ಮ ಮಗಳಿಗೆ ಮಲಯಾಳಿ ಭಾಷೆ ಬರಲ್ಲ. ಇಲ್ಲಿ ಗುರುಕುಲ ಅಭ್ಯಾಸಕ್ಕೆಂತ ಬಿಡ್ತಿವಿ. ನಾವು ಇಷ್ಟು ದುಡ್ನು ಖರ್ಚುಮಾಡಿ ಎಲ್ಲಾ ಮಾಡಿ, ಎರಡು-ಮೂರು ತಿಂಗಳಿಗೆ ಬಿಟ್ಟು ಹೋಗ್ತಿನಿ ನಾನು ಇರಲ್ಲ ಅಂದ್ರೆ ಏನು ಮಾಡೋದು. ಅದಕ್ಕೊಂದು ಸೆಕ್ಯುರಿಟಿ ಬೇಕಲ್ಲ ಅಂತ ಕೇಳಿದ್ರು. ಏನು ಅಂದಾಗ ನೀವಿಷ್ಟು ಹಣ ಕಟ್ಟಬೇಕು. ಎಲ್ಲಿಂದ ಹಣ, ನಮ್ಗೆ ಬರೋಕೆ ಛಾರ್ಜಿಗೆ ಹಣ ಇಲ್ಲ. ಇನ್ನು ಕಟ್ಟೋದು ಎಲ್ಲಿಂದ ಬಂತು. ನೋಡಿ ನಿಮಗೆ ಗೊತ್ತುಗುರಿ ಇಲ್ಲ. ಯಾರಾದ್ರೂ Security ಕೊಡಬೇಕು. ನಮ್ಮ ಈ ಬಡತನದ ಪರಿಸ್ಥಿತಿಯಲ್ಲಿ ನಮಗೆ ಯಾರು ಬಂದು ಸಹಾಯ ಮಾಡ್ತಾರೆ. ಏನು ಮಾಡೋದು ಅಂತ ವಾಪಾಸು ಊರಿಗೆ ಬಂದ್ವಿ. ಆವಾಗ ಅಲ್ಲಿ ಹಾಸನ ಡಿಸ್ಟ್ರಿಕ್ಟ್‌ನಲ್ಲಿ ಒಬ್ರು ಇನ್‌ಕಮ್‌ಟ್ಯಾಕ್ಸ್ ಆಫೀಸರ್ ಇದ್ರು. ಅವರ ಹೆಸರು ಗೋಪಾಲ್ ನಾಯರ್ ಅಂತ. ಅವರು ಮಲಯಾಳಿ, ಅವರು ಒಂದ್ಸಲಿ ನಮ್ಮ ಮನೆಗೆ ಬಂದಿದ್ರು. ಹಿಂಗೆಲ್ಲ...ಆಯ್ತು ಅಂದ್ವಿ. ಅಯ್ಯೋ ಅಷ್ಟೇನಾ. ನೀವೆಲ್ಲ Worry ಮಾಡ್ಬೇಡಿ. ಎಲ್ಲಿ ಇಂಟರ್ ವ್ಯೂ ಆಗಿದ್ದು. ಡಿಟೇಲ್ ಎಲ್ಲಾ ಕೇಳಿಕೊಂಡ್ರು ಅದರ ಸಂಬಂಧಪಟ್ಟ ವ್ಯಕ್ತಿಗಳು ಯಾರಿದಾರೆ. ಇಂತಿಂತೋರು ಕಲೆಕ್ಟರ್ ಇದಾರೆ ಅವರ್ದೆಲ್ಲಾ ಪರ್ಮಿಶನ್ ಆಗ್ಬೇಕು. ಅಯ್ಯಯ್ಯೋ ಆ ಕಲೆಕ್ಟರು ನಾನು ಕ್ಲಾಸ್ ಮೇಟ್, ಫ್ರೆಂಡ್, ನಾವಿಬ್ರು ಒಟ್ಟಿಗೆ IAS ಮುಗ್ಸಿದ್ದು ನಾವು, ನೀವ್ಯಾಕ ವರಿ ಮಾಡ್ತಿರಿ ಅಂದ್ಬಿಟ್ಟು. ಅವರೇನೆ ಡೈರೆಕ್ಟಾಗಿ ಅಲ್ಲಿಗೆ ಫೋನ್ ಮಾಡಿದ್ರು. ಎಲ್ಲಿಗೆ? ತ್ರಿಚೂರಿಗೆ. ಅವರು ಸಿಕ್ಕಿದ್ರು ಕಲೆಕ್ಟರ್ ಅಲ್ಲಿ. ಏನಪಾ ನಮ್ಮ ಕ್ಯಾಂಡಿಡೇಟ್ ಗೆ ಸಿಕ್ಕ ಸೀಟ್‌ಗೆ ಹಿಂಗೆಲ್ಲ ಮಾಡ್ತಾರಂತೆ ಅದೇನು ಸೆಕ್ಯೂರಿಟಿ ಬೇಕು ನಾನು ಬರೆದುಕೊಡ್ತಿನಿ. ಆಕೆಗೆ ಒಂದು ಸೀಟು ಕೊಡ್ಲೆಬೇಕಲ್ಲಿ. ಹುಡುಗಿ ತುಂಬ Highly ಇಂಟಲಿಜೆಂಟ್, ಚೆನ್ನಾಗಿ ನೃತ್ಯ ಮಾಡ್ತಾಳೆ. ದಯವಿಟ್ಟು ಕೊಡಿ. ಸರಿ ಆಯ್ತಪ. ನಿನ್ನ ಒಂದು Friendship ಮೇಲೆ ಕೊಡ್ತಿನಿ ಅಂತ ಹೇಳಿ ಒಪ್ಪಿಕೊಂಬಿಟ್ರು. ಆಮೇಲೆ ಮಾರನೆ ದಿವಸ ಬಂದು ಹೇಳಿದ್ರು. ಒಪ್ಪಿಕೊಂಡಿದಾರೆ. ನೀವೇನು ಭಯಪಡಬೇಡಿ. ನಿಮ್ ಮಗಳಿಗೆ ಸೀಟ್ ಸಿಕ್ಕಾಗಿದೆ. ಆತರ ಏನಾದ್ರೂ ಅಬ್ ಜೆಕ್ಷನ್ ಕ್ರಿಯೆಟ್ ಮಾಡಿದ್ರೆ. ನನಗಂತೂ ಮಕ್ಕಳಿಲ್ಲ ನಾನು ನಿಮ್ ಮಗಳ್ನ ದತ್ತು ತಗೊಂಡು ಹೋಗಿ ಬಾಂಬೆನಲ್ಲಿ ಗೋಪಿಕೃಷ್ಣ ಹತ್ತಿರ ಕರೆದುಕೊಂಡು ಹೋಗಿ ಕ್ಲಾಸ್ ಗೆ ಸೇರಿಸ್ತಿನಿ. ನೀವೇನು Worry ಮಾಡ್ಬೇಡಿ. ನಿಮ್ಮ ಮಗಳ ಕಲಿಕೆ ಇಲ್ಲಿಗೆ ನಿಲ್ಲಲ್ಲ. ನೀವೇನು ಚಾಲೆಂಜ್ ಮಾಡಿದೀರೋ

ಅದನ್ನ ಗೆಲ್ತೀರಿ ನೀವು ಹೋಗಿ ಅಂದ್ರು. ಸರಿ ಎಲ್ಲ ಆದ ಮೇಲೆ... ಆ ಒಂದು ಇದರ ಮೇಲೆ ನನಗೆ ಅಲ್ಲಿ ಸೀಟು ಸಿಕ್ತು ಅಲ್ಲಿ...

ವಿಜಯಾ: ಈಪ್ರೊಸೇಸ್ ನಲ್ಲಿ ನಿಮ್ಮ ಮನಸ್ಥಿತಿ ಹ್ಯಾಗಿತ್ತು?

ಉಷಾ: ಮನಸ್ಥಿತಿ ಅಂದ್ರೆ, ನನಗೆ ಕಲಿಬೇಕು ಅನ್ನೊ ಛಾಲೆಂಜ್ ಇತ್ತು ಅವಾಗ. ನನಗೆ ಏನೊಂದ್ರೆ. ನನ್ನ ಗುರುಗಳು ಹಿಂಗ ಅಂದುಬಿಟ್ರಲ್ಲ. ಅಪ್ಪನಿಗೆ ಅಮ್ಮನಿಗೆ ಹೇಳಿಬಿಟ್ಟು, ತುಂಬಾ ಸಂಬಳ ಕೊಟ್ಟು ಒಬ್ಬ ಟೀಚರ್ ನ ಇಡು ಅಂದ್ರಲ್ಲ, ನಮ್ಮ ಪರಿಸ್ಥಿತಿ ಹೀಗೆ ಬಡತನ ಬೇರೆ. ನನ್ ತಂದೆ ತಾಯಿ ಅವಮಾನ ಆಗಿದ್ದನ್ನ ನಾನೀಗ ಅದನ್ನ ಏನೂಂತ ಸಾಬೀತು ಮಾಡಿ ತೋರಿಸಲೇಬೇಕು ನನ್ ಗುರುಗಳಿಗೆ ಅಂತ ತುಂಬ ಹಟ ಬಂದುಬಿಟ್ಟಿತ್ತು. ನನ್ ತಾಯಿ ಅಂದ್ರು ನೋಡು ನಮ್ ಮಾನದ ಪ್ರಶ್ನೆ ಈಗ ನಿನ್ನ ಕೈನಲಿದೆ ಅಂತ. ಇಲ್ಲ ನನ್ನ ಕರಕೊಂಡು ಹೋಗಿ ಬಿಡು ನಾನು ಕಲಿತೀನಿ ಅಂದೆ.

ವಿಜಯಾ: ನಿಮ್ಮ ಜೊತೆ ಹುಡುಗ ಹುಡುಗಿಯರು ಹೇಗೆ?

ಉಷಾ: ನನಗೆ ಅಂದ್ರೆ ನಮಗೆ ಅವಾಗ ಹುಡುಗರು ನಮಗೆ ಟಚ್ ಇರ್ಲಿಲ್ಲ ಅವಾಗ. ಇನ್ನ ಅಂದ್ರೆ ನನ್ನ ಅಣ್ಣ ತಮ್ಮಂದಿರು ಅಷ್ಟೆ. ಅವರಿಗೆ ಇದರ ಬಗ್ಗೆ ಏನೂ ಗೊತ್ತಿಲ್ಲ. ಇನೋಸೆಂಟ್ ಅಂದ್ರೆ ಇನೋಸೆಂಟ್ ಆಗಿನ ಕಾಲದ ಮಕ್ಕಳು. ಗೊತ್ತಲ್ಲ ಒಂದು ಮಾತಾಡದು ಅಂದ್ರೆ ಭಯ. ಅದರಿಂದ ತಂದೆ ತಾಯಿ ಏನು ಡಿಸಿಶನ್ ತಗೊತಾರೋ ಅದೇ ಡಿಸಿಶನ್ ಅವರಿಗೆ. ಮೊದಲು ಅವರೆಲ್ಲ ಹೇಳೋರು ನಿನಗೆ ಭಾಷೆ ಬರಲ್ಲ ಹೆಂಗೆ ಹೋಗಿ ಕಲಿತಿಯಾ ನಿನಗೆ ಅಪ್ಪ ಅಮ್ಮನ ನೋಡಬೇಕು ಅನಿಸಲ್ವಾ, ನಿನಗೆ ಯೋಚನೆ ಬರಲ್ವಾ ಅಂದಾಗ. ನನಗೆ ಹಿಂಗ ಆಗಿಬಿಟ್ಟಿದೆ. ಅಲ್ಲಿ ಅವಮಾನ ಆಗಿದೆ. ಈಗ ನಾನು ಹೋಗಲೇಬೇಕು. ಇಲ್ಲಾಂದ್ರೆ ಅಮ್ಮ ಅಪ್ಪಂಗೆ ಅವಮಾನ ಆದಾಂಗಾಗ್ತದೆ. ನಾನು ಕಲೀದೆ ಇದ್ರೆ. ಅಮ್ಮನಿಗಾಗಿರುವ ಅಪಮಾನನ ಹೆಂಗಾದರು ಮಾಡಿ ಅಧನ್ನ ಅವರಿಗೆ ಸೈ ಅಂತ ತೋರಿಸಬೇಕು ಕಣೋ ಅಂತಹೇಳಿ ಧೈರ್ಯವಾಗಿ ಹೊರಟೇಬಿಟ್ಟೆ.

ವಿಜಯಾ: ನೆರೆಹೊರೆ ಕೇರಿ ಜನ ಏನಂದ್ರು?

ಉಷಾ: ಯಾರಿಗೂ ಹೇಳಿಲ್ಲ ನಮ್ಮಮ್ಮ ಇದನ್ನ. ಯಾಕಂದ್ರೆ ಹೇಳಿಬಿಟ್ರೆ, ಬಹಿರಂಗ ಮಾಡಿದ್ರೆ ಏನೋ ಬಾಯಿ ದೊಡ್ಡದಾಗಿ ಬಡಾಯಿ ಹೊಡಕೊಂಡು ಹೋಗ್ತಾಳಲ್ಲ ಅಂತಾರೆ. ನಮ್ ತಾಯಿ ಮೊದ್ಲಿಂದ ಸೀಕ್ರೆಟೇ ಎಲ್ಲಾ. ಯಾರಿಗೂ ಏನೂ ಹೇಳ್ತಿರಲಿಲ್ಲ. ಕೆಲಸ ಆದ ಮೇಲೆ ಹೇಳೋದು ಅವರು.

ವಿಜಯಾ: ನೀವು ಡಾನ್ಸ್ ಕಲಿತಾಯಿದ್ರಿ ಚೆನಾಗಿ ಡಾನ್ಸ್ ಮಾಡ್ತೀರಿ. ಪ್ರೋಗ್ರಾಂ ಕೊಡ್ತೀರಿ ಅನ್ನೊದಕ್ಕೂ ಏನೂ ರಿಯಾಕ್ಸನ್ ಇಲ್ವಾ ಸೊಸೈಟಿಯಲ್ಲಿ.

ಉಷಾ: ಅದರಲ್ಲೂ ಬಹಳ ಆಯಿತು. ಎಲ್ಲಿ ನೋಡಿದ್ರು ಉಷಾದಾತಾರ್ ಹೊಗಳೋರು.

ಆಗಿನ ಕಾಲದಲ್ಲಿ ಮಂತ್ರಿಗಳಾಗಿದ್ದಂತ ಎಚ್.ಎಸ್.ರುದ್ರಪ್ಪ ಅವರು ನನಗೆ ಚಿನ್ನದ ಪದಕ ಕೊಟ್ಟಿದ್ರು. ಸರೀ ೨ ತೋಲದ ಬಂಗಾರ. ಎಲ್ಲ ತುಂಬಾ ಕರ್ನಾಟಕದಲ್ಲಿ ಫೇಮಸ್ ಆಗ್ಬಿಟ್ಟಿದ್ದೆ. ಎಲ್ಲರು ಬಹಳ ಇದನ್ನ ಮಾಡೋರು. ಎಲ್ಲಿದ್ರು ನನ್ನ ಕಾರ್ಯಕ್ರಮಕ್ಕೆ ಕರೆಯೋರು.

ವಿಜಯಾ: ಅವಾಗ ನಿಮಗೆ ಎಷ್ಟು ವಯಸ್ಸು?

ಉಷಾ: ನನಗೆ ಏನಿದ್ರು ಅವಾಗ ೭-೮ವರ್ಷ ಅಷ್ಟೆ ನನಗೆ. ಎಲ್ಲ ತುಂಬ ಹೆಮ್ಮೆ ಪಡ್ತೋರು. ನಮ್ಮೂರುಗಳಲ್ಲಿ ಯಾವುದೇ ಕಾರ್ಯಕ್ರಮ ಆದರೆ ನಂದೆ ಮೊದಲು ನೃತ್ಯ. ಏನೇ ಫಂಕ್ಷನ್ ಆದ್ರು ಮೊದಲು ನೃತ್ಯದಿಂದ ಪ್ರಾರಂಭ. ಅಷ್ಟು ಫೇಮಸ್ ಆಗ್ಬಿಟ್ಟಿದೆ ನಮ್ಮ ಡಿಸ್ಟ್ರಿಕ್ಟ್ ನಲ್ಲೆಲ್ಲ. So ಅದರಿಂದ ಏನಾಯಿತು ಅಂದ್ರೆ ನಮ್ಮ ತಾಯಿ ಯಾರಿಗೂ ಹೇಳೋಕೆ ಹೋಗ್ಲಿಲ್ಲ. ಬೇಡ ಏಕೆಂದರೆ ನನ್ ಮೇಲೆ ಅಷ್ಟು ನಂಬಿಕೆ ಇರ್ಲಿಲ್ಲ. ಇವಳು ಇರ್ತಾಳೋ ಇಲ್ಲವೋ, ಮಧ್ಯೆ ಬಿಟ್ಟು ಬಂದ್ರೆ, ನಾನು ಊರ್ನೋರ ಹತ್ರ ಎಲ್ಲ ಹೇಳಿಕೊಂಡು ಬರೋದು. ನನಗೆ ಅಪಮಾನ ಆಗಿಬಿಡುತ್ತೆ ಅಂದು ಯಾರಿಗೂ ಗೊತ್ತಿಲ್ಲ. ಕರ್ಕೊಂಡು ಹೋಗಿ ಸೇರಿಸಿ ಬಂದಬಿಟ್ಲು. ಸುಮಾರು ದಿವಸ, ಅದಕ್ಕೂ ಮುಂಚೆ ಸ್ಕೂಲ್ ಬಿಡಬೇಕಲ್ಲ, ಸ್ಕೂಲ್ ಬಿಡೋ ಟೈಮಲ್ಲಿ ಕೇಳಿದ್ರು. ನೀವ್ಯಾಕೆ ಮಗಳ್ನ ಸ್ಕೂಲ್ ಬಿಡಸ್ತೀರಾ ಹಿಂಗಾಗಿದೆ, ಸೀಟ್ ಸಿಕ್ಕಿದೆ, ಕೇರಳದಲ್ಲಿ, ಅಲ್ಲೆ ಸೇರಿಸ್ತಿನಿ. ಮುಂದೆ ಬೇಕಾದ್ರೆ ಅಲ್ಲೆ Education continue ಮಾಡ್ಕೊತಾಳೆ ಅಂತ ಹೇಳಿದ್ರು. But ಅಲ್ಲಿ Education ಇರ್ಲಿಲ್ಲ ಅಂದ್ರೆ ಯೋಚನೆ ಮಾಡಿ ನೀವು ಅಂತ ಅಂದ್ರಂತೆ. ಇಲ್ಲ ನಾನು ಯೋಚನೆ ಮಾಡೋದಿಲ್ಲ. Decide ಮಾಡಿಬಿಟ್ಟಿದಿನಿ ಅಂದುಬಿಟ್ಟು. ಅವಾಗ ನಾನು ೫ನೇ ಕ್ಲಾಸ್ ಓದುತ್ತಿದ್ದೆ. ೫ ರಿಂದ ೬ನೇ ಕ್ಲಾಸ್ ಗೆ ಬಂದೆ ಅಷ್ಟೆ ಪಾಸಾಗಿ. ಕರ್ಕೊಂಡು ಹೋಗಿ ಜೂನ್‌ಗೆ ಸೇರಿಸಿಬಿಟ್ರು ನನ್ನನ್ನ. ಅಲ್ಲಿ ಏನಾಯಿತು ಅಂದ್ರೆ ಗುರುಕುಲ ಪದ್ಧತಿ ಅಂದರೆ ಗೊತ್ತಲ್ಲ ೪ ಗಂಟೆಗೆ ಬೆಳಿಗ್ಗೆ ಏಳಬೇಕು. ನಾವೇ ಸ್ನಾನ ಮಾಡ್ಕೊಬೇಕು ತಲೆ ಬಾಚ್ಕೊಬೇಕು, ಬಟ್ಟೆ ಒಕ್ಕೊಬೇಕು- ಇದು ಯಾವುದೂ ನನಗೆ ರೂಢಿ ಇರ್ಲಿಲ್ಲ. ನಮ್ಮಲ್ಲಿ ಇದ್ನೆಲ್ಲ ನಮ್ಮಮ್ಮ ಮಾಡೋರು. ನಮಗೆ ತಣ್ಣೀರ್ ಸ್ನಾನ ಗೊತ್ತಿಲ್ಲ. ಹೊಳೆ ಸ್ನಾನಗೊತ್ತಿಲ್ಲ. ಈಜೋಕೆ ಬರೋಲ್ಲ, ಆಮೇಲೆ ಭಾಷೆ ಬರೋದಿಲ್ಲ-ಮಲೆಯಾಳಿ ಭಾಷೆ. ನಮ್ ತಾಯಿ ಏನು ಹೇಳಿದ್ರುಅಂದ್ರೆ ಮಲೆಯಾಳಿದು ೪ Word ಹೇಳಿಕೊಟ್ಟಿದ್ರು- 'ಊಟ ಆಯಿತ'-ಹೆಂಗ ಕೇಳೋದು, ಹೇಸರೇನು? ಅಂತ ಕೇಳಿದ್ರೆ ಹೇಳೋದು, ಆಮೇಲೆ ಊರ್ಯಾವುದು ಕೇಳಿದ್ರೆ ಹೇಳೋದು-ಇಷ್ಟಕ್ಕೆ ಮಾತ್ರ ಅವರು ಹೇಳಿಕೊಟ್ಟಿದ್ರು. ಮುಂದೆ ಮಕ್ಕಳ ಜೊತೆ ಇದ್ರೆ ನಿನಗೆ ಬರುತ್ತೆ ಬಿಡು ಅಂತ ಹೇಳಿದ್ರು. ಏನೂ ಬರದೇ ಇದ್ದವಳ ಕರಕೊಂಡು ಹೋಗಿ ಬಿಟ್ಟಿಟ್ರು. ಒಂದು ತಿಂಗಳಾದ ಮೇಲೆ ದಿನಾ ಅಳಾಕ ಶುರು ಮಾಡಿದೆ. ನಾನು ಇರಲ್ಲ ಇಲ್ಲಿ, ಊರಿಗೆ ಹೊರಟು ಹೋಗ್ತಿನಿ. ಇರಾಕ ಅಗಲ್ಲ. ಆಮೇಲೆ ಗಂಜಿ

ಊಟ ಬೆಳಿಗ್ಗೆ. ನಮ್ಮ ಹಾಗೆ ಇಡ್ಲಿ ದೋಸೆ ಕೊಡಲ್ಲ. ಎಲ್ಲ ಸಮತೂಕ ಆಹಾರಗಳು. ಕಾಫಿ ಟೀ ಇಲ್ಲ. ತುಂಬಾ, ರಾತ್ರಿ ಆಗ್ಬಿಟ್ರೆ ಮಲಗೋ ಟೈಮಲ್ಲಿ ತಾಯಿ ತಂದೆ ನೆನಪು ಬಂದು ಬಿಡೋದು. ಅಣ್ಣ ತಮ್ಮಂದಿರ ಜೊತೇಲಿದ್ದಾಗ ಏನೂ ಅನಿಸ್ತಿದ್ದಿಲ್ಲ. ಜಗಳ ಮಾಡುತ್ತಿದ್ದೆ ಎಲ್ಲ, ನಮ್ಮ ಅಣ್ಣ ನನ್ ತಮ್ಮ ನನ್ ತಂದೆ-ತಾಯಿ ನನ್ ತಂಗಿ ಎಲ್ಲಾ ಸೇರಿಬಿಟ್ಟು ಅಳೋಕೆ ಮಾಡ್ಬಿಟ್ಟ ನಾನು ತುಂಬಾ. ಆಮೇಲೆ ನನ್ ತಂದೆಗೆ ಕಾಗದ ಬರೆದು ಕರೆಸಿದ್ರು. ನೋಡಿ ತುಂಬಾ ಅಳತಾಳೆ ನಿಮ್ ಮಗಳು. ಇರಲ್ಲ ಅಂತ. ಅವಳಿಗೆ ಜ್ವರ ಎಲ್ಲ ಬರೋಕೆ ಶುರುವಾಗಿದೆ. ಏನು ಮಾಡೋದು. ಆಗ ನಮ್ ತಂದೆ ಎನಪ್ಪಾ ಹಿಂಗೆ ವಾಪಸು ಊರಿಗೆ ಕರಕೊಂಡು ಹೋದ್ರೆ ಅವಮಾನ ಆಗಿಬಿಡುತ್ತೆ, ಊರಲ್ಲಿ ಯಾರಿಗೂ ಬೇರೆ ಗೊತ್ತಿಲ್ಲ. ಏನಪ್ಪ ಇಷ್ಟು ದಿವಸ ನಿಮ್ಮ ಮಗಳು ಎಲ್ಲಿ ಹೋಗಿದ್ಲು ಅಂತ ಕೇಳಿದ್ರೆ ಏನು ಹೇಳೋದು ನಾನು ಅಂತ, ನನ್ನ ಹೊರಗಡೆ ಕರೆದು ತುಂಬ ಅಡ್ವೈಸ್ ಮಾಡಿದ್ರು. ನೋಡು ಹಿಂಗೆಲ್ಲ ಆಳ್ಬೇಡ. ನಾವೆಲ್ಲಿ ಹೋಗ್ತಿವಿ. ವರ್ಷಕ್ಕೆ ೨ಸಲ ೩ಸಲ ರಜೆಗೆ ಬಂದೆ ಬರ್ತಿಯಾ ಓಣಂ festivelಗೆ ೧೦ ದಿವಸ ರಜೆ ಇರುತ್ತೆ, ಕ್ರಿಸ್‌ಮಸ್‌ಗೆ ರಜೆ ಕೊಡ್ತಾರೆ. ಹಿಂಗೆಲ್ಲ ಮೂರು ಮೂರು ತಿಂಗಳು ತಾನೆ ಹೆಂಗೋ ಅಡ್ಜೆಸ್ಟ್ ಮಾಡ್ಕೋ ಅಂದಾಗ. ಇಲ್ಲ ನಾನಿರಲ್ಲ ನಾನು ಬಂದ್ಬಿಡ್ತಿನಿ ಅಂತ ಅಂದಾಗ, ನನ್ನ ತಂದೆಗೆ ಕೋಪ ಬಂದು ಚೆನ್ನಾಗಿ ಹೊಡೆದ್ರು ನನಗೆ, ಹೊಡೆದುಬಿಟ್ಟು-ನಮಗೆ ಅವಮಾನ ಮಾಡ್ತಿಯಾ ನಾವು ಏನೋ ಒಂದು ಧ್ಯೆಯ ಇಟ್ಟುಕೊಂಡು ನಿನ್ನಮ್ಮ ನಾನು ಎಲ್ಲ ಕಷ್ಟ ಪಟ್ಟು ಎಲ್ಲ ಮಾಡಿದ್ರೆ, ನಿನೆಲ್ಲ ಮಾನಾನೆ ತೆಗೆದುಬಿಟ್ತಿಯಲ್ಲ ಅಂದಾಗ. ಅವಾಗ ಒಬ್ರು ಮೋಹನ್ ಕೋಲ್ಕಾರ್ ಅಂತ ರೈಟರ್ ಇದ್ರು. ಅವರು ಹೊಡಯೋ ಸಂದರ್ಭಕ್ಕೆ ಕರೆಕ್ಟಾಗಿ ಅಲ್ಲಿಗೆ ಬಂದ್ರು. ಹಿಂಗ ಬಂದಾಗ ಯಾಕ ಮಗೂನ ಹೊಡೆತಿದಿರಾ ಅಂದಾಗ ನೋಡಿ ಇಷ್ಟು ಆಗಿದೆ ಅಂದ್ರು. ನೋಡಿ ಮಗೂನ ಹೋಡಿಬೇಡಿ ಎಳೆ ಮನಸು ನಾವೆಲ್ಲ ಹೇಳ್ತಿನಿ ಅಂದು ನನಗೆ ಅಡ್ವೈಸ್ ಮಾಡಿದ್ರು. ನೀನು ಡ್ಯಾನ್ಸರ್ ಆಗಿ ಏನು ಆಗ್ಬೇಕು ಅಂತಿದಿಯಾ ಅಂದ್ರು. ನಾನು ಪದ್ಮಿನಿ, ರಾಗಿಣಿ, ವೈಜಯಂತಿ ಮಾಲಾ ಆಗ್ಬೇಕು ಕಮಲಾ ಲಕ್ಷ್ಮಣನ್ ಆಗ್ಬೇಕು. ಮತ್ತೆ ನೀನಿಂಗೆ ಅತ್ರೆ ಕಮಲಾ ಲಕ್ಷ್ಮಣನ್ ಆಗಲ್ಲ, ಏನೂ ಆಗಲ್ಲ ಊರಿಗೆ ಹೋಗ್ಬಿಟ್ಟು, ಆಮೇಲೆ ನಿಮ್ಮಪ್ಪ ಯಾರಿಗಾದ್ರು ಮದ್ವೆ ಮಾಡಿಕೊಡ್ತಾರೆ, ಮದ್ವೆ ಮಾಡ್ಕೊಂಡು ಅಡಿಗೆ ಮಾಡ್ಕೊಂಡು ಇರಬೇಕು. ಕಮಲಾನೂ ಇಲ್ಲ ಲಕ್ಷಣನೂ ಇಲ್ಲ ಪದ್ಮಿನಿನೂ ಇಲ್ಲ, ವೈಜಯಂತಿ ಮಾಲಾನೂ ಇಲ್ಲ ಏನೂ ಆಗಾಕಗಲ್ಲ. ನೀನು ಆಗ್ಬೇಕು ಅಂದ್ರೆ ಎಲ್ಲ ಗಟ್ಟಿ ಮನಸು ಮಾಡಿಬಿಡಬೇಕು ಒಂದು ಸ್ವಲ್ಪ ದಿವಸ. ಏನು ವರ್ಷಕ್ಕೆ ಮೂರು ಸಲ ಹೋಗೇ ಹೋಗ್ತಿಯಲ್ಲ ಏನು ಮಹಾ ಎಷ್ಟು ಜನ ಫ್ರೆಂಡ್ಸ್ ಇದಾರೆ, ಅವರೂ ನಿನ್ನಂಗೆ ತಂದೆ-ತಾಯೀನ ಬಿಟ್ಟು ಇಲ್ವಾ. ಅಂತ ಹೇಳಿ ಏನೇನೋ ಮಾಡಿ ಕನ್ನಡದಲ್ಲಿ ಒಂದು ಗಾದೆ ಇದೆಯಲ್ವಾ 'ಕೈಕೆಸರಾದರೆ ಬಾಯಿ ಮೊಸರು'ಅಂಗ ಅಲ್ವಾ. ನೀನು ಓದಿದಿಯಾ ಅಂತ

ಕೇಳಿದರು. ಹುಂ ಓದಿದಿನಿ ಅಂದೆ. ಮತ್ತೆ ಕೈ ಕೆಸರಾದರೆ ಅಂತ ಅವರೆಲ್ಲ ಕಥೆಯಲ್ಲಿ ಹೇಳಿದಾಗ ಸ್ವಲ್ಪ ಮನಸ್ಸು ಛೇಂಜಾಯಿತು. ಇಲ್ಲ ನಾನು ಅಳಲ್ಲ ಧೈರ್ಯವಾಗಿರ್ತಿನಿ ಅಂದುಬಿಟ್ಟು ಒಪ್ಕೊಂಡೆ. ಆಮೇಲೆ ಬಿಟ್ಟು ಬಂದುಬಿಟ್ರು. ಹೆಂಗೋ ೩-೪ ತಿಂಗಳಲ್ಲಿ ಆ ಗುರುಕುಲದ ಅಭ್ಯಾಸದ ಚಟುವಟಿಕೆಗೆ ನಾನು ಅಡ್ಜೆಸ್ಟ್ ಆಗ್ಬಿಟ್ಟೆ. ಏಕೆಂದರೆ ಬೇರೆ ತರ ಯೋಚನೆ ಮಾಡುಕೆ ಟೈಮಿಲ್ಲದಂತೆ ಆಗೋಯ್ತು. ನಾಲ್ಕು ಗಂಟೆಗೆ ಏಳು, ವ್ಯಾಯಾಮ ಮಾಡು, ಸಂಗೀತ ಅಭ್ಯಾಸ ಮಾಡು, ಒಂದರಿಂದ ಒಂದು ಸರಪಣಿಯಂಗೆ ನಿಲ್ತಾನೆ ಇದ್ವು. ಒಂದು ಅರ್ಧಗಂಟೆ ಯೋಚನೆ ಮಾಡಕೆ ಪುರುಸೊತ್ತು ಇಲ್ಲ. So ಅದನ್ನ ನಾವು ಕಲಿಬೇಕು, ಮಾಡಬೇಕು, Next classಗೆ ಹೋಗಬೇಕು ಇದೇ ತಲೆಯೊಳಗೆ ಬರ್ತಾ ಬರ್ತಾ ಮನೆ ಸ್ವಲ್ಪ ಮರೆಯೋಕೆ ಶುರುವಾಯ್ತು. ಇವರು ಹೇಳಿದ್ದೆಲ್ಲ ಇತ್ತಲ್ಲ ಕೈಕೆಸರಾದರೆ ಬಾಯಿ ಮೊಸರು, ವೈಜಯಂತಿ ಮಾಲ, ಲಲಿತಾ ಪದ್ಮಿನಿ, ರಾಗಿಣಿ-ಚೆನ್ನಾಗಿ ಸ್ಟಾಕ್ ಆಗಿಬಿಟ್ತು ತಲೆಯೊಳಗೆ. ಇದ್ದು ಬಿಟ್ಟೆ. ನಾನು ಓಣಂ Festivel ಬಂದ್ರೆ ೧೦ ದಿವಸ ರಜೆಗೆ ಬರ್ತಿದ್ದೆ. ಒಬ್ಳೆ ಟ್ರಾವೆಲ್ ಮಾಡ್ತಿದ್ದೆ. ಹೆಣ್ಮಗು ಒಬ್ಬಳನ್ನೆ ಕಳಿಸು ಅಂತಿರಾ ನಾವೆಂಗೆ ಕಳಿಸೋದು ನಾಳೆ ಏನಾದ್ರು ಯಾರೋ ಏನೋ ಬಂದು ಕಿಡ್ನಾಪ್ ಮಾಡಿದ್ರೆ ಏನು ಮಾಡೋದು. ಅಂತ ತಂದೆಗೆ-ತಾಯಿಗೆ Letter ಬರೆಯೋರು ಕೇರಳ ಕಲಾ ಮಂಡಲಂ ನೋರು. ಇಲ್ಲ ಅವಳಿಗೆ ಧೈರ್ಯ ಇದೆ. ಹೇಳಿಕೊಟ್ಟಿದೀವಿ. ಧೈರ್ಯವಾಗಿ ಬರ್ತಾಳೆ. ನೀವೇನೂ ಯೋಚನೆ ಮಾಡಬೇಡಿ ಅಂತ ಹೇಳಿಬಿಟ್ರು. ಅಲ್ಲಿ ಒಬ್ಬ ಮುಸ್ಲಿಂ Fort ನಲ್ಲಿದ್ವ. ಅವನಿಗೆ ಪರಿಚಯ ಆಗಿ ಹೋಗಿಬಿಟ್ಟಿತ್ತು. ಅವನಿಗೆ ನನ್ ತಾಯಿ ಕಾಗದ ಬರೆಯೋರು. ನೀನೆ ಹೋಗಿ ನನ್ನ ಮಗಳನ್ನು ಕರಕೊಂಡು ಬಂದು Trainನಲ್ಲಿ ಹತ್ತಿಸಬೇಕು. ಅವಾಗ ರಿಸರ್ವೇಶನ್ ಅವೆಲ್ಲ ಏನೂ ಇಲ್ಲ. ಆ ಒಂದು ನಂಬಿಕೆ ಮೇಲೇನೆ ಅವರಂದ್ರು ಏನಪ ನೋಡಿ ನಂಬಿಕೆ ಮೇಲೆನೆ ಇಲ್ಲಿಂದ ಕಳಿಸ್ತಾಯಿದೇವೆ. ಮುಂದಿನ Train ಹತ್ತಿದ ಮೇಲೆ ನಿಮ್ಮದೇ ಜವಾಬ್ದಾರಿ. ನಮ್ಮದೇನೂ ಇಲ್ಲ. ಅಂದ್ರೆ ತಲುಪಿದ ತಕ್ಷಣ ನಮಗೊಂದು Massage ಕೊಡಬೇಕು. ನೀವು ಅಂತ. ಅದೇ ತರಹ ಅವನು ಕರಕ್ಕಾಗಿ ಬಂದು Trainಗೆ ಹತ್ತಿಸಿಬಿಡೋನು. ಬೆಂಗಳೂರಿಗೆ ಇಳಿತಿದ್ದೆ. ಬೆಂಗಳೂರಿಗೆ ಬಂದ್ಮೇಲೆ ಕನ್ನಡ ಭಾಷೆ ನಮ್ ಪಾಡಿಗೆ ನಾವೇ ಟ್ರೈನ್ ಛೇಂಜ್ ಮಾಡೋದು ಬೇರೆ Train ಹತ್ಕೊಂಡು ಊರಿಗೆ ಬರ್ತಿದ್ದೆ. ಹಿಂಗೆ, ಏಳು ವರ್ಷದ ಮಗುವಾಗಿದ್ದಾಗಿನಿಂದನೇ ಒಬ್ಬಳೇ Travel ಮಾಡೊಕೆ ಶುರುಮಾಡಿಬಿಟ್ಟೆ. So ಒಂದು ಸ್ವಲ್ಪ ಧೈರ್ಯ ಬರೋಕೆ ಶುರುವಾಯ್ತು. ಆಮೇಲಾನಾಯಿತು ಅಂದ್ರೆ ಬರ್ತಾ ಬರ್ತಾ ಆ ವಾತಾವರಣಕ್ಕೆ ಒಗ್ಗಿಬಿಟ್ಟೆ. Theory ಕಲಿಯೋದಿಕ್ಕೆ ಮಲಿಯಾಳಿ ಭಾಷೆ ಬರಬೇಕು. ಸರಿ ಒಂದನೇ ಕ್ಲಾಸಿಗೆ ಸೇರಿಸಿದ್ರು. ಅಂದ್ರೆ ಅದು ಸ್ಕೂಲಲ್ಲ ಮೇಷ್ಟ್ರೇ ಬರೋರು, ನಂಜೋತೇಲಿ ಇಬ್ರು ಅಮೆರಿಕನ್ಸ್ ಇದ್ರು.

ಬೆಟ್ಟಿಜಾನ್ಸನ್ ಅಂತ. ಅವರು ಫಿಲಿಡೆಲ್ಫಿಯಾದಿಂದ ಬಂದಿದ್ರು. ಒಬ್ಬ ಥೈಲ್ಯಾಂಡ್ ಗವರ್ನರ್ ಮೊಮ್ಮಗ ಇದ್ದ 'ಚಾತುರಾವ್ ' ಅಂತ ಹೇಳಿ. ನಮಗೊಂದು Special Teacher ಇಟ್ಟಿಟ್ಟು ಮಲಯಾಳಿ ಭಾಷೆ ಬರೆಯೋದು ಕಲ್ಸಿದ್ರು. ಆಮೇಲಾನಾಯ್ತು ಅಂದ್ರೆ ಕೊನೆಗೆ ಪ್ರತಿ ವರ್ಷದಲ್ಲಿ ೩ ಸಾರಿ ಊರಿಗೋಗದು ಬರೋದು ಏನಕ್ಕೆ, ಬೇಡ ಅಂದ್ ಬಿಟ್ರು ನನ್ ತಾಯಿ. ಹಗಲೆಲ್ಲಾ ಟ್ರೈನ್ ಛಾರ್ಜ್‌ಗೆ ದುಡ್ಡು ಬೇಕಲ್ಲ. ನನ್ನ ಅಜ್ಜಿ ಕ್ಯಾಲಿಕಟ್ ನಲ್ಲಿದ್ರು. ಅಲ್ಲಿಗಾದ್ರೆ ೧ ರೂಪಾಯಿ ೨ ರೂಪಾಯಿ ಬಸ್ ಛಾರ್ಜ್‌ನಲ್ಲಿ ಹೊರಟು ಹೋಗಿಬಿಡುತ್ತಾಳೆ ಅಂತ ಅಂದ್ ಬಿಟ್ರು. ಕೊನೆಗೆ ಅಲ್ಲಿಗೆ letter ಬರೆದ್ರು. ಇಲ್ಲಿಗೆ ಬರೋದು ಬೇಡ ಅಂತ. ಆಯಿತು ಅಂದು ಅಜ್ಜಿ ಮನೆಗೆ ಹೊರಟು ಹೋಗ್ತಾಯಿದ್ದೆ. ವರ್ಷಕ್ಕೆ ಒಂದ್ಸಲಿ ಮಾತ್ರ ಬರ್ತಾಯಿದ್ದೆ. ಇಲ್ಲಿ ಇಷ್ಟೆಲ್ಲ ಆಗಿರ್ಬೇಕಾಗಿದ್ರೆ, ಊರ್ನಲ್ಲಿ ಏನಾಯಿತು ಅಂದ್ರೆ Friends ಎಲ್ಲ ಬೇರೆ ಟೀಚರ್ ಕೇಳೋರು, ಉಷಾ ದಾತಾರ್ ಕ್ಲಾಸಿಗೆ ಬರ್ತಾಯಿದಾಳ? ಏನು ಕಲಿತಿದಾಳೆ? ಅಂತ. ಇಲ್ಲ ೨ ತಿಂಗಳಾಯಿತು ೩ ತಿಂಗಳಾಯಿತು ಕ್ಲಾಸಿಗೆ ಬರ್ತಾಯಿಲ್ಲ ಅವಳು. ಅದೊಂದು ದೊಡ್ಡ ಪ್ರಚಾರವಾಯಿತು. ಇಲ್ಲ ದಾತಾರ್ ಮಗಳು ಕಾಣದೇ ಇಲ್ವಂತೆ, ಊರಲ್ಲೇ ಇಲ್ವಂತೆ ಅಂದ್ಬಿಟ್ಟು ಎಲ್ಲಿ ಓಡಿ ಹೋಗಿದಾಳೋ ಏನೋ? ಅಷ್ಟು ಸಣ್ಣ ಹುಡುಗಿ ಹಾಗೆ ಹೀಗೆ ಏನೇನೋ ಶುರುವಾಗಿ ಹೋಗ್ಬಿಟ್ಟು. ಕೊನೆಗೆ ಇವರಿಂದ ಅಪಪ್ರಚಾರ ಶುರುವಾಯಿತು. ಹೇ. ಎಲ್ಲಿ, ಅವರು ಮಗಳ್ನಾ ಸ್ಕೂಲ್ ಬಿಡ್ಸಿ ಬಿಟ್ಟಿದ್ದಾರೆ. ಅವಮಾನ ಆಗಿಬಿಟ್ಟಿದೆ. ಈಗ ಡಾನ್ಸ್ ಇಲ್ಲ, ವಿದ್ಯೆಯೂ ಇಲ್ಲ ಮನೆಯೊಳಗೆ ಕೂಡ್ಸಿಕೊಂಡಿದ್ದಾರೆ. ಬೇಜಾರಾದ್ರೆ ಸಂಜೆ ಕತ್ತಲಾದ್ಮೇಲೆ ಈಚೆಗೆ ಬರ್ತಾಳೆ ಆ ಹುಡುಗಿ. ಹಗಲೊತ್ತಲ್ಲಿ ಮನೆ ಹೊರಗೆ ಬರಲ್ಲ ಒಳಗೆ ಇರ್ತಾಳೆ ಅಂತ ಈ ತರದ ಅಪಪ್ರಚಾರವೆಲ್ಲ ಶುರುವಾಯಿತು. ಒಂದು ಹಾಲಿಡೇಗೆ ಊರಿಗೆ ಬಂದಾಗ ರೈಲ್ವೆ ಸ್ಟೇಶನ್‌ಲ್ಲಿ ನಮ್ ತಂದೆನ ಊರವರು ಕೇಳಿದ್ರು. ಏನೂ ಈ ಕಡೆ ಬಂದಿದೀರಾ ಏನ್ಸಮಾಚಾರ ಅಂತ. ಇಲ್ಲ ನಮ್ ಮಗಳು ಬರ್ತಾಯಿದಾಳೆ ಊರಿಂದ. ಮಗಳು ಅಂದ್ರೆ ಎಲ್ಲಿಂದ. ಇಲ್ಲ ನಾವು ಕೇರಳದಲ್ಲಿ ಬಿಟ್ಟಿದಿವಿ. ಕೇರಳದಲ್ಲಿ ಏನಕ್ಕೆ? ಅಂದ್ರು ಆವಾಗ ಹೇಳಿದ್ರು ಹಿಂಗೆ ಗುರುಕುಲದಲ್ಲಿ, ಹೀಗ್ಹೀಗೆ ಡಾನ್ಸ್ ಕಲೀಲಿಕ್ಕೆ ಬಿಟ್ಟಿದಿವಿ. ನಮಗೊಬ್ಬರಿಗೂ ಹೇಳ್ಲೆ ಇಲ್ವಲ್ಲಾ, ಊರಿನವರಿಗೆ ಹಾಗೆ ಹೀಗೆ.. ಏನು ಹೇಳೋದು. ಸಣ್ಣೋರು ತಾನೇ ಅವಗೆಲ್ಲಾ, ನಮ್ಮಗೊಬ್ಬರಿಗೂ ಇನ್‌ಫರ್ಮೇಶನ್ ಇಲ್ಲ. ಇಲ್ಲ,ಇಲ್ಲ, ಕೆಲಸ ಎಲ್ಲ ಸುಗಮವಾಗಿ ಆಗೋವರೆಗೂ ನಾವು ಏನು ಹೇಳೋದು ಬೇಡ, ಏಕೆಂದರೆ ಅವಳು ಹೊಸದಾಗಿ ಬಿಟ್ಟಿರೋದು ತಂದೆ ತಾಯಿನ. ಮಧ್ಯಕ್ಕೆ ಬಂದ್ರೆ ಹೆಂಗೆ ಅಂತ, ಈಗ ಪರ್ವಾಗಿಲ್ಲ ಅಲ್ಲೇ ಕಲಿತಾಯಿದಾಳೆ. ಒಳ್ಳೆ ಗುರುಗಳು ಸಿಕ್ಕಿದಾರೆ ಅಲ್ಲಿ ಕಲಿತಾಯಿದಾಳೆ. ಅಂದಾಗ ಅವಾಗ ಸ್ವಲ್ಪ ಊರಿನ ಜನಗಳಿಗೆ ಓಹೋ ಇವಳು ಡಾನ್ಸ್ ಬಿಟ್ಟಿಲ್ಲ ಇನ್ನೂ ಮುಂದುವರಿಸಿಕೊಂಡು ಹೋಗ್ತಿದಾಳೆ ಅಂದಾಗ. ಮೇಷ್ಟ್ರು ಓಹೋ

ಏನು ದೊಡ್ಡ ಕಮಲಾ ಲಕ್ಷ್ಮಣ್ ಆಗ್ತಾಳಂತಾ ಅಲ್ಲಿ ಕೇರಳಗೆ ಹೋಗ್ಬಿಟ್ಟು. ಏನಂತೆ, ಹಂಗೆ-ಹಿಂಗೆ...ಅಂತ...ಹಿಗೇನೆನೋ ಅಂತಾನೆ ಇದ್ರು ಇವರು. ಆಮೇಲೆ ರಜಾದಲ್ಲಿ ನಾನು ಬಂದಾಗ ಈಗ ಫ್ರೆಂಡ್ಸ್ ಎಲ್ಲ ಬರೋರು.. ಏನು ಹೇಳಿಕೊಡ್ತಾಯಿದಾರೆ ತೋರ್ಸು ಅಂದಾಗ ನಾನೆಲ್ಲ ಡಾನ್ಸ್ ಮಾಡಿ ತೋರ್ಸಿತ್ತಿದ್ದೆ. ಗುರುಕುಲ ಅಭ್ಯಾಸದಲ್ಲಿ ಹಿಂಗೆ ಎಕ್ಸಸೈಜ್ ಮಾಡಸ್ತಾರೆ, ಹಂಗೆ ಮಾಡಸ್ತಾರೆ, Theory ಹೇಳಿಕೊಡ್ತಾರೆ, ಅಂದಾಗ ಸ್ವಲ್ಪ ಅವರಿಗೆಲ್ಲ ಓಹೋ ಇವಳೇನೋ ಬಾರಿ ಕಲಿಬಹುದೇನೋ ನಿಜ ಅನ್ನೋದು ಗೊತ್ತಾಯ್ತು. ಇಲ್ಲಿ ನಾನು ಹಾಲಿಡೇಸನಲ್ಲಿ ಬಂದಾಗ ತಿರಗ ಪ್ರೋಗ್ರಾಂ ಕೊಡೋಕೆ ಶುರುಮಾಡ್ತಿದ್ದೆ. ಅಂದ್ರೆ ಇಲ್ಲಿನ ಮಕ್ಕಳಿಗಿಂತ ಇವಳೇನೋ ವಿಭಿನ್ನವಾಗಿ ಬೇರೇನೋ ಮಾಡ್ತಾಳಲ್ಲ. ಅನ್ನೊದು ಬಂದುಬಿಡ್ತು. ಇವರು ಕಥಕ್ಕಳಿ ಸಂಪ್ರದಾಯ ಮಿಕ್ಸ್ ಆಗಿರೋ ಡಾನ್ಸ್ ಹೇಳಿಕೊಡೋರು. ನಾನು ಪ್ಯೂರ್ ಭರತನಾಟ್ಯ ಕಲಿಯೋಕೆ ಶುರುಮಾಡಿದ್ನೆಲ್ಲಾ, ಓಹೋ ಏನೇನೋ ಬೇರೆ ಬೇರೆ ತರ ಮಾಡ್ತಾಳೆ. ಓಹೋ ಇಷ್ಟು ದಿವಸ ನಾವು ಮಾಡ್ತಾಯಿದುದ್ದು ಡಾನ್ಸ್ ಅಲ್ವೆನೋ ಇದು. ಇವರೇನೂ ಮೇಷ್ಟ್ರು ಇದನ್ನೆ ಹೇಳಿಕೊಡ್ತಾರೆ. ಬೇರೆನೂ ಹೇಳಿಕೊಡಲ್ಲ-ಸ್ವಲ್ಪ ಆತರ ಶುರುವಾಯ್ತು. ಓಹೋ ಡಾನ್ಸ್ ಅಂದ್ರೆ ನೃತ್ಯ ಅಂದ್ರೆ ಈ ತರ ಇದೆ ಈತರ ಇದೆ. ಆಮೇಲೆ ನಾನು ದೊಡ್ಡ ದೊಡ್ಡರ ಹೆಸರೆಲ್ಲ ಹೇಳೊಕೆ ಶುರುಮಾಡ್ಬಿಟ್ಟೆ. So ಅವರಿಗೆ ಸ್ವಲ್ಪ. ಓಹೋ ಇವರೇನೋ ತಾಯಿ ಛಾಲೆಂಜ್ ಮಾಡಿ ಮಗಳನ್ನ ಮುಂದುವರಿಸ್ತಾರೆ ಅಂತ. ಹಿಂಗೆ ವರ್ಷಗಳು ಉರುಳ್ತಾ ಹೋಯಿತು. ಒಂದ್ಸಲ ನಾನು ರಜೆಕ್ಕೆ ಬಂದಿದ್ದಾಗ ಒಂದು ಪ್ರೋಗ್ರಾಂ ಮಾಡಿದೆ. ಪ್ರೋಗ್ರಾಂ ಮಾಡಿದಾಗ ಎಲ್ಲ ತಾಯಿಯಂದಿರು ಹೋಗಿಬಿಟ್ಟು. ಏನು ಮೇಷ್ಟ್ರೇ ಹೇಳಿಕೊಟ್ಟ ಡಾನ್ಸ್‌ನ್ನೇ ಹೇಳಿಕೊಡ್ತಿರಾ ಬೇರೆ ಏನೂ ಹೇಳಿಕೊಡಲ್ಲ. ಅವಳು ಉಷಾದಾತಾರ್ ನೋಡಿ ಏನೇನೋ ಹೊಸ ಹೊಸದಾಗಿ ತಿಲ್ಲಾನ ಅಂತಾ ಮಾಡ್ತಾಳೆ, ವರ್ಣ ಅಂತ ಮಾಡ್ತಾಳೆ. ನೀವು ಅದನ್ನೆನೂ ಹೇಳಿಕೊಟ್ಟಿಲ್ಲ. ಅವರ ತಾಯಿನೆ ಹಾಡ್ತಾರೆ, ತಮ್ಮ ಹಾಡ್ತಾನೆ, ಇನ್ನೊಬ್ಬ ಅಣ್ಣ ಮೃದಂಗ ನುಡಿಸ್ತಾನೆ. ಏನು ಸಾರ್, ಈಗ ಎಲ್ಲಾ ಕಡೆ ಅವರದೆ ಕೇಳ್ತಾರೆ ಪ್ರೋಗ್ರಾಂ. ನೀವೆನು ಬೇರೆ ಏನೂ ಮುಂದುವರಿಸಿಲ್ಲ. ನಮ್ಗೆ ಬೇಡ, ಇದು ಬೇಡ ಆ ತರದ್ದು ಹೇಳಿಕೊಡಿ ಅಂದಾಗ. ಅವರಿಗೆ ಆ ತರದ್ದು ಬರಲ್ಲ. ಕಥಕ್ಕಳಿ ತಾನೇ ಅವರಿಗೆ Touch ಇದ್ದಿದ್ದು. ಸರಿ Class ನಿಂತೇ ಹೊಯ್ತು. ಒಂದಿವಸ ಏನಾಯ್ತು ಅಂದ್ರೆ ಕರೆಕ್ಟಾಗಿ ಆ ಮಾಷ್ಟ್ರನ್ನು ಸುಮಾರು ದಿವಸ ನೋಡೆ ಇರ್ಲಿಲ್ಲ. ನನ್ನ ತಾಯಿ ಜೊತೆ ದೇವಸ್ಥಾನಕ್ಕೆ ಹೋಗ್ತಾಯಿದ್ದೆ. ಆ ಕಡೆಯಿಂದ ಮೇಷ್ಟ್ರು ಬರ್ತಾಯಿದ್ರು, ಅಮ್ಮಮ್ಮ ಮೇಷ್ಟ್ರು ಬರ್ತಿದಾರೆ ಅಂತ ಹೇಳಿದೆ. ನನಗೆ ಸ್ವಲ್ಪ ಸಿಟ್ಟಿತ್ತು ಮೇಷ್ಟ್ರು ಮೇಲೆ. ನನಗೆ ಹಳೇ ಸಿಟ್ಟು, ಅವಮಾನ ಮಾಡ್ಬಿಟಿದ್ರಲ್ಲ ಅಂತ. ಅದಕ್ಕೆ ನಾನು ಈ ಕಡೆ ಮುಖ ತಿರುಗಿಸಿದಾಗ, ನನ್ ತಾಯಿ ನೀನು ಮಾಡ್ತಿರೋದು ತಪ್ಪು ಹಾಗೆ ಮಾಡ್ಬಾರದು. ಅವರು

ಎಷ್ಟೇ ಆದ್ರು ಗುರುಗಳು ನಿನಗೆ. ಮನಸ್ತಾಪ ನನಗೆ ಅವರಿಗೆ ಆಗಿರೋದು. ಅವರು ಇಷ್ಟು ಹೇಳಿಕೊಟ್ಟಿದ್ದಕ್ಕೆ ನೀನು ಕಲಾಮಂಡಲಕ್ಕೆ ಸೇರಿದ್ದು, ಇಲ್ದಿದ್ರೆ, ಸೇರ್ತಿರಲಿಲ್ಲ. ಏನೇ ಇರಲಿ ನೀನು ಹೋಗಿ ಅವರ ಕಾಲ್ಮುಟ್ಟಿ ನಮಸ್ಕಾರ ಮಾಡು. ಅವರು ಅದನ್ನ ಸ್ವೀಕಾರ ಮಾಡ್ಲಿ, ಬಿಡ್ಲಿ, ನೀನು ಶಿಷ್ಯಳಾಗಿ ಗುರುದ್ರೋಹ ಮಾಡಬಾರದು, ಹೋಗು ಅಂದ್ರು. ರಸ್ತೆನಲ್ಲಿ ಓಡಿ ಹೋಗಿ ಎರಡು ಕಾಲು ಹಿಡ್ಕೊಂಡು ನಮಸ್ಕಾರ ಮಾಡಿಬಿಟ್ಟೆ. ಒಂತರಾ ಆಗ್ಬಿಡ್ತು ಅವರಿಗೆ, ಒಂತರಾ ಕಣ್ಣಲ್ಲಿ ನೀರು ಬಂದ್ಬಿಡ್ತು. ಆಮೇಲೆ ತಲೆ ಎಲ್ಲ ಸವರಿ ಏನಮ್ಮಾ ಏನು ಮಾಡ್ತಿ ಅಂತ ಕೇಳಿದಾಗ, ಎಲ್ಲ ಹೇಳಿದೆ ಇಂತಿಂತಾವರ ಹತ್ರ ಡಾನ್ಸ್ ಕಲೀತಿದೀನಿ ಹೀಗಿ-ಹೀಗಿದೆ ಅಂದಾಗ ಅವರಂದ್ರು ನನಗಿಂತ ಒಂದು ಹೆಜ್ಜೆ ಮುಂದೆ ಹೋಗಿಬಿಟ್ಟೆ ನೀನು ಪರವಾಗಿಲ್ಲ. ಒಳ್ಳೆ ಕಡೆ ಸೇರ್ಕೊಂಬಿಟ್ಟೆ. ಹಾಗೆ ಹೀಗೆ ಅಂದ್ಬಿಟ್ರು. ಆಮೇಲೆ ನಡಿ ಮನೆಗೆ ಹೋಗೋಣ ಅಂದ್ರು. ಮೇಷ್ಟ್ರು ನಂಜೊತೇಲಿ ನಮ್ ಮನೆಗೆ ಬಂದ್ರು. ಆಮೇಲೆ ಹಿಂದೆ ಒಂದು ಶೃಂಗಾರ ಲಹರಿ ಅಂತ ಒಂದು ಡಾನ್ಸ್ ಹೇಳಿ ಕೊಟ್ಟಿದ್ರು. ಅದು ಬಹಳ ಮಾಸ್ಟರ್ ಪೀಸ್ ಐಟಂ ನಂದು. ಅದೇನನ್ನಿಸ್ತೊ ಇವತ್ತು ನಾನು ಹಾಡ್ತಿನಿ ಆ ಡಾನ್ಸ್ ನನ್ ಮುಂದೆ ಮಾಡು. ನೋಡಂಗೆ ಆಗಿದೆ. ನೀನು ಮಾಡಿದಂತೆ ಯಾವ ಮಕ್ಕಳು ಮಾಡ್ಲಿಲ್ಲ. ಬರೋದು ಇಲ್ಲ ಅಂದ್ರು. ಅವರು ಹಾಡಿದ್ರು, ನಾನು ಡಾನ್ಸ್ ಮಾಡಿದೆ. ತುಂಬಾ ಸಂತೋಷ ಪಟ್ರು. ಮನೆಗೆಲ್ಲ ಕರೆದುಕೊಂಡು ಹೋದ್ರು ಹಣ್ಣು ಕೊಟ್ಟು ಎಲ್ಲಾ ಮಾಡಿ, ಮಾತಾಡಿ ಎಲ್ಲಾ ಆದ್ಮೇಲಿಂದ ಮತ್ತೆ ಅವರು ತಿರಗ ನಮ್ಮ ಜೊತೆನಲ್ಲಿ ಸ್ನೇಹ ಬೆಳಸಲಿಕ್ಕೆ ಪ್ರಯತ್ನಮಾಡಿದರು. ಮತ್ತೆ ಅಂದ್ರೆ ನನ್ನನ್ನಿಟ್ಟುಕೊಂಡು ಡಾನ್ಸ್ ಗೀನ್ಸ್ (ಕ್ಲಾಸ್ -ಗೀಸ್ ) ಮಾಡಬಹುದು ಅಂತ. ಅವಾಗ ನಮ್ ತಾಯಿ ಒಂದೇ ಮಾತು ಅಂದ್ರು. ಇಷ್ಟು ವರ್ಷ ನಮ್ ಮಗುವಿಗೆ ಹೇಳಿಕೊಟ್ರಿ. ನಾವು ಅದನ್ನ ಆ ಒಂದು ಕೃತಜ್ಞತೆ ಯಾವತ್ತು ಮರೆಯೊಲ್ಲ. ನನ್ ಮಗಳಿಗೆ ಯಾವತ್ತಿದ್ರು ಗುರು ಗುರುವೆ, ಮೊದಲನೆ ಗುರು ನೀವು ಒಪ್ಕೋತಿನಿ, ನಾನಾದ್ಮೆಲೆ Next ಗುರು ನೀವೇನೆ. ಅದನ್ನ ನಾವು ಮರೆಯೊಲ್ಲ. ಆದರೆ ನಮ್ಮಲ್ಲಿ ವಿಶ್ವಾಸವಿದೆ. ಬೇಡ ಇಲ್ಲಿಗೆ ಕೊನೆಯಾಗಿ ಬಿಡ್ಲಿ. ಏಕೆಂದರೆ ಹಗ್ಗ ಕಿತ್ತು ಹೋಗಿ, ಮತ್ತೆ ಅದನ್ನ ಗಂಟು ಹಾಕಿದ್ರೆ, ಮಧ್ಯೆ ಒಂದು ಗಂಟು ಇದ್ದೇ ಇರ್ತದೆ. ಯಾವಾಗ್ಲೂ ಕಿತ್ತು ಹೋಗದೇನೆ, ಒಳ್ಳೆ ರೀತೀಲೆ ದೂರ ಆಗೋದು ಒಳ್ಳೇದು. ಅಂತ ಅಂದ್ಬಿಟ್ರು. ಆಮೇಲೆ ಅವರು ಊರು ಬಿಟ್ಟು ಹೊರಟು ಹೋದ್ರು. ಆಮೇಲೆ ಹಾಸನದಲ್ಲೆ ಸೆಟ್ಲ್ ಆದ್ರು, ಹಾಸನ-ತಿಪಟೂರು ಎಲ್ಲೋ? ನಾನು ಆ ಮೇಲೆ ಐದು ವರ್ಷ ಆದ್ಮೇಲೆ ಕಲಿತುಕೊಂಡು ಬಂದೆ. ಬಂದು ಎಲ್ಲಾ ಆದ್ಮೇಲೆ ಚೆನ್ನಾಗಿ ಒಳ್ಳೇ ಮಾರ್ಕ್ ತಗೊಂಡು, ಎಲ್ಲ ಪಾಸಾಗಿ ಬಂದೆ. ಕೇರಳದಲ್ಲೂ ಬಹಳ ಅಚ್ಚು ಮೆಚ್ಚಿನವಳಾಗಿಬಿಟ್ಟೆ. ಅವರಿಗೇನೂ ಅಂದ್ರೆ, ಮೈಸೂರು ಸ್ಟೇಟ್ ನಿಂದ ಬಂದ್ ಬಿಟ್ಟಿದ್ದಾಳಂತೆ, ನನಗೆ ಹೆಸರು ಮೈಸೂರು ಕುಟ್ಟಿ, ಮೈಸೂರು

ಕುಟ್ಟಿ ಅಂತ. ಆಯ್ಯೋ ಕನ್ನಡ ಮಾತಾಡ್ತಾಳೆ. ಇಲ್ಲಿ ಬಂದು ಬಿಟ್ಟಿದ್ದಾರೆ ಅವಳ ತಾಯಿ-ತಂದೆ ಯಾವ ಒಂದು ಧೈರ್ಯದ ಮೇಲೆ ಬಿಟ್ಟಿದ್ದಾರೆ ಆ ಮಗುನ. ಅಂತ ಎಲ್ಲ ನನ್ನೇನೋ ಒಂದುತರ ಝೂಗಾರ್ಡನಲ್ಲಿ ಪ್ರಾಣಿನ ನೋಡ್ತಾರಲ್ಲ ಹಂಗಾಗಿ ಹೋಗಿಬಿಡ್ತು. ಅದೊಂದು ದೊಡ್ಡ ಪ್ರಚಾರ ಆಗಿ ಹೋಯ್ತು.

ವಿಜಯಾ: ನಿಮಗ ಅವಾಗ ಸಂತೋಷ ಆಯಿತಾ?

ಉಷಾ: ನನಗೆ ಸಂತೋಷನೇ ಒಂದು ತರ, ಒಂದು Special Treatment. ನಾವೆಲ್ಲಿ ಹೋದ್ರು Programನಲ್ಲಿ ಈ ಹುಡುಗಿ ಮೈಸೂರುನಿಂದ ಬಂದಿರೋದು. ಕರ್ನಾಟಕದ ಹುಡುಗಿ, ಮೈಸೂರು ಸ್ಟೇಟ್ ನಿಂದ ಬಂದಿರೋದು ಅನ್ನೋರು. ಅವರು ಹೋ ಮೈಸೂರು ಸ್ಟೇಟ್ ನಿಂದ ಬಂದಿಬಿಟ್ಟಿದಾಳೆ ಡಾನ್ಸ್ ಕಲಿಯೋಕೆ. ಕಲಾಮಂಡಲಂ ಎಷ್ಟು ಫೇಮಸ್ ಆಗಿಬಿಟ್ಟಿದೆ ನೋಡಿ. ಅಲ್ಲಿ ಮೈಸೂರು ಸ್ಟೇಟನಲ್ಲಿ ಫೇಮಸ್ ಆಗಿಬಿಟ್ಟಿದೆ. ಈ ಹುಡುಗಿಯಿಂದ ಅಂತ ಖುಷಿ ಪಡೋರು. ಹಂಗಾಗಿಬಿಟ್ಟು ಮೇಷ್ಟ್ರು ಅನ್ನೋರು-ಅವಳು ತುಂಬಾ ಚೆನ್ನಾಗಿ ಮಾಡ್ತಾಳೆ-ನಮ್ಮ ಹೆಸರು ಕಾಪಾಡ್ತಾಳೆ ಅಂತ ಎಲ್ಲ ಕಡೆ Full chance ನನಗೆ. ಸರಿ ಕಲಿತ್ಕೊಂಡು ಎಲ್ಲ ಚೆನ್ನಾಗಿ Marks ತಗೊಂಡು ಬಂದ್ಮೇಲೆ, ಬಿಟ್ಟು ಬರೋ ಟೈಮಲ್ಲಿ ಮನಸಿಗೆ ಬಹಳ ವ್ಯಥೆ. ಏಕೆಂದರೆ ಸೇರಿಕೊಂಡಾಗ ಏನು ದುಃಖ ಆಗ್ತಿತ್ತು. ಬರಬೇಕಾದರೆ ಅದೇ ದುಃಖ. ಮತ್ತೆ ನಾನು ವಾಪಾಸು ಬರಕಾಗಲ್ವಲ್ಲಾ, ಕಲಿಯೋಕಾಗಲ್ವಲ್ಲಾ ಅಂತ. ಮೇಷ್ಟ್ರಂದ್ರು ಇಲ್ಲ ಯಾವ ಟೈಮ್ ನಲ್ಲಿ ಬೇಕಾದ್ರು ಬಂದು ಕಲಿತ್ಕೋಬಹುದು ನೀನು. ಅಲ್ಲಿ ಕೇರಳ ಕಲಾ ಮಂಡಲಂಗೆ ನೀನು ಹೆಸರು ತರಬೇಕು. ಅಲ್ಲಿ ನೃತ್ಯ ಶಾಲೆಯನ್ನ ಓಪನ್ ಮಾಡ್ಬೇಕು. ಮುಂದೆ ಇನ್ನೂ ಹೆಚ್ಚಿನದಾಗಿ ಕಲಿಬೇಕು ಅಂತ ಆಶೀರ್ವಾದ ಮಾಡಿ ಕಳಿಸಿದ್ರು. ಬಂದ್ಬಿಟ್ಟೆ. ನಂದು Education ಅಲ್ಲಿಗೆ Break ಆಗಿಬಿಟ್ಟಿತ್ತಲ್ಲ. ಹುಡುಗಿಗೆ ಓದಿನಲ್ಲಿ ಏನೂ ಇಲ್ಲ ಅನ್ನೋದು ಶುರುವಾಗ್ಬಿಡ್ತು. ನಮ್ ಅಮ್ಮ ನೋಡು ನೀನು ಮತ್ತೆ ಸ್ಕೂಲ್ ಗೆ ಸೇರಿಕ್ಕೋ ಬೇಕು ಅಂದ್ರು. ನಾನು ಅಂದೆ, ನಾನಿನ್ನು ಹೋಗಲ್ಲ ನನಗೆ ನಾಚಿಕೆ ಹೋಗೋಕೆ ಸ್ಕೂಲ್‌ಗೆ ನೀ ಬಿಡ್ಸಿಬಿಟ್ಟಿದ್ದಿಯಾ, ನಾನು ಹೋಗಲ್ಲ. ನಾನು ಆರುವರ್ಷ ಆದ ಮೇಲೆ ಈ ಸ್ಕೂಲ್ ಗೆ ಹೆಂಗ್ ಹೋಗಾದು, ನಾನು ಹೋಗಲ್ಲ ಅಂದೆ. ನಮ್ಮ ಅಮ್ಮ ಅಂದ್ರು, ನೋಡು ನಾಳೆ ನಿನಗೆ ಎಲ್ಲಾದರೂ ಕೆಲ್ಸಸಿಗಬೇಕು ಅಂದ್ರೆ ಎಸ್.ಎಸ್.ಎಲ್.ಸಿ ಆಗಿದೆಯಾ ಅಂತ ಕೇಳ್ತಾರೆ. ಆ ಸರ್ಟಿಫಿಕೇಟ್ ಇಲ್ಲ ಅಂದ್ರೆ ನಿನಗೆ ಕೆಲ್ಸ ಸಿಗಲ್ಲ. ನೀನು ಓದಲೇಬೇಕು ಅಂದ್ರು. ನಮ್ ತಂದೆನೂ ಇಲ್ಲ ಅವಳು ಏನು ಹೇಳ್ತಾಳೆ ನಿಮ್ಮಮ್ಮ. ಅದನ್ನ ಕೇಳಬೇಕು ನೀನು. ಅವಳು ಹೇಳೋದು ಕರೆಕ್ಟ್ ಇದೆ. ಹೋಗು ಓದು ಅಂದ್ಬಿಟ್ರು. ತಿರುಗಿ ಆರನೇ ಕ್ಲಾಸ್ ಗೆ ಬಿಟ್ಟಿದ್ನೆಲ್ಲ, ತಿರುಗಿ ತಂದು ಸೇರ್ಸಿದ್ರು. ಆ ಸ್ಕೂಲ್ ಗೆ ನಾನು ಹೋಗಿ ಸೇರಿದ ಮೇಲೆ ಊರಿನೋರಿಗೆಲ್ಲ ಒಂದು ತರ. ಟೀಚರ್ಸ್‌ಗೆಲ್ಲ ಇಡೀ ಸ್ಕೂಲ್ ಬಿಲ್ಡಿಂಗ್‌ಗೆ, ಮಕ್ಕಳಿಗೆ

೧ ಸಾವಿರ ಜನ ಮಕ್ಕಳಿಗೆ ಖುಷಿ. ಉಪಾದಾತಾರ್ ನಮ್ ಸ್ಕೂಲ್‌ನಲ್ಲಿ ಸೇರಿಕ್ಕೊಂಡುಬಿಟ್ಟಿದ್ದಾಳೆ ಅಂತ ಹೇಳಿ. ತುಂಬಾ Friends ಜಾಸ್ತಿ ನನಗೆ. ಆಮೇಲೆ ಸ್ಕೂಲಲ್ಲಿ ಏನೇ ಫಂಕ್ಷನ್ ಆದ್ರು ಹೆಡ್ಮಿಸಸ್ ನನ್ನನ್ನೇ ಕರ್ಸೋದು. ಏನೇ ಆಗ್ಲಿ ಫೈನ್ ಆರ್ಟ್ಸ್ ನಿಂದೇ ಕಣಮ್ಮಾ ನೀನೇ ಮಾಡ್ಬೇಕು ಅಂದ್ಬಿಟ್ಟು. ಎಲ್ಲ ಜವಾಬ್ದಾರಿನಾ ನನಗೆ ಕೊಡೋರು. ಹಂಗು ಹಿಂಗೂ ಮಾಡಿ ಸರ್ಕಸ್ ಮಾಡಿ ಸರ್ಕಸ್ ಮಾಡಿ ಎಸ್.ಎಸ್.ಎಲ್.ಸಿ ಪಾಸಾದೆ. ಅಂದ್ರೆ ಸ್ಕೂಲ್ ಗೆ ನೆಟ್ಟಗೆ ಹೋಗ್ತಿರಲಿಲ್ಲ. ವರ್ಷದಲ್ಲಿ ೩ ತಿಂಗಳು ಸ್ಕೂಲ್ ಗೆ ಹೋಗ್ತಿದ್ದೆನೋ ಏನೋ ಅಷ್ಟೇನೆ, ಬಾಕಿದ್ದೆಲ್ಲ ಟೂರೇನೇ, ಆಮೇಲೆನು ಅಂದ್ರೆ ಕಲಾಮಂಡಲಂ ಬಿಟ್ಟ ಮೇಲೆ ಒಂದು ಕಂಡಿಷನ್ ಇದೆ. ಅವರು ಯಾವ ಟೈಮಲ್ಲಿ ಕಾರ್ಯಕ್ರಮಕ್ಕೆ ಕರದ್ರೂ ನಾವು ಯಾವುದೊಂದು ಸಂಭಾವನೆಯನ್ನು ಕೂಡ ಪ್ರತೀಕ್ಷೆ ಮಾಡಿದೇನೆ ಕಾರ್ಯಕ್ರಮಕ್ಕೆ ಹೋಗಬೇಕು ಅಂತ. ಅವಾಗ ಫಸ್ಟ್ ಪ್ರೋಗ್ರಾಂ ನನಗೆ ಏನಾಯಿತು ಅಂದ್ರೆ. ೧೯೬೬ ಇಸ್ವಿಯಲ್ಲಿ ಪೋರ್ ಬಂದರ್ ನಲ್ಲಿ ಗಾಂಧಿ ಹುಟ್ಟಿದ ಜಾಗ. ಅಲ್ಲಿ ಒಂದು ಕಾರ್ಯಕ್ರಮ. ಅಲ್ಲಿ ಅವಾಗ ಈ ನಮ್ಮಲ್ಲಿ ಒಂದು ಪದ್ಧತಿ ಇತ್ತು. ಆ ಗುಜರಾತಿಯೊರೆಲ್ಲ ಕೇರಳಕ್ಕೆ ಬಂದ್ರೆ ಕೇರಳದವರೆಲ್ಲ ಆರ್ಟಿಸ್ಟ್ ಗುಜರಾತಿಗೆ ಹೋಗೋದು. ಹಾಗೆ ಒಬ್ರು ಒಬ್ರು Cultural Exchange ಮಾಡಿಕೊಳ್ಳೋದು. ಅವರವರದನ್ನ... ಶಾಸ್ತ್ರೀಯ ನೃತ್ಯನೋ ಸಂಪ್ರದಾಯನೋ ತೋರಿಸೋದು. ಅದರಲ್ಲಿ ನನಗೆ ಕರೆಬಂತು. ನಿಮ್ ಮಗಳ್ನ ಕಳಿಸಿ ಅಂತ. ಅದು ಬಂದಾಗ ನಮ್ಮ ಅಮ್ಮನಿಗೆ ತುಂಬಾ ಖುಷಿ. ನೀನು ಕರ್ನಾಟಕದಲ್ಲಿ ಹುಟ್ಟಿ ಕೇರಳದಲ್ಲಿ ಕಲಿತು, ಗುಜರಾತ್‌ನಲ್ಲಿ Programme ಮಾಡ್ತಿ ಅಂದ್ರೆ ಎಷ್ಟು ಖುಷಿ ನೋಡು. ಅಂದ್ಬಿಟ್ಟು ನಮ್ಮಮ್ಮ ತಕ್ಷಣ ಒಪ್ಪಿಕೊಂಡು Telegramme ಕಳ್ಸಿಬಿಟ್ರು ನಮ್ ಮಗಳನ್ನ ಕಳ್ಸಸ್ತೀನಿ ಅಂತ. ಖುಷಿ ನಮ್ಮಮ್ಮನಿಗೆಲ್ಲ. ನಮ್ ತಮ್ಮಂದಿರಿಗೆಲ್ಲ ಖುಷಿ. ಹೇ ಡಾನ್ಸ್ ಕಲಿತುಕೊಂಡು ಎಷ್ಟು ಊರು ನೋಡಿದೆ. ನಮಗೆಲ್ಲ ಏನೂ ಇಲ್ಲ ಈ ಅರಸಿಕೆರೆ ಬಿಟ್ಟರೆ ಇನ್ನೆಲ್ಲಿಗೂ ಹೋಗಂಗೇ ಇಲ್ಲ ನಾವು. ಎಂತೆಂತಹ ಊರು ನೋಡ್ತಿಯಾ ನೀನು. ನೋಡು ಅಂದ್ಬಿಟ್ಟು, ಅವಾಗ ನಮ್ಮಮ್ಮ ಅಂದ್ರು ನೋಡು ಕಲೆಕಲಿತ್ರೆ, ಎಷ್ಟೊಂದು ಬಳಗ ಬೆಳೆಯಿತ್ತೇ, ಆಮೇಲೆ ನೀನು ಎಷ್ಟು ಒಂದು ಸಮಾಜದಲ್ಲಿ ಹೆಂಗೆ ಬೆಳಿಬೇಕು ಅನ್ನೋದು ಕಲಿತುಕೋತಿಯಾ ನೀನು ಅಂದು ಎಷ್ಟೊಂದು ಊರು ನೋಡ್ತಿಯಾ, ಜನಗಳ ಜೀವನ ನೋಡ್ತಿಯಾ, ಹೆಂಗ ಬೆರೀಬೇಕು ಅಂತ ಕಲಿತುಕೋತಿಯಾ ನಿನಗೆ ಇದೆಲ್ಲ ಒಳ್ಳೆ Education. ನೀನು ಹೋಗು ಅಂತ ಹೇಳಿ ಕಳ್ಸಿದ್ರು. ನಾನು ಹೋದೆ. First Programme ಅಲ್ಲಿ ಮಾಡಿದೆ. ಒಂದು ತಿಂಗಳು Full ಅವರ ಜೊತೆ Programme ಮಾಡಿಕೊಂಡು ಗುಜರಾತ್ ಇದಕ್ಕೆಲ್ಲ, ಹಿಂಗೆ ಪ್ರತಿವರ್ಷ, ಒಂದು ಪ್ರೋಗ್ರಾಂ ಮುಗಿಸ್ಕೊಂಡು ಬಂದ್ರೆ, ಮತ್ತೆ ೨ ತಿಂಗಳಿಗೆ ಕಾಗದ ಬಂತು. ಇದೆಲ್ಲ ಆಗಿ ಎಲ್ಲಾ ಆದ್ಮೇಲೆ ಏನಾಯ್ತು. ಒಂದ್ಸಲ ಒಂದು Letter ಬಂದುಬಿಡ್ತು. ಏನಂದ್ರೆ-ವೈಜಯಂತಿ ಮಾಲಾಗೆ

ನೀನು ಡಾನ್ಸ್ ಹೇಳಿಕೊಡಕೆ ಹೋಗ್ಬೇಕು. ಮೋಹಿನಿ ಅಟ್ಟಂ ಹೇಳಿಕೊಡೋಕೆ ಅಂತ. ೧೯೬೬ನೇ ಇಸ್ವಿನಲ್ಲಿ ಇರಬೇಕು. ನಮ್ ತಾಯಿಗೆ ನಂಬೋಕೆ ಆಗ್ಲಿಲ್ಲ. ಅವರು Under line ಮಾಡಿದ್ರು ಸಿನಿಮಾ ಸ್ಟಾರ್ ವೈಜಯಂತಿ ಮಾಲಾಗೆ ಮೋಹಿನಿ ಅಟ್ಟಂ ಹೇಳಿಕೊಡಬೇಕು. ನಮ್ಮಮ್ಮ ಅಂದ್ರು 'ನೋಡಿದೆಯಾ ನೀನು ಕಲೆ ಕಲಿತು ಎಲ್ಲೂ ದೇವರು ನಟರಾಜ ನಿನಗೆ ಮೋಸ ಮಾಡ್ಲಿಲ್ಲ. ಎಷ್ಟು ದೊಡ್ಡ ಫೇಮಸ್ಸು, ವೈಜಯಂತಿ ಮಾಲಾಗೆ ನೀನು ಡಾನ್ಸ್ ಹೇಳಿ ಕೊಡಾಕೆ ಹೋಗಾದು ಅಂದ್ರೇನು. ಎಷ್ಟು ಪುಣ್ಯ ನಿನಗೆ ಇದು ಅಂತ ಅಂದ್ಬಿಟ್ಟು. ನಮ್ಮಮ್ಮ ಅಂದು ತಕ್ಷಣಕ್ಕ ಬರೆದು ಹಾಕ್ಬಿಟ್ಟು. ಕೇರಳಾಗಿ ಕಳಿಸ್ತೀನಿ ಅಂತ ಹೇಳಿ. ಆಮೇಲೆ ಅಷ್ಟರಲ್ಲಿ ಊರಿನೋರಿಗೆಲ್ಲ ಹೇ ಇವಳು ಬರೀ ಬಾಯಲ್ಲಿ ಡಂಬಾಚಾರ ವೈಜಯಂತಿ ಮಾಲಾಗೆ ಇವಳೇನು ಡಾನ್ಸ್ ಕಲಿಸೋದು.ಇವಳು ನೋಡಿದ್ರೆ ಎಷ್ಟು ಸಣ್ಣ ಹುಡುಗಿ. ಎಲ್ಲ ಸುಳ್ಳು ಹೇಳ್ತಿದಾರೆ. ಸುಳ್ಳು ಹೇಳೋಕು ಇತಿ-ಮಿತಿ ಬೇಕು. ಹಾಗೆ-ಹೀಗೆ ಅಂತ ತುಂಬ ಜನ ಆಡಿಕೊಂಡ್ರು. ಅವಾಗ ನಮ್ ತಾಯಿ ಅಂದ್ರು ನೋಡಿ ಕಾಗದನು ಇಲ್ಲಿದೆ. ಅವರು ನಮಗೆ ಮಲೆಯಾಳಿ ಓದಕ ಬರಲ್ಲ ಅಂದ್ರು. ಓದಿ ತೋರ್ಸಿದಾಗ ಸುಳ್ಳಿರಬಹುದು ಅಂದು ನಂಬ್ಲಿಲ್ಲ. ಅಷ್ಟರಲ್ಲಿ ನಮ್ ತಾಯಿ ನಮ್ ತಂದೆ ಮನೆಕಡೆ, ತಾಯಿ ಮನೆ ಕಡೆ ಎಲ್ಲ ಕಾಗದಗಳನ್ನು ಬರೆದು ಹಾಕಿದ್ರು. ನಮ್ ಮಗಳು ಹೋಗ್ತಾ ಇದಾಳೆ ಅಂತ ಅಂದ್ಬಿಟ್ಟು. ಬಾಂಬೆನಲ್ಲಿ ಇರೋ Relativesಗೆಲ್ಲ ಬರೆದ್ರು ಹಿಂಗೆ ಅಲ್ಲಿ ನಮ್ ಮಗಳು ವೈಜಯಂತಿ ಮಾಲಾ ಮನೆಗೆ ಬರ್ತಾಯಿದಾಳೆ ಅಂತ. ಯಾರೂ ನಂಬ್ಲಿಲ್ಲ. ಸದ್ಯ ಕೇರಳಾಗೆ ಹೋದೆ. ಕೇರಳದಲ್ಲಿ ನನ್ ಟೀಚರ್ ಚಿನ್ನಮ್ಮಮ್ಮ ಅಂತ. ಮೋಹಿನಿ ಅಟ್ಟಂ ಹೇಳಿಕೊಟ್ಟೋರು. ಅವರಿಗೆ ತುಂಬ ವಯಸ್ಸಾಗಿತ್ತು. ಅವರು ಮೋಹಿನಿ ಅಟ್ಟಂ ಟೀಚರ್ . ಅವರು ದೇವದಾಸಿ Tradition familyಯಿಂದ ಬಂದವರು. ಅವರ ಜೊತೆನಲ್ಲಿ ಅವರಿಗೆ ಅಸಿಸ್ಟೆಂಟಾಗಿ ನನ್ನನ್ನ ಕಳಿಸಿದ್ರು. ವೈಜಯಂತಿ ಮಾಲಾ ಆವಾಗ Top Heroine ಅವಳು. ಬಾಂಬೆಗೆ ಹೋಗಿ ೩ ತಿಂಗಳು ಅವರ ಮನೇಲಿದ್ದೆ. ಮೋಹಿನಿ ಅಟ್ಟಂ ಚೆನ್ನಾಗಿ ತರಬೇಕು ಮಾಡಿ, ಇದುಮಾಡ್ದೆ. ಅವಾಗ ನಮ್ಮ ತಾಯಿ ಕಡೆ ಕೆಲವು Relations ಎಲ್ಲ ಇದು ನಿಜಾನೋ, ಸುಳ್ಳೋ ಅಂತ Investigate ಮಾಡೋದಕ್ಕೋಸ್ಕರ ಕಾದರು, ಕರೆಕ್ಟಾಗಿ ಅವರು ಮಾಡ್ಲಿಕ್ಕೆ ಬಂದಾಗ ವೈಜಯಂತಿ ಮಾಲಾನೂ ಅಲ್ಲೆ ಇದ್ರು. Class ಮಾಡ್ತಾ ಇದ್ದೆ ಅವರಿಗೆ ನಾನು. ಆಮೇಲೆ ಅವರಿಗೆಲ್ಲಾ ಗೊತ್ತಾಯ್ತು. ಓ ಇಲ್ಲ ಇದು ಇಷ್ಟು ಸಣ್ಣ ವಯಸ್ಸಿಗೆ ಇವಳು ಇಷ್ಟೆಲ್ಲ ಕಲಿತಬಿಟ್ಟಿದ್ದಾಳಲ್ಲ. ಕಲೆನಲ್ಲಿ ಇಷ್ಟೊಂದು ಇದೆಯಾ. ಒಂದು ಹೆಣ್ಣು ಹುಡುಗಿಯಾಗಿ ಇಷ್ಟೊಂದು ಮಾಡ್ತಾಯಿದಾಳಲ್ಲ. ಅಂತ ಅಂದ್ಬಿಟ್ಟು. ಆಮೇಲೆ ನನಗೇನು ಈಕಡೆ ನನ್ ತಂದೆ-ತಾಯಿಗೆ Financial ಸ್ವಲ್ಪ Help ಆಗೋಕೆ ಶುರುವಾಯಿತು ನಂದು. ಅಲ್ಲಿಗೆ ಹೋಗ್ಬಿಟ್ಟು ಬಾಂಬೆಯಿಂದ ವಾಪಸ್ ಬಂದೆ ನಾನು. ಕೆಲವರೆಲ್ಲ...ನಿಜವಾಗ್ಲೂ ಹೀಗೆಲ್ಲಾ ಆಯ್ತಾ ಫೋಟೋ ನೋಡಕೆ..ಕೆಲವೊಂದು, ಫೋಟೋ ತೆಗೆಸ್ಕೊಂಡಿದಿಯಾ

ಅಂತ ಬರೋರು. ಏನು ವೈಜಯಂತಿ ಮಾಲಾ...ಪೋಟೋ ತೋರಿಸಿದ್ರೆ. ಇದೆಲ್ಲ ಸುಳ್ಳು ಇದು ವೈಜಯಂತಿಮಾಲಾಂದು ಯಾವ್ದೊ ಕಟಿಂಗ್, ಫೇಸ್ಟ್ ಮಾಡಿರಬೇಕು. ಈತರ ಇದನ್ನೆಲ್ಲ ತೋರ್ಸಕಾಗುತ್ತಾ ನಾವು. ನಂಬಿದ್ರೆ ನಂಬಿ ಬಿಟ್ಟರೆ ಬಿಡಿ ಅಂದೆ. ಆವಾಗ ಎಸ್.ಎಸ್.ಎಲ್.ಸಿಗೆ ಬಂದ್ಬಿಟಿದೆ. Exam ಮುಂದಿನ ತಿಂಗಳು. ವೈಜಯಂತಿ ಮಾಲಾ ಡೈರೆಕ್ಟಾಗಿ ಒಂದು ಕಾಗದ ಬರೆದ್ರು ನನಗೆ. ರಷ್ಯಾದ ಒಂದು ಪ್ರೋಗ್ರಾಂ ಇತ್ತು. 'ಯಥಾಂಟ್' ಪ್ರೋಗ್ರಾಂಗೆ ಕರ್ಸಿದ್ರು. ಅವರು ನಮ್ಮ ಟ್ರೂಪ್ ನಲ್ಲಿದ್ದು ನೃತ್ಯ ನಾಟಕದಲ್ಲಿ ಪಾಲ್ಗೊಳ್ಳಬೇಕು. ನೀನು ಬರಬೇಕು ಅಂತ. ನನಗೆ ಅವಾಗ ಒಂತರ ಫಾರಿನ್ ಗೆ ಹೋಗಬೇಕಲ್ಲ. ಅಮ್ಮ ನಾನು ಹೋಗ್ತಿನಮ್ಮ ಅಂತ. ಅವಾಗ ನಮ್ ತಾಯಿ ಸ್ವಲ್ಪ ಎಳದ್ರು. ಬೇಡ ನೀನು ಹೋಗದು ಬೇಡ. ಇಲ್ಲಮ್ಮ ನೀನೆ ಮುಂದುವರಿ ಅಂತ ಅಂದ್ಬಿಟ್ಟು ನೀನೆ ಬೇಡ ಅಂದ್ರೆ ಹೇಗೆ. ಅಲ್ಲಮ್ಮ Educationನಲ್ಲಿ ಒಂದು ದಾಟೋ ಹಂತ ಇದೆಯಲ್ಲ. 10th Standardಗೆ ಬಂದಿದಿಯಾ ನಿನಗೆ ಮುಂದೆ ಒಂದು ಜೀವನೋಪಾಯಕ್ಕೆ Education important ನೀನು ಅಲ್ಲಿ ಹೋಗ್ಬಿಟ್ರೆ. ಮತ್ತೆ ನೀನು ಓದಾಕೆ ಇಷ್ಟಪಡಲ್ಲ. ಬೇಡ ಅಂದ್ರು. ನನಗೆ ತುಂಬಾ ಆಸೆ ಇತ್ತು. ಆದ್ರು ಕೂಡ ನಮ್ ತಾಯಿ ಈಗ ಬೇಡ ಏಕದಂ ಆಗಿ ಕಾಲಿಟ್ಟು ಅಷ್ಟುಷ್ಟು ದೂರ ಹತ್ತಬೇಡ ಮೆಟ್ಲನ. ಒಂದೊಂದೇ ಮೆಟ್ಟಲ್ನ ಹತ್ತು. ಇಲ್ಲ ಅಂದ್ರೆ ಏಕದಂ ಕೆಳಗೆ ಬಿದ್ದು ಬಿಡ್ತಿಯಾ ಎಂದು ಸಮಾಧಾನ ಮಾಡಿ ಮಾಡಿ ಆಸೇನ ಮುದುರಿಸಿ ಇಡಿಸಿಬಿಟ್ರು. ಹೋಗೋದು ಬೇಡ ಅಂತ ಹೇಳಿ ಹೋಗ್ಲಿಲ್ಲ. Exam ಎಲ್ಲಾ ಆದ ಮೇಲೆ ಬೊಂಬಾಯಿಗೆ ಹೋದೆ. ಅವಾಗ ವೈಜಯಂತಿ ಮಾಲಾ ಹೇಳಿದ್ರು. ನೀನು ಕರ್ನಾಟಕದಲ್ಲಿ ಏನ್ಮಾಡ್ತಿಯಾ ನೀನು. ನಿನಗಲ್ಲಿ ಏನು, ಯಾವ ರಾಜರಿದ್ದಾರೆ. ಹಿಂದಿನ ಕಾಲದಲ್ಲಿ ರಾಜ ಮಹಾರಾಜರೆಲ್ಲ ಕಲೆಗೆ ಉತ್ತೇಜನ ಕೊಡ್ತಿದ್ರು. ಆ ಕೊಂಪೆನಲ್ಲಿ ಏನು ಹೋಗಕೆ ಹೋಗ್ತಿಯಾ ಇಲ್ಲಿ ಬಂದು ಬಿಡು. ನಂದೇ ಸ್ಕೂಲ್ ಇದೆ. ನೀನು ನನ್ ಸ್ಕೂಲ್ ನಡೆಸ್ಕೊಂಡು ಹೋಗು. ನನ್ ಜೊತೇಲಿ Programme ಮಾಡು. ಬೇಕಾದಷ್ಟು ದುಡ್ಡು ಸಿಗುತ್ತೆ ಅಂತ ಎಲ್ಲ ಹೇಳಿದ್ರು. ಆವಾಗ ನನಗೆ ಖುಷಿ ಇತ್ತು. ಹೋಗ್ಬೇಕು ಅಂತ ವೈಜಯಂತಿ ಮಾಲಾ ಜೊತೇಲಿ ಇರೋದು ಅಂದ್ರೆ ಸಾಮಾನ್ಯಾನಾ ಅಂತ. ಊರಿಗೆ ಬಂದು ಹೇಳಿದೆ. ಅಮ್ಮ ನಾನು ಹೋಗ್ಬಿಡ್ತಿನಿ ಅಲ್ಲಿ ಅಂದ್ಬಿಟ್ಟೆ ನಾನು. ಇಲ್ಲಮ್ಮಾ ವೈಜಯಂತಿ ಮಾಲಾ ಎಷ್ಟಂದ್ರು Film ಸ್ಟಾರೇ ನಿನಗೆ ಅಂತನೆ ಒಂದು ಹೆಸರು ಬರಲ್ಲ. ವೈಜಯಂತಿ ಮಾಲಾ ಜೊತೆನಲ್ಲಿ ಉಷಾದಾತಾರ್ ಅನ್ನೊ ಹೆಸರು ಬರಲ್ಲ. ನೀನೇ ಒಬ್ಳೇ ಆಗಿ ಬೆಳವಣಿಗೆ ಆಗೋಕೆ ಆಗಲ್ಲ. ವೈಜಯಂತಿ ಮಾಲಾ ಟ್ರೂಪ್ ನಲ್ಲಿ ಒಬ್ಳು ಮೆಂಬರ್ ಆಗ್ತಿ ನೀನು. ನೀನು ನೀನೇ ಇಂಡಿವಿಜುವಲ್ ಆಗಿ ಬೆಳಿಬೇಕು. ಅಂತ ನಮ್ಮ ತಾಯಿ ಒಪ್ಪಲಿಲ್ಲ. ಇಷ್ಟು ವರ್ಷ ನಮ್ಮನೆಲ್ಲ ಬಿಟ್ಟು ಇರ್ತಿದ್ದೆ. ಸ್ವಲ್ಪ ದಿವಸ ನಮ್ ಜೊತೆಲಿ ಇರು ಅಂತಹೇಳಿ ಮನೇಲೆ ಇಟ್ಕೊಂಡು ಬಿಟ್ರು. So ಹಾಗಾಗಿ ನಾನು ಹೋಗ್ಲಿಲ್ಲ. ನಾನೇ ಒಂದು ಕ್ಲಾಸ್‌ನ್ನ

ಒಪನ್ ಮಾಡ್ಬಿಟ್ಟು ಅಲ್ಲಿ ಮಕ್ಕಳಿಗೆ ನೃತ್ಯ ಕಲಿಸೋಕೆ ಶುರುಮಾಡಿದೆ. ಅಷ್ಟೊತ್ತಿಗೆ ಜನಗಳಿಗೆ ನೃತ್ಯ-ಸಂಗೀತದಲ್ಲಿ ಸ್ವಲ್ಪ ಆಸಕ್ತಿ ಬಂದುಬಿಟ್ಟಿತ್ತು. ನೃತ್ಯದ ಬಗ್ಗೆ ಎಲ್ಲ ಒಂದೊಂದು ಒಳ್ಳೆ ಅಭಿಪ್ರಾಯ ಬಂದಿತ್ತು. ಆಮೇಲೆ ಕಾರ್ಯಕ್ರಮಗಳು ಬೇಕಲ್ಲ. ಎಷ್ಟುಂತ ಬರಿ ಊರೋರಿಗೆ ಮಾಡೋದು. ಅವಾಗ ಏನಾಯಿತು ಅಂದ್ರೆ ಒಂದೊಂದು ಹಂತದಲ್ಲಿ ಎಷ್ಟು ಅವಮಾನ ಆಯಿತು. ಆವಾಗ ನಮ್ಮ ಅರಸಿಕರೆಯಲ್ಲಿ ಹಾಸನ ಡಿಸ್ಟ್ರಿಕ್ಟ್ ನಲ್ಲಿ ದನದ ಜಾತ್ರೆ ತುಂಬಾ ಫೇಮಸ್ ತಾನೆ. ಅವಾಗ ಎನು ಅಟ್ರಾಕ್ಷನ್ ಅಂದ್ರೆ ಒಂದೊಂದು ಪ್ರತಿ ಭಾನುವಾರ ಒಂದೊಂದು ಒಳ್ಳೆ ಡಾನ್ಸರ್ -ಸಂಗೀತದವರನ್ನ ಕರ್ಸಿ, ಸಂಗೀತ-ನೃತ್ಯ ಕಾರ್ಯಕ್ರಮ ಕೊಡೊದು ಪದ್ಧತಿ ಇಲ್ಲಿ. ಆಗ ನಮ್ ತಾಯಿ ನಮ್ ತಂದೆ ಹೇಳಿದ್ರು-ಯಾಕೆ ನೀವು ಮಗುನ್ನ ಕರ್ಕೊಂಡು ಹೋಗಿ ಹಿಂಗೆಲ್ಲ ತೋರ್ಸಿ ಕೇರಳದಲ್ಲೆಲ್ಲ ಹೋಗಿಬಂದಿರೋದು ವೈಜಯಂತಿ ಮಾಲಾ ಜೊತೇಲಿ ಇದನ್ನೆಲ್ಲಾ ತೋರ್ಸಿ ಒಂದು ಕಾರ್ಯಕ್ರಮ ಕೇಳಿಕೊಂಡು ಬನ್ನಿ. ನಮ್ ತಂದೆ ಜೊತೆ ಫೋಟೋಸ್ ಎಲ್ಲ ತೊಗೊಂಡು ಹೋದೆ ನಾನು. ಹೋದಾಗ ದೊಡ್ಡ ದೊಡ್ಡ ಘಟಾನುಘಟಿಗಳೆಲ್ಲ ಇದ್ರು. ಅವರ ಹೆಸರನ್ನ ಹೇಳಾಕ ಇಷ್ಟಪಡಲ್ಲ ನಾನು. ಆಮೇಲೆ ಅವರಿಗೆಲ್ಲ ಏನ್ಮಾಡಿದ್ವಿ. ಹಿಂಗೆ ನೋಡಾಕೆ ಬಂದಿದೀವಿ ಹಿಂಗೆ ಅರಸಿಕೆರೆ. ಓಹೋ ಉಪಾದಾತಾರ್ ಗೊತ್ತು ಗೊತ್ತು. ಬಾಮ್ಮಾ ಕುತ್ಕೋ ಅಂದು ಕರೆಸಿ ಕೂಡ್ಸಿದರು. ಏನಾಗ್ಬೇಕಿತ್ತು ಅಂದ್ರು. ಅಲ್ಲ ಹೀಗೆ ನಿಮ್ದು ಎಗ್ಜಿಬಿಷನ್ ನಲ್ಲಿ ಒಂದು special programme ಒಂದು ಕೊಡಿ...ಹೀಗೆ ನಮ್ ಮಗಳು ತುಂಬಾ ಎಲ್ಲ ಕಲಿತು ಬಂದಿದ್ದಾಳೆ. ಹಾಗೆ ಹೀಗೆ ಅಂತ ತುಂಬ ಹೇಳಿದ್ರು ನಮ್ ತಂದೆ ಎಲ್ಲ. ಅವಾಗ ಒಂದ್ಸರಿ ನೋಡಿದ್ರು. ಅವರಿಗೆ ನೋಡಿಬಿಟ್ಟು ಒಂತರ ಮಾಡಿ ಕೊಡ್ತಿವಿ, ಇಲ್ಲ ಅಂತ ಹೇಳ್ಲಿಲ್ಲ. ಆಮೇಲೆ ಏನ್ಸರ್ ನೀವು ಕೊಡ್ತಿರಾ ಹೇಗೆ ಕಾರ್ಯಕ್ರಮ ನೀವು ಹೇಳಿದ್ರೆ. ನಾವು ಹೋಗಿ ಬೇಕಾದ ಅನುಕೂಲತೆಗಳೆಲ್ಲ ಮಾಡ್ಕೊಂಡು ಬರ್ತೀವಿ ನಾವು. ಕೇರಳದಿಂದ Instrument ನವರ್ನೆಲ್ಲ ಕರ್ಸಬೇಕು ಅಂದಾಗ. ಅವರು ಒಂದು ಮಾತು ಹೇಳಿಬಿಟ್ರು. ಓ-ನಿಮ್ ಮಗಳು ಯಾವ ದೊಡ್ಡ ಫಿಲ್ಮಾಸ್ಟಾರ್ ಅಂತ ನಾವು ಕಾರ್ಯಕ್ರಮ ಕೊಡಬೇಕು. ಒಳ್ಳೆ ಸಿನಿಮಾ ನಟಿ ಅಲ್ಲ, ಏನೂ ಅಲ್ಲ. ಅವಾಗ ಸಿನಿಮಾ ಕ್ರೇಜ್ ಜಾಸ್ತಿ. ಕೊಡಲ್ಲ ಅಂದ್ಬಿಟ್ರು. ತುಂಬಾ ಮನಸ್ಸಿಗೆ ನೋವಾಗಿ ಬಿಡ್ತು. ಸಿನಿಮಾ ನಟಿ ಆದ್ರೇನೆ ಡಾನ್ಸ್‌ನ್ನ ಮಾಡ್ತಾಳೆ ಇಲ್ಲಾಂದ್ರೆ ಮಾಡಲ್ವಾ? ನನ್ನ ತಂದೆ ತುಂಬ ಅವಮಾನ ಆಗೋಯ್ತು. ಇಷ್ಟು ವರ್ಷ ಎಲ್ಲಿ ಹೋಗಿ ಅವಮಾನ ಆಗ್ಲಿಲ್ಲ. ಏನಪಾ ಅಂದ್ಬಿಟ್ಟು. ನಾನಂದೆ ನೋಡಿ ನೀವಿಂಗೆ ಅವಮಾನ ಮಾಡ್ತಿದೀರಾ ಯಾರನ್ನೂ ಅವಮಾನ ಮಾಡ್ಬೇಡಿ. ಯಾರ್ಯಾರು ಹೆಂಗೆಂಗೆ ಆಗ್ತಾರ ಅಂತ ಗೊತ್ತಿಲ್ಲ. But ಇದೇ ಒಂದು ದಿವಸ ನೀವು ಹಾಸನದೋರು ಬಂದು ನನ್ನ ಮನೆ ಬಾಗಿಲಿಗೆ ಗೋಗರಿಯಾಂತ ಪರಿಸ್ಥಿತಿ ಬರುತ್ತೆ. ಬಂದೇ ಬರುತ್ತೆ. ಅವತ್ತು ನಾನು ನೋಡ್ಕೊತಿನಿ ಅಂದು ಕಣ್ಣಿರು ಹಾಕ್ಕೊಂಡು ಬಂದ್ಬಿಟ್ಟೆ. ಹಿಂಗ ಅನ್ಕೊಂಡೇನೋ ಬಂದ್ಬಿಟ್ಟೆ. ನಮ್

ತಂದೆ ಅಂದ್ರು ನೀನು ಹಂಗೆಲ್ಲ ಮಾತಾಡಬಾರದಾಗಿತ್ತು. ನೀನೇನು ಅವರಿಗೆ ಹೇಳಿದಂಗೆ ನೀನು ದೊಡ್ಡ ಡಾನ್ಸರ್ ಆಗ್ತಿಯಾ ನೀನು? ನಿನ್ ಮನೆ ಬಾಗಿಲಿಗೆ ಕಾಯ್ಕೊಂಡು ಕೂತ್ಕೊಂಡು Programme ಕೊಡು ಅನ್ನೋಕೆ. ನೀನು ಯಾಕೆ ಹಂಗೆಲ್ಲ ಮಾತಾಡ್ದೆ. ಇಲ್ಲ ನನಗೆ ಗ್ಯಾರಂಟಿ ಗೊತ್ತು. ನಾನು ಹಂಗೆ ಆಗೆ ಆಗ್ತಿನಿ. ಇವರು ಬಂದೇ ಬರ್ತಾರೆ ಅಂತ ನನ್ನ ಮನಸ್ಸಾಕ್ಷಿ ಹೇಳ್ತಿದೆ. ಅದಕ್ಕೆ ನಾನು ಹಂಗೆ ಹೇಳದ್ದು ಅಂದೆ. ಬಂದ್ಬಿಟ್ಟೆ. ಹೋಗ್ಲಿ ಬಿಟ್ಬಿಡಮ್ಮ ಅಂದ್ರು. ನಾನು ಅದಕ್ಕೆ ಬಿಟ್ಬಿಟ್ಟೆ. ಅದರ ಬಗ್ಗೆ ಯೋಚನೆ ಮಾಡ್ಲಿಲ್ಲ. ಕೊನೆಗೆ ಏನಾಯಿತು ಅಂದ್ರೆ ನನಗೆ ಬೆಂಗಳೂರ್ನಲ್ಲಿ ಬಂದ್ರನೇ ಕಲೆಯಲ್ಲಿ ಮುಂದುವರಿಯೋದು ಅನ್ನೋದು ಬಂದ್ ಬಿಡ್ತು. ಇಲ್ಲಿಗೆ ಬಂದು ಸೆಟ್ಲ್ ಆದ್ರನೆ, ಇನ್ನು ನಮ್ಮೂರಲ್ಲಿ ಅದಕ್ಕೆ ಅವಕಾಶ ಇಲ್ಲ ಅಂತ ಅಂದ್ಬಿಟ್ರು. ನಮಗೆ ಪರಿಚಯದ ಸಂಗೀತ ವಿದ್ವಾಂಸರಿದ್ದರು ಸುಬ್ಬು ಅಂತ ಹೇಳಿ. ಅವರನ್ನ ನಮ್ ತಾಯಿ ಕರಕೊಂಡು ಬಂದು ಹೇಳಿದ್ರು. ನಮ್ ಮಗಳಿಗೆ ಇಲ್ಲಿನೆ ಎಲ್ಲದರೂ ಇದ್ ಮಾಡಿ ಎಲ್ಲಾದರೂ ಕೆಲ್ಸಗಿಲ್ಸ ಕೊಡ್ಸಿ. ಸ್ವಲ್ಪ ಡಾನ್ಸ್ ಕಲೀಲಿ ಬೇಕಾದರೆ. ಇಲ್ಲಿ ಸ್ವಲ್ಪ ಕಲೆನಲ್ಲಿ ಮುಂದುವರೀಲಿ. ಅವಾಗ ಅವರು ಸುಮಾರು ಕಾರ್ಯಕ್ರಮಗಳನ್ನ ಮಾಡಿಸಿದ್ರು. ನನ್ ಕಡೇಲಿ. ನಮ್ ತಾಯಿದೇ ಹಾಡು. ರಾಧಾಕೃಷ್ಣಮೂರ್ತಿ ಅಂತವರದು ವಾಯೋಲಿನ್. ಇಲ್ಲಿ ಒಂದು ಮಹಿಳಾ ಸಮಾಜವಿದೆ ರಾಜಾಜಿನಗರದಲ್ಲಿ. ನೃತ್ಯ ಶಾಲೆಗೆ ಅವರೂ ಟೀಚರ್ ಹುಡುಕ್ತಾ ಇದ್ರು. ಹುಡುಕ್ತಿದ್ದಾಗ, ಅವಾಗ ನನ್ ಕಾರ್ಯಕ್ರಮ ನೋಡಿದ್ರು ಎಗ್ಸಿಬಿಷನ್‌ನಲ್ಲಿ. ತುಂಬಾ ಚೆನ್ನಾಗಿ ಮಾಡ್ತಿರಿ ಯಾಕೆ ನೀವು ನಮ್ಮಲ್ಲೆ ಟೀಚರ್ ಆಗಿರಬಾರದು. ಅವರು ಅಲ್ಲಿ ಕೆಲಸ ಹೇಳಿಬಿಟ್ರು. ಸೆಕ್ರೆಟರಿ ಮನೇಲೆ ಇದ್ದೆ. ನನಗೆ ಮನೆ ಇರ್ಲಿಲ್ಲ. ಅಲ್ಲಿ ಇದ್ದುಕೊಂಡು ನೃತ್ಯ ಮುಂದುವರಿಸಿಕೊಂಡು ಬಂದೆ. ಒಂದು ಹಂತ ಆದ್ಮೇಲೆ ಇನ್ನೊಂದು ಹಂತದಲ್ಲಿ ತಿರುಗ ಅಪಪ್ರಚಾರ ನನಗೆ ಊರಲ್ಲಿ. ಏನು ಅಂತ ಅಂದ್ರೆ ಉಷಾದಾತಾರ್ ಓಡೋಗಿ ಬಿಟ್ಟು ಯಾರ್ನೋ ಮದುವೆ ಮಾಡಿಕೊಂಡಿದ್ದಾಳೆ. ಅವರ ಅಪ್ಪ ಅಮ್ಮ ಬೆಂಗಳೂರಿನಲ್ಲಿ ಅವಳಿದಾಳೆ ಅಂತ ಹೇಳ್ತಾರೆ. ಅದು ಸುಳ್ಳು. ಏನಿಲ್ಲ. ಯಾರ್ನೋ ಕಟ್ಕೊಂಡು ಓಡಿ ಹೋಗಿ ಬಿಟ್ಬಿದ್ದಾಳೆ. ಇರಾನಿಗೆ ಹೋಗಿಬಿಟ್ಟಿದಾಳಂತಲ್ಲ. ಇರಾನ್ ಹೆಸರೇ ಗೊತ್ತಿರಲಿಲ್ಲ ಅವಾಗ. ನಮ್ ತಾಯಿ ಅವಾಗ ಕಾಗದ ಬರೆಯೋರು. ನೋಡಮ್ಮ ದೊಡ್ಡ ಶಹರದಲ್ಲಿದಿಯಾ. ನೀನು ಹೆಣ್ಣು ಹುಡುಗಿ. ನಂಬಿ ನಾನು ಬಿಟ್ಟಿದೀನಿ. ನೀನು ಹೆಣ್ಣುಮಗಳು ಯಾವತರ ಬಿಗಿಬಂದೋಬಸ್ತ್ ಇರಬೇಕು ಆ ತರ ಇರಬೇಕು. ಯಾವುದೇ ಕಾರಣಕ್ಕೆ ನಮಗೆ ಕೆಟ್ಟ ಹೆಸರು ಬರಬಾರದು. ನಾನು ಎಲ್ಲ ನಿನ್ನ ಆಸೆ ಆಕಾಂಕ್ಷೆನ ಪೂರೈಸ್ತಾಯಿದಿನಿ. ಆದರೂನೂ ನಮ್ ಮನೆತನಕ್ಕೆ ಕೆಟ್ಟ ಹೆಸರು ತರದಂತೆ ನೀನು ನಡಕೋಬೇಕು. ಬಾಳ ಹುಷಾರಾಗಿರು. ದೊಡ್ಡ ಪಟ್ಟನಕ್ಕೆ ಬಂದಿದಿಯಾ ನೀನು ಅಂದ್ಬಿಟ್ರು. ಯಾರ ಮನೇಲಿದಿಯಾ ಅವರಿಗೆನ ಜವಾಬ್ದಾರಿ ವಹಿಸಿಬಿಟ್ಟಿದಿನಿ. ಅವಾಗಿಂದ ನನಗೆ ಸ್ವಲ್ಪ ಭಯಾ-ಭೀತಿ ಇತ್ತು. ಎಲ್ಲೂ ಓಡಾಡ್ತ ಇರ್ಲಿಲ್ಲ. ಬೆಂಗಳೂರಿಗೆ

ಬಂದ್ರೂ ಕೂಡ. ಒಂದು ಸಲ ಬೆಂಗಳೂರಿಂದ ಊರಿಗೆ ಬಂದೆ. ಮನೆಯವರೆಲ್ಲ ರಿಸೀವ್ ಮಾಡಕೆ ಸ್ಟೇಷನ್‌ಗೆ ಬರುವಾಗ ಜನ ಉಷಾಗೆ ಮದುವೆಯಾಯ್ತಂತೆ ಅಂತೆಲ್ಲ ಕೇಳಿದರು. ನಿಜ ಅಕು ಮದುವೆ ಆಗಿದಾಳೆ ಅದಕ್ಕೆ ರಿಸೀವ್ ಮಾಡಾಕೆ ಬಂದಿದೀವಿ. ನೀವು ಬನ್ನಿ ನೋಡಿ ಅಂದರು. ಕೆಲವರು ಮನೆಗೆ ಬಂದುಬಿಟ್ಟು ಕುತ್ತಿಗೆಯಲ್ಲಿ ತಾಳಿ ಇದೆಯಾ ನೋಡ್ಕೊಂಬಾ ಅಂತ ಕಳ್ಸಿದಾರೆ. ಇವನ್ನೆಲ್ಲ ಬೇಕಾದಷ್ಟು ಫೇಸ್ ಮಾಡಿದಿನಿ. ನಮ್ಮಮ್ಮನೂ ತುಂಬಾ ಫೇಸ್ ಮಾಡಿದಾರೆ. ಅಂದ್ರೆ-ಆಗಿನ ಕಾಲದಲ್ಲಿ ಎಷ್ಟರಮಟ್ಟಿಗೆ ಒಂದು ಡಾನ್ಸ್ ಕಲಿತಾಳೆ ಅಂದ್ರೆ ಕೆಟ್ಟದಾಗಿ ನೋಡ್ತಿದ್ರು ಹೆಣ್ಮಕ್ಕಳನ್ನ ಅನ್ನೊದಕೆ. ಆಮೇಲೆ ಬೆಂಗಳುರಿಗೆ ಬಂದು ಸೇರಿಕೊಂಡೆ. ಸೇರ್ಕೊಂಡು ಬಹಳ ಕಷ್ಟಪಟ್ಟು ನಾನು ಕ್ಲಾಸಸ್ ಮಾಡಿ ದಿನ ಕಳೀತಿದ್ದೆ. ಒಂದ್ಸಲ ಬಿಇಎಲ್ ನಲ್ಲಿ ಯಾವುದೋ ಒಂದು ಕಾರ್ ನಿವಾಸ್ ನಲ್ಲಿ ಒಂದು ಪ್ರೋಗ್ರಾಂ ಆರೆಂಜ್ ಮಾಡಿದಾಗ ನನ್ನ Programme fix ಆಯಿತು ಅಲ್ಲಿ. ಅಷ್ಟರಲ್ಲಿ ನನಗೆ ತುಂಬ ಪತ್ರಿಕೋದ್ಯಮದವರೆಲ್ಲ ಬೇಕಾದಷ್ಟು ಪಬ್ಲಿಸಿಟಿಕೊಟ್ರು. ಪತ್ರಿಕೆಗಳಲ್ಲಿ ನನ್ನ ಬಗ್ಗೆ ಬರೆದಿದ್ದೋರು ಪ್ರತಿಯೊಬ್ಬರಿಗೂ ನಾನು ಎಷ್ಟು ಕೃತಜ್ಞತೆ ಹೇಳಬೇಕೆಂದರೆ ನನಗೆ ಅರ್ಥನೇ ಆಗಲ್ಲ. ಅವರ ಒಂದು ಬರವಣಿಗೆ ನನ್ನ ಎಲ್ಲೋ ಮೆಟ್ಟಿಲುದಿಗೆ ತಗೊಂಡು ಹೋಗಿ ನಿಲ್ಸಿಬಿಡ್ತು. ದಿನ ಬೆಳಗಾದರೆ ವಾರಕ್ಕೆ ಕನಿಷ್ಠ ಪಕ್ಷ ೩ ಪತ್ರಿಕೆ ಯಾವುದರಲ್ಲೂ ನೋಡಿದ್ರೂ ನಂದೇ ಫೋಟೋ. ಏನು ಎಲ್ಲ ಅನ್ನೋರು ಎನಮ್ಮ ಎಲ್ಲ ಪತ್ರಿಕೆಗಳನ್ನ ಕೊಂಡ್ಕೊಂಡು ಬಿಟ್ಟಿದಿಯಾ ನೀನು. ಯಾವ ಪತ್ರಿಕೆ ನೋಡಿದ್ರೂ ಮುಖಪುಟದಲ್ಲೂ ನೀನೆ, ಹಿಂದಿನ ಪುಟದಲ್ಲೂ ನೀನೆ, ಮಧ್ಯದ ಪುಟದಲ್ಲೂ ನೀನೆ. ಏನು ಇಷ್ಟೊಂದು ಅನ್ನೋರು ನನಗೆ. ನಾನಂದೆ ಇಲ್ಲ ಸಾರ್ ಏನೋ ಪುಣ್ಯ. ನಾನು ಯಾರ ಹತ್ರ ಏನೂ ಕೇಳಿಲ್ಲ. ಅವರೇ ನನ ಬಗ್ಗೆ ಇಷ್ಟೆಲ್ಲ ಬರೆದಿದ್ದಾರೆ. ಅವಾಗ ಬಾಳ ಪುಣ್ಯ ಮಾಡಿದಿಯಮ್ಮ-ಬಿಡು ನೀನು ಅನ್ನೋರು.

ಇದ್ರಿಂದ ನನಗೆ ಎಷ್ಟೊ ಅನುಕೂಲ ಆಯಿತು ಅಂದ್ರೆ BEL ನಲ್ಲಿ ಕರೆದು ನನ್ ಕಾರ್ಯಕ್ರಮ ನೋಡಿದ ಮೇಲೆ ಕೆಲ್ಸಕೊಟ್ರು. ಕಲ್ಚರಲ್ ಅಸಿಸ್ಟೆಂಟ್ ಅಂತ. ಅಲ್ಲಿ ನಾನು ಕೆಲ್ಸ ಮಾಡಿದೆ. ಬಹಳ ಕೆಲಸ ಮಾಡಿ, ಎಲ್ಲಾ ಆದ್ಮೇಲೆ ಒಂದು ಹೆಣ್ಣು ಅಂದ್ರೆ ನಿಮಗ ಗೊತ್ತಲ್ಲ ಸಮಾಜದಲ್ಲಿ ಕೆಲವರೆಲ್ಲ-ಅದ್ರು- ಸ್ವಲ್ಪ ಕಲಾವಿದರು ಅಂದ್ರೆ ಅವರು ಯಾವುದಕ್ಕೂ ಬೇಕಾದ್ರೆ Freeಯಾಗಿ ಸಿಗ್ತಾರೆ ಅನ್ನೋ ಒಂದು ಭಾವನೆ ಇದೆ. ಎಷ್ಟೆಷ್ಟು ಬಹಳ ಕಷ್ಟಪಟ್ಟೆ ನಾನು. ದೊಡ್ಡ ದೊಡ್ಡೋರು ಆಗ ಕಾರ್ಯಕ್ರಮಕ್ಕೆ ಅಂತಾನೆ ದೊಡ್ಡ ದೊಡ್ಡ ಸಂಘಸಂಸ್ಥೆಗಳು ಅಂದ್ರೆ Govt ಲೆವೆಲ್ ನಲ್ಲಿರೋ ಆಫೀಸ್ ಗಳಿರೋದು, ಅಲ್ಲಿ Programmeಗೆ ಬೇಕು ಅಂದಾಗ ನಮ್ಮ BEL ಫ್ಯಾಕ್ಟರಿಗೆ Phone ಮಾಡೋರು. ನೀವು ಇಂತ ಕಡೆ ಬಂದು ನಮ್ಮ ಆಫೀಸ್ ನಲ್ಲಿ ಇಂತೋರ್ನ Meet ಮಾಡಮ್ಮಾ ಅಂತ. ಅಲ್ಲಿ ಹೋದ್ರೆ. ಅವರೇನ್ ಕಲ್ತಿದಿಯಾ, ಎಷ್ಟು ವರ್ಷ ಕಲ್ತಿದಿಯಾ, ಏನೇನು ಕಾರ್ಯಕ್ರಮ ಕೊಡ್ತಿಯಾ ಅಂತೆಲ್ಲ ಮಾತಾಡೋರು. ಮಾತಾಡಿ ಎಲ್ಲಾ ಆದ್ಮೇಲೆ ಓ ಒಂದು

ಕಾರ್ಯಕ್ರಮ ಕೊಡಬೇಕಲ್ಲ. ಖಂಡಿತ ಕೊಡ್ತಿವಿ ಸರ್. ಎಲ್ಲಿ ಗೊತ್ತ ಕಾರ್ಯಕ್ರಮ. ಎಲ್ಲಿ ಅಂದ್ರೆ. ಮೈಸೂರು ಪ್ಯಾಲೆಸ್ ನಲ್ಲಿ ದಸರಾಗೆ ಅನ್ನೋರು. ಖುಷಿಯಾಗಿ ಬಿಡೋದು ಅಂದ್ರೆ. ಪ್ಯಾಲೆಸ್ ನಲ್ಲಿ Programme ಮಾಡಿದ್ರೆ ಖಂಡಿತ ಕೊಡ್ತಿವಿ ಅಂತ. ಎಲ್ಲ ಸರಿ ಮನೇಲಿ ಯಾರ್ಯಾರಿದಿರಾ ನೀವು. ನನಗೆ ಮನೆಯಲ್ಲಿ ಯಾರ್ಯಾರಿದರೆ ಅನ್ನೋದಕ್ಕೂವೆ ಈ ಪ್ರೋಗ್ರಾಂ ಕೊಡದುಕ್ಕುವೆ ಸಂಬಂಧ ಏನು. ನನಗೆ ಅಷ್ಟು ಬೇಗ ಗೊತ್ತಾಗ್ತಿಲ್ಲ. ಇನೊಸೆಂಟಾಗಿ ಉತ್ತರ ಕೊಡ್ತಿದ್ದೆ. ಇಲ್ಲ ನಾನು ನನ್ನ ತಮ್ಮ ಹಿಂಗೆ ಇದೀವಿ. ದೊಡ್ಡೋರು ಯಾರು ಇಲ್ವ. ಅಂದ್ಬಿಟ್ಟು... ಸರಿ ಕಾರ್ಯಕ್ರಮ ಕೊಡ್ತಿವಿ. ಆಮೇಲೆ ಏನೂ ಅಂದ್ರೆ ನೀನು ಒಂದು ಕೆಲ್ಸ ಮಾಡಮ್ಮ. ನೀನು ಹೋದ ಮೇಲೆ ಪೋನ್ ಮಾಡು. ಮನೆಗೆ ಬರ್ತಿವಿ ರಾತ್ರಿ, ಅಲ್ಲಿ ಬಂದು ಕಾರ್ಯಕ್ರಮ Fix ಮಾಡ್ತಿವಿ. ಮನೆಗೆ ಯಾಕೆ ಬಂದು ಇವರು ಕಾರ್ಯಕ್ರಮ.... ನಾನೇ ಕೇಳ್ದೆ ಇಲ್ಲ ಸಾರ್ ಮನೆಗೆ ಯಾಕ್ ಬರ್ತಿರಾ. ಕಾರ್ಯಕ್ರಮ ಫಿಕ್ಸ್ ಮಾಡೋಕೆ. ಇಲ್ಲೆ ಬಂದಿದೀನಲ್ಲಾ.... ಇಲ್ಲ ಅಲ್ಲಿ ಅದು ಮೀಟಿಂಗ್ ನಲ್ಲಿಟ್ಟು ಆಮೇಲೆ ನಾವು ಮನೆಗೆ ಬರ್ತಿವಿ. ಆಮೇಲೆ ನಾನು ಅಲ್ಲಿ ಸಮಾಜದಲ್ಲಿ ಹೋದಾಗ ಅವರ ಹತ್ತಿರ ಹೇಳಿದ್ರೆ ಸೆಕ್ರೆಟರಿ ಹತ್ರ ಅಯ್ಯೋ ಅವರು ಹೇಳಿದ್ದು ಈ ದೃಷ್ಟಿಯಿಂದ ಅವರು ಹೇಳ್ತಿರೋದು. ಹುಷಾರಾಗಿರಿ ನೀವು ಯಾರ್ನೂ ಮನೆಗೆ ಸೇರಿಸಬೇಡಿ ನೀವು ಹಿಂಗಿಂಗೆಲ್ಲ ಮಾಡಬಿಡ್ತಾರೆ. ಸಿನಿಮಾ ನೋಡ್ತಿರಲ್ಲಾ ಅಂದಾಗ, ಅವಾಗ ಗಾಬರಿ ಶುರುವಾಗಿ ಬಿಡೋದು. ದೇವರೇ ಏನು ಮಾಡೋದು ಈಗ. ಪೋನ್ ಮಾಡು ಅಂದಿದಾರಲ್ಲ ಅಂದಾಗ. ನೀವು ಪೋನೇ ಮಾಡ್ಬೇಡಿ ಅಂದ್ರು. ಅಯ್ಯೋ ಕಾರ್ಯಕ್ರಮ ಸಿಗಲ್ವಲ್ಲ. ಇಲ್ಲ ಅಂದ್ರೂನೂ ಮಾನ-ಮರ್ಯಾದೆ ಮುಖ್ಯಪ. ನಮ್ಮಮ್ಮ ಮೊದಲೇ ಹೇಳಿಬಿಟ್ಟಿದಾರೆ. ಆಮೇಲೆ ಮನೆಯಿಂದ ಆಚೆ ತಳ್ಳಿಬಿಡ್ತಾರೆ. ನನಗೆ ಅಷ್ಟೇನೆ ಪೋನೇ ಮಾಡ್ತಿರಲಿಲ್ಲ ನಾನು. ನಾನೇ ಆಮೇಲೆ ಬೇರೆ ದಿನ ಪೋನ್ ಮಾಡಿದಾಗ ಇಲ್ಲ ಇಲ್ಲ. ಆ ಕಾರ್ಯಕ್ರಮನಾ ಬೇರೆಯವರಿಗೆ ಕೊಟ್ಟಿದಿವಿ. So ಈ ತರ ಈತರ ಹೆಣ್ಮಕ್ಕಳನ್ನ ಯಾಕೆ ಕೀಳಾಗಿ ನೋಡ್ತಾರೆ ಇವರು. ಹೆಣ್ಮಕ್ಕಳು ಅಂದ್ರೆ ಅಷ್ಟೊಂದು ಅವರಿಗೆ ಇದಾ? ಅಂತ ಎಷ್ಟೊಂದು ಸಮಯ ಸಂದರ್ಭದಲ್ಲಿ ನಾನು ಜಗಳ ಕೂಡಾ ಆಡಿಬಂದಿದೀನಿ. ನನ್ನ ತಾಯಿ-ಅನ್ನೋರು. ನೋಡು ನಡೆಯೋ ದಾರಿಯಲ್ಲಿ ಮುಳ್ಳೆಲ್ಲ ಇರುತ್ತೆ, ಕಲ್ಲು ಮುಳ್ಳಲ್ಲ ಸರಗಿಸಿ ಸರಗಿಸಿ ನಡೀಬೇಕು. ಏಕದಂ ಆಗಿ ಯೋಚನೆ ಮಾಡದಲೆ ಕಾಲಿಡಬೇಡ ನೀನು. ಅದರಿಂದ ನಾನು ಪ್ರತಿಯಿಂದಕ್ಕೂ, ಯಾವುದೇ ಒಂದು ಮಾತು ಕೊಡಬೇಕಾದರೆ ಅಷ್ಟೇನೆ. ಬಹಳ ಯೋಚನೆ ಮಾಡ್ತಿದ್ದೆ ನಾನು. ತಕ್ಷಣ ಕೊಡ್ತಿರಲಿಲ್ಲ. ಏನ್ರಿ ಏನಾದ್ರೂ ಕೇಳಿದ್ರೆ, ಆಮೇಲೆ ಹೇಳ್ತಿನಿ ಅಂತಿರಲ್ಲ? ಯಾಕೆ ನಿಮಗೆ ಸ್ವಂತ ಬುದ್ಧಿ ಇಲ್ವಾ ಅನ್ನೋರು. ಅಲ್ಲ ಸ್ವಂತ ಬುದ್ಧಿ ಪ್ರಶ್ನೆಯಲ್ಲ. ಮನೇಲಿ ನನಗೂ ದೊಡ್ಡೋರು ಹೇಳೋರು-ಕೇಳೋರು ಇದಾರೆ. ನಮ್ಮ ತಂದೆ- ತಾಯಿನ ಕೇಳಿ ಮಾಡೋದು ನಾನು. ಇಲ್ದಿದ್ರೆ ಮಾಡೋದಿಲ್ಲ. ಸರಿ ಅಂದ್ಬಿಟ್ಟು ಆಮೇಲೆ ಹೋಗಿ, ಅದಕ್ಕೋಸ್ಕರ ಊರಿಗೆ

ಹೋಗೋದು ನಾನು. ಊರಿಗೆ ಹೋಗಿ ಮಾಡ್ಲ, ಯೋಚನೆ ಮಾಡೋದು. ಆಮೇಲೆ ನಾನೇನು ಮಾಡ್ಟೆ ನಮ್ಮ ತಂದೆನೋ, ತಾಯಿನೋ-ನಮ್ಮ ಅಣ್ಣತಮ್ಮಂದಿರು ಜೊತೆಲಿ ಎಲ್ಲಿ ಹೋದರೂ ಜೊತೇಲಿ ಕರಕೊಂಡು ಹೋಗದು. ಕಾರ್ಯಕ್ರಮಕ್ಕೂವೆ. ಅವರು ಏನ್ರಿ ಎಲ್ಲದಕ್ಕೂ ಬಾಡಿಗಾರ್ಡ್ ಹಂಗ ಬರ್ತಿರಾ. ನಿಮ್ಮ ಮನೆಯಿಂದ ಯಾರಾದ್ರೂ-ನೋಡಿ ಅವರೆಲ್ಲ ಹೆಂಗ ಬರ್ತಾರೆ-ಬಾಕಿಯೋರು. ಹೆಂಗೂ ಬರ್ಲಿ ಸರ್ ನಾನಂತು ಯಾರಿಲ್ಲದೆಲೆ ಒಂಟೊಂಟಿ ಎಲ್ಲೂ ಸುತ್ತಲ್ಲ ಬೆಂಗಳೂರಲ್ಲಿ ನನಗೆ ಕಲೆ ಜೊತೆನಲ್ಲಿ ಮಾನ ರಕ್ಷಣೆನೂ ಮುಖ್ಯ ಅಂತ ಹೇಳ್ಬಿಟ್ಟು. ಒಂದೊಂದು ಹಂತದಲ್ಲಿ ಬಹಳ ಕಷ್ಟಪಟ್ಟು ಮುಂದೆ ಬಂದೆ ನಾನು. ಮುಂದೆ ಬಂದೆ ಅಂದ್ರೆ. ಎಷ್ಟೋ ಸಲಿ ಬಂದಂತಹ ಕಷ್ಟಗಳನ್ನು ಅನುಭವಿಸಿದೀನಿ ಅಂದ್ರೆ, ಎಷ್ಟು ಹಿಂಬಾಲಿಸಿಕೊಂಡು ಬಂದೋರು ಇದಾರೆ. ಮನೇಲಿ ಹೇಳಿಲ್ಲ. ಹೇಳಿದ್ರೆ ಬೆಂಗಳುರು ಬಿಡಿಸಿಬಿಡ್ತಾರಲ್ಲ. ಆ ಭಯ ನನಗೆ, ನನಗೆ ಭಯ ಆಗೋದು. ಏನಾಗುತ್ತೋ ಏನೋ ಅಂತ ಭಯ ಆಗ್ಬಿಟ್ಟು, ಎಷ್ಟೋಸಲ ಮನೆಗೇ ಹೋಗ್ತಿರಲಿಲ್ಲ. ಅವತ್ತು ರಾತ್ರಿಗಳಲ್ಲಿ ನಮ್ಮ ಸೆಕ್ರೆಟರಿ ಇದ್ರಲ್ಲ. ಪಾಪ ಆಕೆಗೆ ಒಬ್ನೆ ಮಗ ಇದ್ದಿದ್ದು. ಅವನು ಫಾರಿನಲ್ಲಿ ಇದ್ದ. ಅವರ ಮನೆಗೆ ಹೋಗ್ಬಿಟ್ಟು. ಭಯ ಆಗುತ್ತೆ ಮನೆಗೆ ಹೋಗೋದು. ಸರಿ ಬೇಡ ಇಲ್ಲೆ ಉಳ್ಕೊಳ್ಳಿ ಅಂದ್ಬಿಟ್ಟು. ಒಂದೊಂದು ಹಂತದಲ್ಲಿ ಒಂದೊಂದು ಕಷ್ಟ ಅನುಭವ. ನನಗೆ ಏಕೆಂದರೆ ಎಲ್ಲಿ ಹೋದರೂ ಕ್ರೂರ ದೃಷ್ಟಿಗಳು ಒಂದು ಹೆಣ್ಣು, ಅದರಲ್ಲೂ ನೃತ್ಯ ಕಲಾವಿದರು ಅವರಿಗೇನು ಅಂದ್ರೆ ಬೋಲ್ಡ್ ಆಗಿರುತ್ತಾರೆ ಅನ್ನೋದು ಕೆಲವರಿಗೆಲ್ಲ. ಒಂದೊಂದು ಹಂತದಲ್ಲಿ ಒಂದೊಂದು ಕಾರ್ಯಕ್ರಮ ಕೊಡಾಕೆ ಹೋಗಬೇಕಾದರೆ ಬೇರೆ ರೀತಿನಲ್ಲಿ ನೋಡೋದು, ಬೇರೆ ರೀತಿಯ ಮಾತುಗಳು ಅವರದು. ಮಾತುಗಳ ಒಕ್ಕಣೆಗಳು ನಮಗೆ ಅರ್ಥ ಆಗ್ತ ಇರಲಿಲ್ಲ. ಆಮೇಲೆ ಅಂದ್ರು ನೀನು ತುಂಬ ಬಂದು ಕಲಿತುಕೊಳ್ಳೋದಿದೆ ಬೆಂಗಳೂರ್ನಲ್ಲಿ. ಹೀಗ್ಹಿಗೆ ಮಾತಾಡಿದ್ರೆ ಅರ್ಥ ಹಿಂಗಿಂಗೆ ಬರುತ್ತೆ ಅಂತ ಹೇಳೋರು ನನಗೆ. ಆಮೇಲೆ ಸ್ವಲ್ಪ ಹುಷಾರಾಗಿಬಿಟ್ಟೆ ನಾನು. BELನಲ್ಲಿ ಸಿಕ್ಕಿದ ಮೇಲೆ ನನಗೆ ಒಂತರ ಧೈರ್ಯಬಂತು. ಬೇಕಾದಷ್ಟು ಪಬ್ಲಿಸಿಟಿ ಸಿಕ್ತೊ ನನಗೆ. ನಮ್ಮ ರಾಜಶೇಖರ ಮೂರ್ತಿ ಅವರು Minister ಆಗಿದ್ರು Industrial Minister ಆಗಿದ್ರು. ಅವಾಗ Industrial Minister ಯಾರಾಗಿದರೋ ಅವರೆ Handal ಮಾಡ್ತಿದ್ರು Exbhition ಅನ್ನು. ಅವರು ನನ್ನ ಕಾರ್ಯಕ್ರಮ ನೋಡಿದ್ರು. ಅವರು ಉಷಾದಾತಾರ್‌ದು ಕಾರ್ಯಕ್ರಮ ನೀವು Fix ಮಾಡ್ಬೇಕು ಅಂದು ಬೆಂಗಳೂರಿನವರಿಗೆ ಬರೆದು ಕಳ್ಸಿಬಿಟ್ಟಿದಾರೆ. ಇದು ನನಗೆ ಗೊತ್ತಿಲ್ಲ. ಹಾಸನದವರು ಯಾರು ನೀವು ಯಾವ ಸಿನಿಮಾ ಸ್ಟಾರ್ ಅಂತ ಹೇಳಿದ್ರೋ, ಅವರು ಮನೆ ಹುಡ್ಕೊಂಡು ಹುಡ್ಕೊಂಡು ಇಲ್ಲಿಗೆ ಬಂದಿದ್ದಾರೆ. ತುಂಬಾ ವರ್ಷ ಆಗಿತ್ತಲ್ಲ. ಮರೆತು ಹೋಗಿಬಿಟ್ಟಿತ್ತು ನನಗೆ. ಏನಮ್ಮ ನಿಮ್ಮ ಜಿಲ್ಲೆಯವರೇ ನಾವು. ಅರಸಿಕೆರೆ-ಹಾಸನ ಡಿಸ್ಟ್ರಿಕ್ಟ್ ಹಾಸನದೋರು. ನಾವು ಗೊತ್ತಿಲ್ವ ಇಂತಿಂತೋರು, ಅಂದಾಗ ನನಗೆ ನೆನಪು ಬಂದು ಬಿಡ್ತು ಅವರಂದಿದ್ದು.

ಓಹೋ ಗೊತ್ತಾಯ್ತು ಗೊತ್ತಾಯ್ತು ನೀವು. ಯಾರು ಗೊತ್ತಾಯ್ತು ಹುಂ ಗೊತ್ತಾಯ್ತು ನೀವೇ ತಾನೇ ನನಗೆ ಅಂದಿದ್ದು ಯಾವ ಮಹಾ ಫಿಲ್ಮ್‌ಸ್ಟಾರ್ ಅಂತೇಳಿ. ಈಗ ಗೊತ್ತಾಯ್ತು. ಏನಕೆ ಬಂದಿದ್ದೀರಾ ಅಂದೆ. ಕಾರ್ಯಕ್ರಮ ಬೇಕು. ನನಗೆ ಕೊಡೋ ಪುರುಸೊತ್ತು ಇಲ್ಲ, ಫ್ರೀನೂ ಇಲ್ಲ. ಆ ಡೇಟ್‌ಗೆ ನನಗೆ ಆಗಲ್ಲ. ಇಲ್ಲ ಇಲ್ಲ ಮಾಡ್ಲೇಬೇಕು. ರಾಜಶೇಖರ ಮೂರ್ತಿ ಮಿನಿಸ್ಟ್ರು ಎಲ್ಲ ಬರ್ತಾ ಇದಾರೆ. ಯಾರು ಬೇಕಾದ್ರೂ ಬರ್ಲಿ ನನಗೆ ಪುರುಸೊತ್ತಿಲ್ಲ. ನಾನು ಮಾಡಲ್ಲ. ಯಾವ ಫಿಲ್ಮ್ ಸ್ಟಾರ್ ಸಿಗ್ತಾರೋ ಅವರ್ನ ಕರೆಸ್ಕೊಂಡು ಮಾಡ್ಕೊಳ್ಳಿ ನೀವು ನಾವೇನು ದೊಡ್ಡ ಫಿಲ್ಮ್‌ಸ್ಟಾರ್ ಅಲ್ಲ ಏನೂ ಅಲ್ಲ. ನಮ್ಮನಿಟ್ಟುಕೊಂಡು ಕಾರ್ಯಕ್ರಮ ಮಾಡಿದ್ರೆ. ಕಲೆಕ್ಷನ್ ಆಗೋದಿಲ್ಲ ಬೇಡ. ಏನಮ್ಮ ನಮ್ಮ ಬಾಣನ ನಮಗೆ ತಿರುಗಿಸಿ ಗುಂಡು ಹೊಡೆತಿಯಲ್ಲ ನೀನು, ಹೌದು ಆವತ್ತು ಹೆಂಗ ಅಂದಿದ್ರಿ, ನನ್ನ ಮನಸ್ಸು ಎಷ್ಟು ನೋವಾಗಿತ್ತು ಅದಕ್ಕೆ ಕಾರ್ಯಕ್ರಮ ಮಾಡಕ್ಕಾಗಲ್ಲ ಅಂದೆ ನಾನು. ಅದಕ್ಕೆ ಇಲ್ಲಮ್ಮ ಹಾಗೆಲ್ಲ ಅನ್ಬೇಡ. ಇವತ್ತು ನೀನು ನಿನ್ನ ಕಾರ್ಯಕ್ರಮಕ್ಕೆ ಒಪ್ಪೇ ಹೋಗಬೇಕು ನಾವು ಇಲ್ಲಿಂದ. ಮಿನಿಷ್ಟ್ರು ಆದರ್ಮೇಲೆ ನೋಟ್ ಹಾಕಿ ಕಳ್ಸಿದಾರೆ. ಯಾವ ಮಿನಿಷ್ಟ್ರು, ನಾನೇನು ಅವರ್ನೇನು ಕೇಳಿಲ್ವಲ್ಲ. ನೀವು ಅವರನ್ನ ಕೇಳಿಲ್ಲ. ನಿಮ್ಮ ಕಾರ್ಯಕ್ರಮ ನೋಡಿದಾರೆ ಎಗ್ಜಿಬಿಷನ್ ನಲ್ಲಿ. ನಿಮ್ದೆ ಕಾರ್ಯಕ್ರಮ ಆಗ್ಬೇಕು ಅಂತ ಬರೆದು ಕಳಿಸಿದಾರೆ. ಸರಿ. ನೋಡೋನ ನಮ್ಮ ತಂದೆನ ಕೇಳ್ತಿನಿ, ನನ್ ತಾಯೀನ ಕೇಳ್ತಿನಿ. ಅವರೇನು ಹೇಳ್ತಾರೋ ಕೇಳ್ಬಿಟ್ಟು ಆಮೇಲೆ ಹೇಳ್ತಿನಿ. ಅವರ್ನೇನು ಕೇಳೋದು. ನೀವು ಒಪ್ಪಿದ್ರೆ ಆಯ್ತಲ್ಲ. ಇಲ್ಲ ಇಲ್ಲ ಅವತ್ತು ಅವಮಾನ ಮಾಡಿದಾಗ ಅರು ನನ್ ಜೊತೆಲಿ ಇದ್ರು. ಅವರ್ನೂ ಕೇಳ್ಬೇಕು. ಅವರದೂ ಮಾನದ ಪ್ರಶ್ನೆ ಅಲ್ವಾ ನನಗೆ. ಅವರು ಮಾಡು ಅಂದ್ರೆ ಮಾಡ್ತಿನಿ ಕಾರ್ಯಕ್ರಮ. ಇಲ್ಲಾಂದ್ರೆ ಮಾಡಲ್ಲ ಅಂದೆ. ನಾನು ಹೋಗಿ ನಮ್ಮ ತಂದೆಗೆ ಹೇಳ್ದೆ. ಈಗ ನೀವು ಹೇಳಿದ್ರೆಲ್ಲ. ನೋಡಿ ಹಿಂಗೆ ಪರಿಸ್ಥಿತಿ ಬಂದಿದೆ. ಒಪ್ಪಿಕೋ ಈಗ ಹಾಗಾದ್ರೆ. ಆಮೇಲೆ ೩ ದಿವಸ ಆಟ ಆಡ್ಸಿ ಒಪ್ಕೊಂಡೆ. ನಾನೇನು Busy ಇರ್ಲಿಲ್ಲ. ಅಂದ್ರೆ ನನಗೆ ಮನಸಿಗೆ ನೋವಿತ್ತಲ್ಲ. ಮಾಡಬಾರ್ದು ನಮ್ ಡಿಸ್ಟಿಕ್ ನಲ್ಲಿ ಏನೂ ಮಾಡಬಾರ್ದು ಅಂತ ಮನಸ್ಸಿಗೆ ಬಂದು ಬಿಟ್ಟಿತ್ತು. ಆಮೇಲೆ ಒಪ್ಕೊಂಡು ಕಾರ್ಯಕ್ರಮ ಮಾಡಿದಾಗ ಸಿಕ್ಕಾಪಟ್ಟೆ ಅವರಿಗೆ Highest Collection ಅವತ್ತು. ಅದರಲ್ಲೂ ಡಿಸ್ಟ್ರಿಕ್ಟ್ ಹುಡುಗಿ ಬೇರೆ ಅಲ್ವಾ. ಬೆಂಗಳೂರಿಗೆ ಹೋಗಿ ಒಳ್ಳೆ ಹೆಸರು ತಂಗೊಂಡು ಬಿಟ್ಟಿದ್ದಾಳೆ ಅಂತ ಹೇಳಿ ಆಮೇಲೆ ಖುಷಿಯಾಗಿ, ಹೇಳಿದ್ದಕ್ಕಿಂತಲೂ ದುಡ್ಡು ಜಾಸ್ತಿಕೊಟ್ಟು, ಸನ್ಮಾನ ಮಾಡಿದ್ರು ಒಳ್ಳೆ ಕಾರ್ಯಕ್ರಮ ಮಾಡ್ಕೊಂಡು ಬಂದೆ.

ನನಗೆ ದೇವಾಲಯ ನೃತ್ಯ ಮಾಡುವುದಕ್ಕೆ ಕಲೀಲಿಕ್ಕೆ ಒಂದು ಅವಕಾಶ ಸಿಕ್ತು. ಅಂದ್ರೆ ಗವರ್ನಮೆಂಟನೋರು ಅವರು ಒಂದು ದಿನ ಹೊರಡಿಸಿದ್ರು ಈತರ ಅಡ್ವರ್ ಟೈಸ್ ಮೆಂಟ್. ಅವರು ಡೈರೆಕ್ಟಾಗಿ ಅಕಾಡೆಮಿಗೆ ಬರೆದಿದ್ರು. ಆಗ ಅಕಾಡೆಮಿಯಲ್ಲಿ

ಮಾಯಾರಾವ್ ಅವರ ಯಜಮಾನ್ರು ನಟರಾಜ ಇದರಲ್ಲ. ಅವರು ಸೆಕ್ರಟರಿ ಆಗಿದ್ರು. ಆಗ ಅವರು ನನ್ನ ಡಾನ್ಸ್ ಅಂದ್ರೆ ಬಹಳ ಇಷ್ಟ. ಸುಮ್ನೆ ಒಂದ್ಸಾರಿ ಮನೆಗೆ ಹೋದಾಗ. ಏನಮ್ಮಾ ಹುಡುಗಿ ನೀನೇನಾದ್ರೂ ಕಲಿತೀಯೇನೆ, ಹೋಗ್ತಿಯೇನೆ, ಕೂಚಿಪುಡಿ ಕಲಿಬೇಕು ಅಂತ ಇದ್ದೆಯಲ್ಲ ನೀನು. ನಮ್ಮ ಅಮ್ಮನಿಗೆ ಒಂದು ಆಸೆಯಿತ್ತು ನನ್ನ ಮಗಳಿಗೆ ಕೂಚಿಪುಡಿ ಕಲಿಬೇಕು ಅಂತ. ಏಕೆಂದರೆ ತಟ್ಟೆ ಮೇಲೆ ಚಂಬುಮೇಲೆ ಡಾನ್ಸ್ ಮಾಡೋದನ್ನ, ಒಬ್ರು ಫಿಲ್ಮ್ ಡೈರೆಕ್ಟರ್ ಇದ್ರು ನಾಯಕ್ ಅಂತ ಹೇಳಿ. ಅವರ ಮಗಳು ಫಿಲ್ಮ್‌ಸ್ಟಾರ್ ಇದ್ಲು ಇಲ್ಲಿ. ಚಂದ್ರಕಲಾ ಅಂತ. ಅವಳು ಇದನ್ನ ಡಾನ್ಸ್ ಮಾಡೋದ್ದನ್ನ ಹಾಸನ ಎಗ್ಜಿಬಿಷನ್‌ನಲ್ಲಿ ಕರಕೊಂಡು ಹೋಗಿ ನಮಗೆ ತೋರಿಸಿದ್ರು. ಅವತ್ತಿಂದ ನಮ್ಮಮ್ಮಗೆ ಏನಂದ್ರೆ ನಮ್ಮಗಳು ತಟ್ಟೆ-ಚಂಬು ಮೇಲೆ ಡಾನ್ಸ್ ಮಾಡಬೇಕು. ಕೂಚಿಪುಡಿನ ಅಂತ. ಅದಕ್ಕೆ ಒಂದ್ಸಲ ಮೇಷ್ಟ್ರುನ ಒಬ್ರುನ ಕರ್ಸಿ ಕಲಿತುಕೊಂಡಿದ್ದೆ. ಆಮೇಲೆ ಹಿಂಗ್ಹಿಂಗೆ ಬಂದಿದೆ ಏನ್ಮಾಡದಮ್ಮ ಅಂದೆ, ಹೋಗು ಇಂತ ಅವಕಾಶ ಸಿಗಲ್ಲ ನಿನಗೆ, ಇದೆಲ್ಲ ತಾನಾಗೆ ಬಂದಿರೋದು. ನಮಗೆ ಯಾವ ದುಡ್ಡು-ಕಾಸು ಖರ್ಚಿಲ್ಲ. ಸರ್ಕಾರವೇ ಕೊಟ್ಟು ಕಳಿಸ್ತಿದೆ. ನೀನು ಕಣ್ಮುಚ್ಚಿಕೊಂಡು ಹೋಗು ಅಂದ್ರು. ಆಮೇಲೆ ಎಲ್ಲಾ ಆದ್ಮೇಲೆ ರಜಾ ಕೊಡಬೇಕಲ್ಲ. BELನಲ್ಲಿ ಕೆಲಸಕ್ಕೆ ಸೇರಿ ಅವಾಗಿನ್ನೂ ಎರಡು ತಿಂಗಳು, ಪ್ರೊಬೆಷನರಿ ಪಿರಯಡ್ -ಯಾವ ಕೆಲಸ, ಕಳಿಸಲ್ಲ ಅತರ. ಏನ್ಮಾಡೋದು. ಅದೊಂದು ಕಾರಣ ಅಡ್ಡಿ ಬಂದ್ಬಿಡ್ತು. ನಾನು ಅವಾಗ ನಟರಾಜ್‌ಗೆ ಹೇಳ್ದೆ. ನಟರಾಜ್ ಏನ್ಮಾಡೋದು. ಹಿಂಗಿದೆ ಆಗಲ್ಲ ನನಗೆ ಅದು. ಯಾಕಾಗಲ್ಲ ನಿನಗದು. ಇಲ್ಲ ಹಿಂಗೆ ಪ್ರೊಬೇಷನರಿ ಪಿರಿಯಡ್ ನಲ್ಲಿದಿನಿ ಅಂದೆ. ಯಾರು ನಿನಗೆ ಲೀವ್ ಸ್ಯಾಂಕ್ಷನ್ ಮಾಡೋದು ಅಂದ್ರು. ಚೀಫ್ ಆಡ್ಮಿನಿಸ್ಟ್ರೇಟಿವ್ ಮ್ಯಾನೇಜರ್. ಯಾರು ತಿಳ್ಕೊಂಡು ಬಾ ಅಂದ್ರು. ಯಾರೂ ಅಂತ ತಿಳಕೊಂಡು ಬಂದಾಗ ಕೆ.ಬಿ.ಎಸ್.ರೆಡ್ಡಿ ಅಂತ. ಅಯ್ಯೋ ಕೆ.ಬಿ.ಎಸ್.ರೆಡ್ಡಿನೂ ಮಾಯಾಳು ಕ್ಲಾಸ್ ಮೇಟ್ ಅಂತ. ಅವರೆಲ್ಲ ಒಟ್ಟಿಗೆ ಓದಿದ್ದೋರು. ನೋಡಿ ನನಗೆ ಹೆಂಗೆ ಒಂದೊಂದು ಇನ್ಸಿಡೆಂಟ್ ಅಂದ್ರೆ ನನ್ನ ಜೀವನದಲ್ಲಿ ಮಾಯಾರಾವ್ ನೂವೆ ಅವರು ಕ್ಲಾಸ್ ಮೆಟ್. ರೆಡ್ಡಿ ಹತ್ತಿರ ನಾನು ಬಂದು ಮಾತಾಡ್ತಿನಿ ಅಂತ ಅವರೇ ಒಂದು ಟ್ಯಾಕ್ಸಿ ಮಾಡಿಕೊಂಡು ನಟರಾಜ್ ಬಂದು ರೆಡ್ಡಿ ಹತ್ತಿರ ಮಾತಾಡಿ. ರೆಡ್ಡಿ ಅಂದ್ರು ಸೆಂಟ್ರಲ್ ರೂಲ್ಸನ್ನೇ ಬ್ರೇಕ್ ಮಾಡ್ತಿರಲ್ಲ ನೀವು. ಪ್ರೊಬೆಷನರಿ ಪಿರಿಯಡ್‌ನಲ್ಲಿ ಹೆಂಗೆ ಕಳ್ಸೋದು ಆರು ತಿಂಗಳು ಅಂದ್ರು. ರೀ ನೀವು ಕಲ್ಚರಲ್ ಅಸಿಸ್ಟೆಂಟ್ ಅಂತ ಒಂದು ಪೋಸ್ಟ್ ಕ್ರಿಯೇಟ್ ಮಾಡಿದೀರಿ. ಇದನ್ನ ಯಾವ ಫ್ಯಾಕ್ಟರಿ ಮಾಡಿಲ್ಲ. ನೀವು, ಫ್ಯಾಕ್ಟರಿಗೆ ಒಳ್ಳೆ ಹೆಸರು ಬರಬೇಕು, ಒಳ್ಳೆ ಸ್ಪೋರ್ಟ್ಸ್‌ಮನ್, ಒಳ್ಳೆ ಕಲಾವಿದರು ನಿಮ್ಮಲ್ಲಿ ಇರಬೇಕು ಅಂದ್ರೆ, ನೀವು ಕೆಲವನ್ನ ತ್ಯಾಗ ಮಾಡ್ಲೆಬೇಕು. ನೋಡಪ್ಪ ನಾನು ನಿನ್ನತ್ರ ಬಂದಿದೀನಿ as a friend ನನ್ Misses friend ಅಂತ ಬಂದಿದಿನಿ. ನನ್ನ ಮಾನ ಕಾಪಾಡೋದು ನಿನ್ನ ಕೈಲಿದೆ ಅಂದ್ರು. ಆಯಿತು ಅಂದ್ಬಿಟ್ಟು

ಒಂದು ದಿವಸದಲ್ಲಿ ನನ್ನ ಫೈಲ್ ಮೂವ್ ಮಾಡಿಸಿ. ನಟರಾಜ್ ಮಾತ್ರ ನಾವು ಯಾವತ್ತೂ ಮರೆಯೋಕಾಗಲ್ಲ. ನಿನ್ ಕೆಲಸ ಆಯಿತು ಹೋಗಮ್ಮ.ನಾಳೆ ನಿನ್ನ ಪ್ಯಾಕಿಂಗ್ ರೆಡಿ ಮಾಡ್ಕೋ ಅಂದ್ಬಿಟ್ರು. ಪ್ರೊಬೆಷನರಿ ಪಿರಿಯಡ್ ನಲ್ಲಿ with salary ನನಗೆ ರಜ ಕೊಟ್ಟು ಕಳಿಸಿದ್ರು. ಅಲ್ಲಿ ಹೋಗಿ......

ವಿಜಯಾ : ಎಲ್ಲಿ?

ಉಷಾ : ಹೈದ್ರಾಬಾದ್ ನಲ್ಲಿ ಅಕಾಡೆಮಿನಲ್ಲಿದ್ದು ೬ ತಿಂಗಳು ನಾನು ದೇವಾಲಯದ ನೃತ್ಯಗಳನ್ನು ಕಲಿತುಕೊಂಡು ಬಂದೆ.

ವಿಜಯಾ: ಯಾವ ಗುರುಗಳು?

ಉಷಾ : ಅಲ್ಲಿ ನನಗೆ ದೇವಾಲಯ ನೃತ್ಯಗಳಲ್ಲಿ ನಟರಾಜ ರಾಮಕೃಷ್ಣ, ಆಮೇಲೆ ಇನ್ನೊಬ್ಬರು ಭರತಕಲಾ ಪ್ರಪೂರ್ಣ ಭೂರಿ ವೆಂಕಟರತ್ನಂ ಅಂತ. ರಾಜ ಮಹೇಂದ್ರಿಯಿಂದ. ಆಮೇಲೆ ಇನ್ನೊಬ್ಬ ದೇವದಾಸ ಇದ್ರು, ಶಾರೀರಿ ಮಾಣಿಕ್ಯಂ ಅಂತ ಅವರೆಲ್ಲ ರೆಗ್ಯುಲರ್ ಆಗಿ ನೃತ್ಯ ಮಾಡೋರು ದೇವಸ್ಥಾನದಲ್ಲಿ. ತುಂಬ Tradition ಆಗಿ ಬಂದಿರೋರು. ಅಲ್ಲಿ ಹೋಗ್ಬಿಟ್ಟು ಆ Tradition Form ಚೆನ್ನಾಗಿ ಕಲಿತುಕೊಂಡು ಬಂದೆ. ಹಂಪೆ ಫೆಸ್ಟಿವಲ್ ವಿಜಯನಗರೋತ್ಸವ ಅಂತ ಮಾಡ್ತಾ ಇದ್ರು. ಈಗ ಹಂಪಿ ಫೆಸ್ಟಿವಲ್ ಅಂತ ಮಾಡಿರೋದು. ಅವಾಗ ಅದರ ಎಲ್ಲ incharge ಎಂ.ಎಸ್ .ಸತ್ಯು ಅವರಿಗೆ ಕೊಟ್ಟಿದ್ರು. ಅದರ ಡಾಕ್ಯುಮೆಂಟ್ರಿ ಮಾಡಬೇಕು ಅಂತ. ಅವಾಗ ಈಗಿನ್ನಂಗೆ ಬಿಲ್ಡಿಂಗ್ ಇಲ್ಲ ಏನೂ ಇಲ್ಲ ಅಲ್ಲಿ. ಸುಮ್ನೆ ಹೆಂಗೆಂಗೆ ಪಾಳು ಬಿದ್ದಿದ್ದ ಜಾಗದಲ್ಲಿನೆ ವಿಜಯನಗರೋತ್ಸವ ಅಂತ ಅಂದ್ಬಿಟ್ಟು ಮಾಡಿದ್ರು. ಅದರಲ್ಲಿ ನನಗೆ ಕಾರ್ಯಕ್ರಮ ಕೊಟ್ರು, ಆ Lotus mahalನಲ್ಲಿ ಮಾಡ್ಬೇಕು ಅಂತ ಹೇಳಿ. ಅವಾಗ Traditional costumes ನಲ್ಲೆ ಮಾಡ್ಸಿಕೊಂಡು ನಾನಲ್ಲಿ ಹೋಗಿ Programme ಮಾಡಿ. ಅದೊಂದು ಡಾಕ್ಯುಮಂಟ್ರಿ ಆಗಿ ಥಿಯೇಟರ್ ಗಳಲ್ಲಿ ತೋರ್ಸಿದ್ರು ಅದನ್ನ. ಆಗ ಸಾಂಗ್ ಅಂಡ್ ಡ್ರಾಮ್ ಡಿವಿಜನ್ ಅಂತ ಮಾತ್ರ. ಆ ಒಂದು ಮುಖಾಂತರ ನನಗೆ ಪ್ರೋಗ್ರಾಂಗಳು ಬರೋಕೆ ಶುರುವಾತು. ಬೇಕಾದಷ್ಟು ಪ್ರೋಗ್ರಾಂ ಮಾಡ್ಬಿಟ್ಟೆ. ಹೀಗೆ ಕಾರ್ಯಕ್ರಮ ಕೊಡಬೇಕಾದರೆ ಒಂದ್ಸಲಿ ಏನಾತು ಅಂದ್ರೆ ಬಿ.ವಿ.ಕೆ.ಶಾಸ್ತ್ರಿ ಅವರೆಲ್ಲ ಇದನ್ನೆಲ್ಲ ನೋಡಿದ್ರಲ್ಲ. ಅವಾಗ ಇವರಿಗೆ ನಿಮಗೆ ಕಮಲಾದೇವಿ ಛಟ್ಟೋಪಾಧ್ಯಾಯ ಡೆಲ್ಲಿನಲ್ಲಿದಾರಲ್ಲ. ಅವರು ಒಂದ್ಸಲಿ ಎದಕ್ಕೊ ಬೆಂಗಳೂರಿಗೆ ಬಂದಾಗ, ಅವರು ಏನಾದ್ರು ಒಂದು ಆರ್ಟ್‌ಗೆ ಸಪರೇಟ್ ಗೆ ಮಾಡಬೇಕು, Tradition ಬಗ್ಗೆ ಏನಾದ್ರು ಮಾಡಬೇಕು ಅಂತಾ ಬಿ.ವಿ.ಕೆ. ಕಮಲಾದೇವಿ ಛಟ್ಟೋಪಾಧ್ಯಾಯ ಅವರಿಗೆ ಹೇಳಿದ್ರಂತೆ ಹೀಗೆ ಉಷಾದಾತಾರ್ ಅಂತ ಹೀಗೆ ಸ್ಪೆಷಲೈಜ್ ಮಾಡ್ಕೊಂಡು ಬಂದಿದಾಳೆ ನಟರಾಜ್ ರಾಮಕೃಷ್ಣ ಹತ್ರ. ಅಂದಾಗ ನನ್ ಕರೆಸಿದ್ರು. ಕರ್ಸಿಬಿಟ್ಟು ಕಾರ್ಯಕ್ರಮ ಕೊಡಾಕ

ಆಗುತ್ತೇನು ಅಂದ್ರು. ಇವತ್ತಂದ್ರೆ ಇವತ್ತೇ ಆಗಲ್ಲ ಸಾರ್ ಹಾಡೋರೆಲ್ಲ ಮದ್ರಾಸ್ ನಿಂದ ಬರಬೇಕು. ನನಗೆ ೨ದಿನ ಟೈಮ್ ಕೊಡಿ.ಇಲ್ಲಿ ಕಮಲಾದೇವಿ ಛಟ್ಟೋಪಾಧ್ಯಾಯ ಎಷ್ಟು ದಿವಸ ಇರ್ತಾರೋ ಗೊತ್ತಿಲ್ಲ ವಿಚಾರಿಸ್ತೀನಿ ಅಂದ್ಬಿಟ್ಟು. ಇಲ್ಲ ೩ ದಿವಸ ಬೆಂಗಳೂರಲ್ಲೇ ಇರ್ತಾರೆ ಅಂದಾಗ, ನಾನೇ ಖರ್ಚು ಮಾಡಿ, ಮದ್ರಾಸ್ ಗೆ Telegram ಕೊಟ್ಟು, ಅಲ್ಲಿಂದ ಆರ್ಟಿಸ್ಟ್ ಕರೆಸಿ, ಇಲ್ಲಿ ಸೇವಾ ಸಮಾಜ ಅಂತ ಇದೆಯಲ್ಲಿ ಮಲ್ಲೇಶ್ವರಂನಲ್ಲಿ, ಅಲ್ಲಿ ಕಮಲಾದೇವಿಯವರಿಗೋಸ್ಕರ ಒಂದು ಪ್ರೋಗ್ರಾಂ ಆರೆಂಜ್ ಮಾಡಿದ್ರು. ಅರೆಂಜ್ ಮಾಡಿ ಅಲ್ಲಿ ನಾನು ಈ ಭಾಮಾ ಕಲಾಪಂ ಮಾಡಿದೆ. ತುಂಬಾ ಖುಷಿಯಾಯ್ತು. ಖುಷಿಯಾಗಿ ನನ್ನ ಕರೆಸಿ ಮಾತಾಡ್ಸಿದ್ರು. ಇದರ ಬಗ್ಗೆ ಯಾರ ಇದನ್ನ ದೇವಾಲಯದಲ್ಲಿ ಯಾಕ ಮಾಡಬಾರದು. ಇದರದು Tradition ಇನ್ನೇನಿದೆ. ಅದನ್ನ ನೀನು ಕಲಿಬಾರದು ಅಂದ್ರು. ಅದಕೆ ನಾನಂದೆ ಅದಕ್ಕೆ ಮತ್ತೆ ಹೈದ್ರಾಬಾದ್‌ಗೆ ಹೋಗಬೇಕು. ಇಲ್ಲಿ ಮತ್ತೆ ಫ್ಯಾಕ್ಟರಿಯಲ್ಲಿ ಕಳಿಸಲ್ಲ ಹಾಗೆ ಹೀಗೆ ಅಂದಾಗ ಅವರು ಡೈರೆಕ್ಟಾಗಿ ಬಿ.ವಿ.ಕೆ ಅವರಿಗೆ ಹೇಳಿದ್ರು. ನೀವು ನಟರಾಜ್ ರಾಮಕೃಷ್ಣನ್ ಕಾಂಟೆಕ್ಟ್ ಮಾಡಿ. ಬಿ.ವಿ.ಕೆ ಅವರು ಬಹಳ ಅವಾಗ ಆಸಕ್ತಿ ವಹಿಸಿ ಮಾಡಿದಾಗ ಈ Tradition ಹಿಂಗೆ ಮಾಡ್ತಿದ್ರು ದೇವಾಲಯದಲ್ಲಿ ಅದನ್ನ ನೀವು ಮಾಡಬಹುದು. ಯಾರಾದ್ರು ಒಳ್ಳೆ ಆರ್ಟಿಸ್ಟ್‌ನ ಕೈಲಿ ಮಾಡಬಹುದು ಅಂದಾಗ ಇಲ್ಲಿ ನಟರಾಜ ರಾಮಕೃಷ್ಣ ಕರೆಸಿ ಮಿಂಟಿಂಗ್ ಎಲ್ಲಾ ಆಯಿತು. ಅವರು ಸೇರಿಕೊಂಡು BELಗೆ letter ಬರೆದು ತಿರುಗ ನನಗೆ Temple Tradition ಕಲಿಸಲಿಕ್ಕೆ ಮತ್ತೆ ಕರೆದುಕೊಂಡು ಹೋಗಿಬಿಟ್ರು ಹೈದ್ರಾಬಾದ್‌ಗೆ. ತಿರುಗಿ ನಟರಾಜ್ ರಾಮಕೃಷ್ಣ ಹತ್ರ ಹೋಗಿ ಅದೆಲ್ಲ ಕಲಿತುಕೊಂಡು ನಾನು ಬಂದು. ಆಮೇಲೆ ಇಲ್ಲೆಲ್ಲ ದೊಡ್ಡದಾಗಿ ಪ್ರಾಕ್ಟಿಸ್ ಎಲ್ಲಾ ಆದ್ಮೇಲೆ. ಇದು ಬೆಂಗಳೂರಿದು ಸಜ್ಜನರಾವ್ ಸರ್ಕಲ್‌ನಲ್ಲಿ ವಾಸವಿ ದೇವಸ್ಥಾನ ಇದೆಯಲ್ಲ ಅಲ್ಲಿ ಅದನ್ನ ಅಂದ್ರೆ ಹಿಂದೆ ದೇವದಾಸಿಗೆ ಯಾವತರ ರಾಜ ಮರ್ಯಾದೆ ಕೊಡ್ತಾಯಿದ್ರೊ. ಅದಂತೂ ನನ್ನ ಜೀವನದಲ್ಲಿ ಮರೆಯೋಕೆ ಆಗದೆ ಇರೋವಂತ ಸಂದರ್ಭ. ಆ ಒಂದು ವಾತಾವರಣ. ಅದೆಲ್ಲ ನಿಜವಾಗ್ಲೂವೆ ನನಗನಿಸಿಬಿಡ್ತು ನಾನು ಕಲೆ ಕಲಿತಿದ್ದಕ್ಕೆ ಸಾರ್ಥಕ ಆಯ್ತು. ಇನ್ನೇನು ಬದುಕಿದ್ರು ಸತ್ರು ಒಂದೇ ಇನ್ನ ಇಷ್ಟೊಂದು ಮಾನ ಸನ್ಮಾನ ಆಯಿತಲ್ಲ ಅಂದ್ಬಿಟ್ಟು ಅವತ್ತು ಖುಷಿಯಾಗಿ ಹೊಗ್ಬಿಡ್ತು. ಏನು ಜನ, ಟಿಕೆಟ್ ಇಟ್ರು.

ವಿಜಯಾ: ನಾನಿದ್ದೆ ಅವತ್ತು

ಉಷಾ: ನೀವಿದ್ರಾ ಅವತ್ತು. ಎಷ್ಟು ಜನಕ್ಕೆ ಟಿಕೆಟ್ ಸಿಗ್ಲಿಲ್ಲ. ಶಾಂತರಾವ್ ಯಾರ ಪ್ರೋಗ್ರಾಂಗೆ ಬರಲ್ಲ ಅವರು ಅದೇನದು ಮಾಡ್ತಾಳ, ನಾನು ಬರಬೇಕು ಅಂತ ಕೇಳಿಕೊಂಡು ಬಂದು ಕೂತಿದ್ರಂತೆ ಅವರಲ್ಲಿ. ದೇವರ ಹತ್ರ ಬೇಡಿಕೊಂಡೆ ಕಾರ್ಯಕ್ರಮ ನೃತ್ಯ ಮಾಡೋ ಶಕ್ತಿ ಕೊಡೊಪ್ಪ ದೇವರೇ ಅಂತ. ಅಷ್ಟು ಆ ತರ ವಾದ್ಯಗಳ ಸಮೇತ ನನ್ನನ್ನು Procession ನಲ್ಲೆ ಬರಮಾಡಿಕೊಂಡು ಆ ಕುಂಭಾರತಿ ಅದೂ ಇದೂ ಆ ವೈಭವ

ಎಲ್ಲ ನೋಡಿದಾಗ ನಾನಂದೆ ಇವತ್ತು ನನ್ನ ತಾಯಿ-ತಂದೆ ಕಷ್ಟಪಟ್ಟಿದ್ದು, ನಾನು ಕಷ್ಟ ಪಟ್ಟಿದ್ದು ಜನ್ಮ ಸಾರ್ಥಕ ಆಗ್ಬಿಡ್ತು ಅಂದ್ಬಿಟ್ಟೆ. ಆ ಒಂದು Temple Dance ಮಾಡಿದ ತಕ್ಷಣಾನೆ ದೇವಾಲಯ ನೃತ್ಯ ನನ್ನ ಲೈಫೇ ಟರ್ನಾಗ್ಬಿಡ್ತು ನನಗೆ. ಆಮೇಲೆ ನನ್ನ ಮದುವೆ ಕುರಿತು ಎಷ್ಟೋಜನ ನಮ್ಮ ತಂದೆ-ತಾಯಿನ ಪೀಡಿಸೋಕೆ ಶುರುಮಾಡಿದ್ರು. ಏನು ಮಗಳನ್ನ ದುಡಿಯೋಕೆ ಬಿಟ್ಟುಬಿಟ್ಟಿದಿರಾ, ಮಗಳು ದುಡಿದು ಸಾಕ್ತಾ ಇದಾಳೆ. ನಿಮಗೆ ದುಡಿಯೊಕ್ಕೋಸ್ಕರ ಮಗಳನ್ನ ಇಟ್ಕೊಂಡಿದಿರಾ. ಅವಳಿಗೇನು ಮದುವೆ-ಗಿದುವೆ ಮಾಡೋ ಯೋಚನೆ ಇಲ್ವಾ. ಅನ್ನೋರು. ನಾನು ಮದುವೆ ಆಗು ಅಂತ ಏನೋ ಹೇಳ್ತಿರಾ, ನಾಳೆ ಡಾನ್ಸ್ ಮಾಡಬೇಡ ಅಂದ್ರೆ ನನ್ ಗತಿ ಏನಾಗಬೇಕು. ನನಗೆ ಅದಕ್ಕೆ ಬೇಡ. ಆಗ ನಮ್ಮ ಅಮ್ಮಂಗೆ ಹೇಳಿದ್ರು. ಏನ್ ಹಂಗೆ ನಿಮ್ ಮಗಳನ್ನ ಸನ್ಯಾಸಿ ಆಗಿ ಇರ್ತಾಳ ಅಂತ. ನನಗೆ ಕೇಳೋರು. ನೀನು ಸನ್ಯಾಸಿ ಆಗಿ ಇದ್ದು ಬಿಡ್ತಿರೇನ್ರಿ ಮದುವೆ ಆಗಲ್ವಾ, ಮದುವೆ ಆಗಲ್ಲ ಅಂತ ಹೇಳಲ್ಲ ಸನ್ಯಾಸಿ ಆಗಿ ಇರ್ತಿನಿ ಅಂತ ಹೇಳಲ್ಲ. ನನಗೆ ಆಕಾಲಕ್ಕೆ ಏನ್‌ಕ್ರೆಜ್ ಕೊಡೊಂತವರು ಬಂದ್ರೆ ಮಾಡ್ಕೋತಿನಿ ಅದುವರೆಗೆ ಮದುವೆ ಮಾಡ್ಕೊಳಲ್ಲ. ಹಿಂಗೆ ಬೇಕಾದ್ರೆ ಕಲೆಗೆ ಜೀವನ ಇಟ್ಟುಬಿಡ್ತಿನಿ. ಅವಾಗ ನಮ್ಮ ನಟರಾಜ ರಾಮಕೃಷ್ಣ ನನಗೆ ಹೇಳಿದ್ರು. ನೀನು ಬಂದ್ಬಿಡು ನನ್ನ ಹತ್ರ, ನನಗೆ ಒಳ್ಳೆ ಶಿಷ್ಯರು ಯಾರೂ ಇಲ್ಲ. ಎಲ್ಲ ಕಲಿತುಕೊತಾರೆ ಹೋಗ್ತಾರೆ. ರಿಗಾರ್ಡ್ಸ್ ಇಲ್ಲ. ನನಗಂತೂ ಮದುವೆನೂ ಇಲ್ಲ ಮಕ್ಕಳೂ ಇಲ್ಲ ಏನೂ ಇಲ್ಲ. ನಾನು ನನ್ನ ಮಗಳನ್ನ ನೋಡಿಕೊಂಡಂಗೆ ನೋಡ್ಕೋತಿನಿ ನಿಮ್ಮ ಅಪ್ಪ-ಅಮ್ಮಂಗೆಲ್ಲ ಹೇಳ್ತಿನಿ. ನೀನು ಬಂದು ಹೈದ್ರಾಬಾದ್ ನಲ್ಲಿ ಉಳಿದುಕೊಂಡುಬಿಡು. ಮತ್ತೆ ಅಲ್ಲಿ ಹೋದ್ರೆ ಇದೆ. ನಾನು ಇಂಡಿವಿಷುವಲ್ ಆಗಿ ಬೆಳೆಯೋಕಾಗಲ್ವಲ್ಲ. ಕೆಲಸದಲ್ಲಿ ಬೇರೆ ಇದೀನಿ ಸಂಸಾರದ ಹೊಣೆ ಬೇರೆ ಸ್ವಲ್ಪ ಇತ್ತು. ನಮ್ಮ ತಂದೆಗೆ ಅಷ್ಟೇನೂ ಸಂಬಳ-ಗಿಂಬಳ ಬಂದು ಮನೇನ ಇದ ಮಾಡುವಂತ ಒಂದು ಇದು ಇರ್ಲಿಲ್ಲ. ಅದು ಸ್ವಲ್ಪ ಜವಾಬ್ದಾರಿ ತಗೊಂಡು ಆಮೇಲೆ ನನ್ನ ಇದರ ಬಗ್ಗೆ ನಾನು ಯೋಚನೆ ಮಾಡೋಣ ಅಂತ ಅಲ್ಲಿಗೂ ಹೋಗ್ಲಿಲ್ಲ. ಅಷ್ಟರಲ್ಲಿ ನನ್ನ ತಂದೆಗೆ ಒಳ್ಳೆ ಕೆಲಸ ಸಿಕ್ಕಿತು. ಇನ್ನು ಒಬ್ಬೊಬ್ಬರು ಅವರವರು. ಅಂದ್ರೆ ಓದೋದಕ್ಕೆ ಅನುಕೂಲಗಳಾಗೋಕೆ ಶುರುವಾಯಿತು. ಅದರ ಮಧ್ಯೆ ಇಂಡೋ-ಚೈನಾ ವಾರ್ ಆದಾಗ, ನಾನು ಇದಕ್ಕೆ ಹೋಗಿದ್ದೆ-ನೇಪಾಳ ಗಡಿಗೆ. ಅದು ೧೯೬೩ನೇ ಇಸ್ವಿಯಲ್ಲಿ. ನಮ್ ತಾಯಿಗೆ ಮತ್ತೆ ಕಲಾಮಂಡಲಂ ಲೆಟರ್ ಬರೆದ್ರು. ಏನೂ ಅಂದ್ರೆ ಇಂಡಿಯಾ ಮತ್ತು ಚೀನಾ ನಡುವೆ ಯುದ್ಧ ಆಗಿ ಕೂಲ್ಡ್ ಡೌನ್ ಆಗ್ತಿತ್ತು. ಅಂತ ಕಡೆ ಹೋಗಿ ನೀನು ಕಾರ್ಯಕ್ರಮ ಕೊಡೋದು ಅಂದ್ರೆ ಎಷ್ಟು ಸುದೈವ ನಿನಗೆ. ಅಲ್ಲಿಗೆ ಹೋದರೆ ನೀನು, ನಮ್ಮ ಸೈನಿಕರು ಎಷ್ಟು ಕಷ್ಟಪಡುತ್ತಾರೆ. ಅಲ್ಲಿನ ಜನ-ಜೀವನ ಏನು ನೀನು ನೋಡಬಹುದು. ಕಲೆ ಹ್ಯಾಗೆ ನಿನ್ನ ಒಂದೊಂದು ಕಡೆ ಕರಕೊಂಡು ಹೋಗಿ ಒಂದೊಂದು ಜಾಗನೂ ತೋರಿಸ್ತಾಯಿದೆ ಅಂತ ಹೇಳ್ಬಿಟ್ರು. ನಮ್ ತಾಯಿ-ತಂದೆನೂ ಒಪ್ಕೊಂಬಿಟ್ರು. ಕಲಾ ಮಂಡಲಂ ಜೊತೆನಲ್ಲಿ

ಸುಮಾರು ೩-೪ ತಿಂಗಳು ನೇಪಾಳ ಗಡಿ Full ಹೋಗಿ ಒಂದು ಕಾರ್ಯಕ್ರಮ ಕೊಟ್ಟು, ೩ ತಿಂಗಳು ನಮ್ ತಾಯಿಯ ಒಂದು ಕಾಗದ ಇಲ್ಲ- ಏನೂ ಇಲ್ಲ. ಬರೀ ಹಿಂಗನೆ ಬರಿಯಂಗೆನೆ ಇಲ್ಲ ಅಲ್ಲಿ ಕಾಗದ. ಸತ್ಲೇಜ್ ನದಿಹತ್ತಿರ ದೊಡ್ಡ ಆಕ್ಸಿಡೆಂಟ್ ಆಗಿ ನಮಗೆ. ಆ ಕಾಳಗಗಳು, ಆ ಗುಂಡಿನ ಶಬ್ದಗಳು ಅದೆಲ್ಲ ನೋಡ್ಬಿಟ್ಟು ನನಗೆ ಒಂಥರಾ ವಾಪಾಸು...

ವಿಜಯಾ: ಅಲ್ಲಿ ಯಾಕೆ ನೀವು ಡಾನ್ಸ್ ...

ಉಷಾ: ಅಲ್ಲಿ ಅವಾಗ Cultruralನವರು ಒಂದು Scheme ಮಾಡಿದ್ರು. ಯಾಕೆಂದ್ರೆ 'ಯೋಧರಿಗೋಸ್ಕರ ಮನರಂಜನೆ ಕಾರ್ಯಕ್ರಮ'ಅಂತ ಹೇಳಿ ಅವರೇನ್ಮಾಡೋರು. ಒಂದು Groupನವರಿಗೆ ವಾರದಲ್ಲಿ ಒಂದು ದಿನ Rest ಕೊಡೋರು ಆ ರೆಸ್ಟ್ ಡೇನಲ್ಲಿ ಏನೋ ಒಂದು ಮನೋರಂಜನೆ ಕಾರ್ಯಕ್ರಮ ಇರ್ಲಿ ಅಂತ ಹೇಳಿ ನಮ್ಮ ಕಾರ್ಯಕ್ರಮ. ಒಂಥರಾ ನಾವು ಒಂಥರಾ ಸೋಲ್ಜರ್ ಹಂಗೆ ಆಗ್ಬಿಟ್ಟದ್ವಿ. ಕಾರ್ಯಕ್ರಮಗಳನ್ನ ಕೊಡೋದು. ಆಮೇಲೆ ಆ ಮಿಲ್ಟ್ರಿ ಡ್ರಸ್‌ಗಳನ್ನು ಹಾಕಿ ಎಲ್ಲ ಕಡೆ ಕರಕೊಂಡು ಹೋಗೋರು ನಮಗೆ, ಆ ಟ್ರಕ್‌ನಲ್ಲಿ ಹೋಗೋದು-ಆ ವಾತಾವರಣ ನೋಡಿಬಿಟ್ಟು ನಮಗೆ ಒಂದು ಕೈನಲ್ಲಿ ಗನ್ ಕೊಟ್ಟರೆ ಯುದ್ಧಕ್ಕೆ ಹೋಗಿಬಿಡಬಹುದೇನೋ ಆಥರಾ ಇದು ಬಂದುಬಿಟ್ಟಿತ್ತು ನಮಗೆ. ಒಂದು ೩ ತಿಂಗಳು ಅಲ್ಲಿ ಹೋದ್ಮೇಲೆ ನಮಗೆ ಒಳ್ಳೆ ಸರ್ಟಿಫಿಕೇಟ್ ಸಿಕ್ತು. ಅವಾಗಲೂ ನಮ್ ತಂದೆ-ತಾಯಿ ಬೈಸಿಕೊಳ್ಳೋದೆ. ಎಲ್ಲಾ ಕಡೆ ಬೈಸಿಕೊಳ್ಳೊದೆ ಇವ್ರು... ಆಮೇಲೆ ಕೊನೆಗೆ ಅವರು ಮಗಳು ಹೇಳ್ತಾಳೆ, ಅವರಿಗೆ ಬುದ್ಧಿ ಇಲ್ಲ. ಅಂತ ತಂದೆ-ತಾಯಿ ನಿವ್ಯಾಕೆ ಕುಣಿಬೇಕು ಸಾಕು ಡಾನ್ಸ್ ಎಲ್ಲ ನಿಲ್ಸಿ ಅಂತ. ಆದರು ಇಲ್ಲ ನನಗೆ ನಾನಂದೆ 'ಕಲೆನೆ ಜೀವನ ಏನಿದ್ರೂ ಕಲೆನ ಮೊದಲನೇ ಗಂಡ ಆಮೇಲೆ ಮದುವೆಯಾದ ಗಂಡ' ಅಂತ ಡಿಸೈಡ್ ಮಾಡ್ಬಿಟ್ಟಿದ್ದೆ. ಅದಕ್ಕೆ ನಾನು ಹೇಳ್ದೆ ಮದುವೆ-ಗಿದುವೆಗೆ ನಿನಗೆ ಕೊಡಲ್ಲ. ನಾನು ಸಾಧನೆ ಮಾಡಬೇಕು. ಅವಾಗೆಲ್ಲ ಜಾಸ್ತಿ ಕಲಿಬೇಕು, ಕಲಿಬೇಕು ಅಂತ ಇಚ್ಚೆ ಇದ್ದದ್ದರಿಂದ ಬೇಕಾದಷ್ಟು ಕಲಿಯೋಕೆ ಅನುಕೂಲ ಆಯ್ತು. ನನಗೆ ಕೇರಳಗೆ ಹೋದೆ. ಅಲ್ಲಿ ತಿರುಗಿ ಕಲಿತುಕೊಂಡೆ, ಸ್ವಲ್ಪ ದಿವಸ ಆದ್ಮೇಲೆ ಆಂಧ್ರಗೆ ಹೋಗಿ ಕಲಿತುಕೊಂಡು ಬಂದೆ, ಆಮೇಲೆ ಮೈಸೂರು ಶೈಲಿ ನೃತ್ಯ ಕಲೀಬೇಕು ಅಂತ ಹೇಳಿ ಜೇಚಮ್ಮ. ರಾಜರ ಆಶ್ರಯದಲ್ಲಿದ್ದವರು ಅವರೆಲ್ಲ ಜೇಚಮ್ಮನವರನ್ನ ಮನೆಗೆ ಕರಕೊಂಡು ಬಂದು ಮನೇಲಿಟ್ಟುಕೊಂಡು ಕಣ್ಣು ಕಾಣ್ತಿರಲಿಲ್ಲ ಅವರಿಗೆ ಅವಾಗ ಅವರ ಹತ್ತಿರ ಡಾನ್ಸ್ ಕಲಿತೆ. ವೆಂಕಟಲಕ್ಷ್ಮಮ್ಮನವರ ಹತ್ತಿರ ನೃತ್ಯ ಕಲಿಯುವಂತಹ ಸೌಭಾಗ್ಯ ಸಿಕ್ತು. ಅಕಾಡೆಮಿನವರೆ ಅವಾಗ ಮಾಡಿದ್ದು. So ಹೀಗಾಗಿ ಏನಾಯ್ತು ನನಗೆ ಕಲಿಕೆ ಕಡೆ ಜಾಸ್ತಿ ಇಂಟರೆಸ್ಟ್ ಇದ್ದುದರಿಂದ ನನಗೆ ಈ ಮದುವೆ ಕಡೆ ಅಂತ ಇಂಟರೆಸ್ಟ್ ಇರ್ಲಿಲ್ಲ. So ಅದೇ ಅಯ್ತು. ಕೊನೆಗೆ ಏನಂದ್ರೆ ಎಷ್ಟಾದ್ರೂ, ಎಷ್ಟು ದಿವಸ ಒಂಟಿ ಹೆಣ್ಣು ಹಿಂಗೆ ಎಲ್ಲ ಕಡೆ ಒಬ್ಬಳೇ ಒಬ್ರು ಆಸರೆ ಬೇಕು. ಎಲ್ಲ ಅವರವರ ಜೀವನದಲ್ಲಿ ಅವರವರು

ಸೆಟ್ಲ್ ಆಗಿ Busyಆಗಿ ಹೋಗಿಬಿಡ್ತಾರೆ. ನಮಗೆ ಕೊನೆಗೆ ಯಾರೂ ಸಿಕ್ಕೋದಿಲ್ಲ. ಎಷ್ಟು ದಿವಸ ಶಿಷ್ಯರನ್ನು ನಂಬಿಕೊಳ್ಳಕ್ಕೆ ಸಾಧ್ಯ ಅಲ್ವಾ. ಅಂತ ಅಂದ್ಬಿಟ್ಟು ಕೊನೆಗೆ ಹುಡುಕ್ತಾ ಇರಬೇಕಾದರೆ ಹಾಗೆ ನನಗೆ ಎನ್‌ಕ್ರೇಜ್ ಕೊಡೋಂತವರೆ ಒಬ್ರು ಸಿಕ್ಕಿದ್ರು. ಗಂಡ ಸಿಕ್ಕಿದ್ರು. ಸತ್ಯಕುಮಾರ್. ಅವರು ಯೋಗ ಎಲ್ಲ ಮಾಡಿದವರು. ಅವರ ಜೊತೆನಲ್ಲಿ ನಂದು ಮದುವೆನೂ ಆಯಿತು. But ಆದರೂ ಕೂಡ ಅಪೋಸ್ ಇದ್ದೆ ಇತ್ತು.

ಕೆಡೋರು ಎಲ್ಲಿ ಬೇಕಾದ್ರು ಕೆಡಬಹುದು. ಕಲಾವಿದರು ಖಂಡಿತ ಕೆಡಲ್ಲ ಅಂತ ಹೇಳ್ತಿದ್ದೆ ನಾನು. ಕಲಾವಿದರಿಗೆ ಸ್ವಲ್ಪ ಭಯ ಇರುತ್ತದೆ. ಳ ಜನಗಳ ಮಧ್ಯದಲ್ಲಿ ಸಮಾಜದಲ್ಲಿ ಓಡಾಡೋದರಿಂದ, ನಾವು ಗೌರವದಿಂದ ಇರಬೇಕು. ಮರ್ಯಾದೆಯಿಂದ ಇರಬೇಕು. ನಾಳೆ ನಮ್ಮನ್ನು ಜನ ಯಾರೂ ಛೀ ಥೂ ಅನ್ನಬಾರ್ದು. ಭಯ ಭೀತಿ ಇರೋದರಿಂದ ಗೌರವವಾಗಿ ನಡ್ಕೋತಾರೆ ಅವರು. ಆಮೇಲೆ ಸುಮಾರು, ಅವರಿಗೆ ನನ್ನಿಂದ ಬೇಕಾದಷ್ಟು ಉಪಕಾರಗಳಾಯ್ತು. ಎಷ್ಟೋ ಹೆಸರು. ಅದರಿಂದ ಅವರಿಗೆ ಗೌರವ ಬರೋಕೆ ಶುರುವಾಯ್ತು. ಅದರಿಂದ ಏನಾಯ್ತು ಅಂದ್ರೆ. So ಅವರಿಗೂ ಕಣ್ ತೆರೀತು. ನಾವೇನೋ ತಪ್ಪು ತಿಳಿಕೊಂಡ್ವಿ ಇದು ಹಂಗಲ್ಲ. ನಮ್ ಮನೆಯ ವಾತಾವರಣ ಎಲ್ಲ ಬಂದು ನೋಡಿದ್ರು. ನೋಡಿದ್ಮೇಲೆ ಇಲ್ಲ. ಸಂಸಾರ, ಕಲೆ ಎರಡೂ ಇದೆ ಅಂದ್ಬಿಟ್ಟು ಅವರಿಗೆ ಒಂತರಾ ನೆಂಟಸ್ತನ ಬೆಳಿಲಿಕ್ಕೆ ಶುರುವಾಯ್ತು. So ಹಂಗೆ ನನ್ನ ಬಗ್ಗೆ ಒಂದು ಗೌರವ ಬರೋಕೆ ಶುರುವಾಯ್ತು. ಹಾಗೇನೆ ಕಲೆನ ಮತ್ತೆ ಮತ್ತೆ ಮುಂದುವರಿಸಿಕೊಂಡು ಹೋಗೊಕೆ ಅವಕಾಶ ಆಯ್ತು. ಈಗ ನನ್ನ ಮಗನಿಗೆ ಅದನ್ನ ಹೇಳಿಕೊಡಬೇಕು. ಅವನು ಅದರಲ್ಲಿ ಮುಂದುವರಿತ್ತಾನೆ ಅಂತ ಡಿಸೈಡ್ ಮಾಡಿಬಿಟ್ಟಿದ್ದಾನೆ ಅವನು. ಅದನ್ನ ಅವನು ಕಲೆನಲ್ಲಿ ಮುಂದವರಿಸಬೇಕು. ಯಾಕಂದ್ರೆ ಕಲೆ ಕಲ್ತಿದ್ರಿಂದ ನನಗೆ ಯಾವ ತರಹದ ಅನ್ಯಾಯ ಆಗ್ಲಿಲ್ಲ. ಏನೊಂದ್ರೆ, ನಾವು ಸಾಧನೆ ಮಾಡಬೇಕು. ಅದನ್ನ ಕರಗತ ಮಾಡಿಕೊಂಡ್ರೆ, ಅದಕ್ಕೆ ತಕ್ಕಂತಹ ಪುರಸ್ಕಾರ ಇದ್ದೇ ಇದೆ ಅನ್ನೋದಕ್ಕೆ ಉದಾಹರಣೆ ನಾನೇನೆ ನಿಮಗೆ. ನನ್ನತ್ರ ಯಾವ ದುಡ್ಡು, ಕಾಸು, ಯಾವ Infaluance ಇಟ್ಟುಕೊಂಡು ನಾನು ಬಂದಿದ್ದಲ್ಲ. ಏನೊಂದ್ರೆ ಕಷ್ಟಪಡಬೇಕು. ರಾತ್ರಿ ಹಗಲು ಕಷ್ಟಪಟ್ರೆ ಮುಂದೆ ಬರೋಕೆ ಸಾಧ್ಯ. ಎಷ್ಟೋ ಕಲಾವಿದರಿಗೆ ಮಾನ, ಅನುಮಾನ, ಸನ್ಮಾನ ಅನ್ನೋದು ಜೀವನದ ಮೂರು ಹಂತಗಳಿದ್ದಂತೆ. ಅದನ್ನ ಮನಸ್ನಲ್ಲಿ ಚೆನ್ನಾಗಿ ಇಟ್ಟುಕೊಂಡು ಕಲಾವಿದರು ೩ಕ್ಕೆ ರೆಡಿಯಿರಬೇಕಂತೆ. ಮೊದಲು ಅವಮಾನ ಅಂತೆ ಕಲಾವಿದರಿಗೆ ಸಾಕಷ್ಟು ಅವಮಾನ ಅಂತೆ. ಆ ಆಗೋ ಅವಮಾನಗಳೆಲ್ಲ ತಡಕೊಂಡು ಜೀರ್ಣ ಮಾಡ್ಕೊಂಬಿಟ್ರೆ ಸ್ವಲ್ಪ ಶಕ್ತಿ ಬರುತ್ತಂತೆ. Next ಅನುಮಾನ. ಅನುಮಾನಗಳಿರಬಾರದು ಯಾವ ತರಹ ಅನುಮಾನ ಅಂದ್ರೆ ಯಾವ ತರಹ ಅಂದ್ರೆ, ನಾನು ಇಲ್ಲಿ ಬರ್ತಿನೋ ಇಲ್ವೋ ಈ ಕೆಲಸ ಮಾಡ್ತಿನಿ Sucess ಆಗ್ತಿನೋ ಇಲ್ವೋ ಈ ತರಹದ ಅನುಮಾನ ಕಲಾವಿದರಲ್ಲಿ ಬೆಳಿಬಾರದು ಅಂತೆ. ನಾನು ಹೋಗ್ತ ಇದ್ದದಾರೀಲಿ ಜಯಗಳಿಸಲೇಬೇಕು ಅಂತ ದೃಢ

ನಿರ್ಧಾರ ತಗೋಬೇಕಂತೆ. ಅವಾಗ ಅನುಮಾನ ಪರಿಹಾರ ಆಗುತ್ತಂತೆ. ಆಮೇಲೆ ಅದೇಂತದು ಹೇಳಿದ್ನೆಲ್ಲ.. ಅನುಮಾನ, ಅವಮಾನ ಕ್ಲಿಯರ್ ಆದ್ಮೇಲೆ ತಾನೇ ಸನ್ಮಾನ ಆಗುತ್ತೆ ನಿನಗೆ ಅಂತ ಅಂದ್ಬಿಟ್ಟು ಅಂದಂಗೆ ಇವತ್ತು ನೆನಸ್ಕೋತಿನಿ. ಹಾಗಾಗಿ ಈ ಕಲೆಯನ್ನು ನಾನು ಇವತ್ತು... ಆನಂದ ಪಡ್ತಾಯಿದಿನಿ...

ವಿಜಯಾ: ಒಂದು ಮಟ್ಟಕ್ಕೆ ಏರಿ ಅಂದ್ರೆ ಎಲ್ಲೋ ಒಂದು ಸ್ಥಾನ, ದೊಡ್ಡ ಸ್ಥಾನ ದೇವಿ ಸ್ಥಾನ ಅಂತೀವಿ. ಏನೋ ಒಂದು ಸ್ಥಾನ ದೊಡ್ಡಸ್ಥಾನ. ಅಲ್ಲಿಗೆ ಬರದೇನೆ ಒಬ್ಬ ಸಾಮಾನ್ಯ ನರ್ತಕಿ ಆಗಿದ್ರೆ ನಿಮಗೆ ಈ ಸೊಸೈಟಿಯೊಳಗಡೆ ಬದುಕೋದು ಕಷ್ಟ ಆಗ್ತಿತ್ತಾ?

ಉಷಾ: ಆ...ನನಗೆ, ಈಗಿನ ಒಂದು ಪರಿಸ್ಥಿತಿಯಲ್ಲಿ ನನಗೆ ಹಾಗೇನೂ ಕಷ್ಟ ಆಗ್ತಿರಲಿಲ್ಲ ಅನಿಸ್ತದೆ. ಯಾಕೆಂದ್ರೆ ನನ್ ಕಣ್ಮುಂದೆ ಎಷ್ಟೋ ಜನ ಒಳ್ಳೇ ಕಲಾವಿದರು ಇದಾರೆ. ಇವತ್ತು ಕಲೆಯಿಂದ ನಾನು ಉಪವಾಸ ಇದ್ದೀನಿ ಅಂತ ಯಾರಿಗೂ ಅನಿಸಿಲ್ಲ. ಏಕೆಂದ್ರೆ ಪ್ರತಿಯೊಬ್ಬರು ದುಡಕೊಂಡು ಚೆನ್ನಾಗಿ ಇದ್ದಾರೆ. ಇವತ್ತು ಖಂಡಿತ ಹೇಳ್ತಿನಿ ಏಕೆಂದರೆ ಆ ಪರಿಸ್ಥಿತಿ ಇಲ್ವೇ ಇಲ್ಲ. ನಾನು ಎಲ್ಲರಿಗೂ ಹೇಳ್ತಿದಿನಿ ಏಕೆಂದರೆ ಸರ್ಕಾರ ಬೇಕಾದಷ್ಟು ಹಣ ಕೊಡ್ತಾಯಿದಾರೆ ಅವರಿಗೆ ಈವಾಗ ನೀವೆನಂತಿರಿ, ಎಷ್ಟೋ ಜನ ನಿನ್ನೆ ಮೊನ್ನೆ ಕಲ್ತಿದ್ರು ನೃತ್ಯ ಕಲಾವಿದರೆಲ್ಲ ಒಂದೊಂದು ಶಾಲೆ ಮಾಡ್ಕೊಂಡು ಸರ್ಕಾರದಿಂದ ಹಣ ತೊಗೊಂಡು ಅವರು ಎಷ್ಟು Festivels ಮಾಡ್ತಾಯಿದಾರೆ, ದುಡಿತಿದಾರೆ. ಅದರಿಂದ ಅವರು...ಅದಕ್ಕೇನು ತೊಂದರೆ ಏನು ಆಗಿಲ್ಲ.

ವಿಜಯಾ: ಅಂದ್ರೆ ಇದಕ್ಕೆ ಬರೋಕೆ ಒಬ್ಬ God Father ಬೇಕು ಅನಿಸುತ್ತಾ ನಿಮಗೆ?

ಉಷಾ: God father ಬೇಕೇ ಬೇಕು ಇರ್ಲೆ ಬೇಕು. ಏಕೆಂದರೆ ನಮ್ಮನ್ನು ಪರಿಚಯ ಮಾಡಿಕೊಡಾಕೆ ಒಬ್ರು ಬೇಕೆ ಬೇಕು. ನನ್ನ ಇದರಲ್ಲಿ ಏನಾಯಿತು ಅಂದೆ ನಾನೇ ಹೋಗ್ತಿದೆ. ಹೋಗ್ಬಿಟ್ಟು ಬೈಸಿಕೊಂಡು ಬಂದಿದೀನಿ. ಅದೆಲ್ಲಾ ತುಂಬ ಕಷ್ಟಾನೇ. ನನಗೆ ಯಾರನ್ನಾದರೂ ಹೆಸರಿಗೆ ಆಕ್ಷೇಪಿಸಬೇಕು ಅನ್ನಿಸುತ್ತಿಲ್ಲ. ಆದರೆ ನನ್ನ ಬದುಕಿನಲ್ಲಿ ಆರದ ಗಾಯ ಮಾಡಿದವರು, ಹಾಗೆ ನನ್ನಲ್ಲಿ ಧೈರ್ಯ, ಸಾಹಸ ತುಂಬಿಕೊಳ್ಳಲು ನೆರವಾದವರು, ನನ್ನ ಪ್ರತಿಭೆಯನ್ನು ಹತ್ತು ಸಮಸ್ತರೆದುರು ಸಾದಪಡಿಸಲು, ಮತ್ತೆ ಮತ್ತೆ ಅದನ್ನು ಸಾಣೆ ಹಿಡಿದು ವಜ್ರವಾಗಿಸಲು ನೆರವಾದವರೂ ಒಬ್ಬರಿದ್ದರು ಎಂದು ಮಾತ್ರ ಹೇಳುತ್ತೇನೆ. ಅವರನ್ನೇ 'ಗಾಡ್ ಫಾದರ್ ' ಅಂದುಕೊಳ್ಳುವುದು ವಿಹಿತವೇನೊ.

ಸಹಜವಾಗೆ ನಮಗೆ, ಅದೂ ಮಧ್ಯಮ, ಕೆಳಮಧ್ಯಮ ವರ್ಗದ ಸ್ತ್ರೀಯರಿಗೆ ಇರುವ ಸಂಕೋಚ ಅಥವಾ ಮಖೇಡಿತನದಿಂದ ನಾನೂ ಹೊರತಲ್ಲ. ಅದಕ್ಕಾಗಿ ಇನ್ನೊಬ್ಬರ ನೆರವು ಅನಿವಾರ್ಯ ಆಗಿರಬಹುದು. ಹಾಗೊಂದು ನೆರವು ಸಿಕ್ಕಿದಾಗ ಸ್ವಾತಂತ್ರ್ಯದ ಕೊಂಡಿಕಳಚಿ ಪರಾಧೀನ, ಪರಪುಳ್ಳತನ ತುಂಬಿಕೊಳ್ಳುತ್ತಿದೆ ಎನ್ನುವುದು ಬರುವ ಹೊತ್ತಿಗೆ ಹಿಂದಿರುಗಿ ಬರಲಾರದಷ್ಟು ಮುಂದುವರಿದು ಯಾರದೋ ನೆರಳಾಗಿ ಬಿಟ್ಟಿರುತ್ತೇವೆ.

ಹಾಗಾಯಿತು ನನ್ನ ಬದುಕಿನಲ್ಲಿ. ಕಲಿತ ವಿದ್ಯೆಯ ಹಿಂದೆ ಆ ಆಶ್ರಯ ಇತ್ತ ನೆರವು ಬಹಳ ದೊಡ್ಡದು. ಅದಕ್ಕೆ ಕೃತಜ್ಞತೆಗಳು. ಆದರೆ ಅಷ್ಟಗುವುದರ ಹಿಂದೆ ನಾನೆಷ್ಟು ನರಳಿದ್ದೆ, ಎಂಥ ಅವಮಾನಗಳನ್ನು ಸಹಿಸಿದ್ದೆ. ಯಾಕೆ ವ್ಯಕ್ತಿ ವ್ಯಕ್ತಿಯನ್ನು ನಂಬುವುದಿಲ್ಲ. ಎಲ್ಲವೂ ತನ್ನ ಸರ್ವಸ್ವ ಅಂದುಕೊಳ್ಳುವ ಅಧಿಕಾರ ಚಲಾಯಿಸುವ ಪ್ರವೃತ್ತಿಯಾದರೂ ಯಾಕೆ? ಮನುಷ್ಯ ಸಂಬಂಧ ಹೇಗೆ ಇದಿಷ್ಟೇ ಅರ್ಥವೇ ಅಂತ ಯೋಚಿಸಿ ಉತ್ತರ ಸಿಗದೆ ತತ್ತರಿಸಿದ್ದೇನೆ. ಇರಲಿ.

ಆತ ಯಾರ ಬಳಿ ಮಾತಾಡಿದರೂ, ನಿಂತರೂ, ಕೂತರೂ ಸಂದೇಹಪಟ್ಟರು. ಸಾರ್ವಜನಿಕ ಸಮಾರಂಭದಲ್ಲೇ ಮಹಾಶಯರೆಲ್ಲ ಎದುರಿಗಿದ್ದಾರೆಂದು ತಿಳಿದೂ ಕೆನ್ನೆಗೆ ಬಾರಿಸಿ ಹೀನವಾದ ಮಾತಿನಿಂದ ನೋಯಿಸಿದ್ದಿದೆ. ಇದು ಈಕೆಯ ಮೇಲೆ ನಮ್ಮ ಅಧಿಕಾರ ಸ್ವಾಮ್ಯ ಎಂದು ತೋರಿಸಿಕೊಳ್ಳುವುದಕ್ಕಾಗಿಯೂ ಆಗಿರಬಹುದು. ಒಟ್ಟಾರೆ ನಾನು... ನಾನಾಗಿರಲಿಲ್ಲ. ಅಷ್ಟು ಸಾಕು ಅನಿಸುತ್ತೆ.

ಕಡೆಗೂ ಧೈರ್ಯ ಮಾಡಿದೆ. ವಿವಾಹವಾಗಲು ಒಪ್ಪಿದ್ದರಿಂದ ಯಾವುದನ್ನೂ ರಹಸ್ಯವಾಗಿಡದೆ ಹೇಳಿಕೊಂಡೆ. ನಾಳೆ ನನ್ನ ಸಂಸಾರದಲ್ಲಿ ಇಂತಹ ಪ್ರಸಂಗಗಳು ಹುಳಿಯಾಗಿ ನುಸುಳಿ ಕಾಡಬಾರದು ಎಂದು. ಅವರೂ ಅರ್ಥಮಾಡಿಕೊಂಡರು. ಶುಭದಿನವೇ ಆತ ಬಂದು ಪ್ರತಿಭಟಿಸಿದಾಗ ಸ್ಥಿತಿ ಪರಕಾಷ್ಠೆಗೆ ಹೋಯ್ತು. ನನ್ನ ಗಂಡನಾಗುವವರು ಆದಿನ ಸಹನೆ ಧೈರ್ಯ ಮಾಡಿದರು. ಅದೊಂದು ಸಿನಿಮಿಯಾ ಎನ್ನುವಂತಹ ಸಂದರ್ಭ. ಆದರೆ ಆತ ಇನ್ನೆಂದೂ ಇತ್ತ ಸುಳಿಯಲಿಲ್ಲ. ನನ್ನ ಬದುಕಿಗೆ ಮುಳ್ಳಾಗಲಿಲ್ಲ. ಆದರೆ ನನ್ನ ಮನಸ್ಸಿಗೆ ಆಘಾತವಾಗಬಹುದಾಂತಹ ಗಾಸಿಪ್ ಗಳಂತೂ ಸಾಲುಸಾಲಾಗಿ ಬಂದವು. ನನ್ನ ಗಂಡ, ಹೆತ್ತವರು ಧೈರ್ಯ ತುಂಬಿ ನನ್ನನ್ನು ಗಟ್ಟಿ ಮಾಡಿಲ್ಲದಿದ್ದರೆ ಯಾವ ಹುಚ್ಚಾಸ್ಪತ್ರೆ ಯಲ್ಲಿರಬೇಕಾಗಿತ್ತೋ. ಇಂತಹ ಸಂಗತಿಗಳನ್ನು ನೆನೆಯದೇ ಇದ್ದರೂ ಆದೀತು. ಆದರೆ ಒಂದು ಸಾಧಾರಣವಾದ ಬದುಕು ಎಂಥೆಂಥ ಕೆಂಡ ಹಾಯ್ದು ಹೊರಟುಹೋದದ್ದನ್ನು ಆಗೊಮ್ಮೆ ನಿವಾರಿಸಿಕೊಂಡಾಗಲೇ ಅರ್ಥಪೂರ್ಣವಾದ, ಸಾರ್ಥಕವೆನ್ನಿಸುವ ಬದುಕು ಸಿಗುತ್ತದೆ ಎಂಬುದನ್ನು ಗ್ರಹಿಸಲಾದರೂ ಅವನ್ನು ಹೊರಹಾಕಬೇಕಾಗುತ್ತದೆ.

ನಮಗೆ ಅಂದ್ರ ತಂದೆದೂ ಡ್ರಾಮಾ ಕಂಪನಿಯಲ್ಲಿದ್ದಾಗ ಬೇಕಾದಷ್ಟು ಕಾರ್ಯಕ್ರಮ ಕೊಟ್ಟಿದ್ದೆ. ಆಮೇಲೆ ಈ ನಮ್ಮ ಊರಿನಲ್ಲಿ ಯಾವುದೇ ಡ್ರಾಮಾಕಂಪನಿಗಳು ಬಂದ್ರೂವೆ, ಈಗ ಬಳ್ಳಾರಿಯಂತಹ ಕಂಪನಿ, ಗುಬ್ಬಿ ಕಂಪನಿ ಆಮೇಲೆ ಚಿಂದೋಡಿ ಲೀಲಾ, -ಆಮೇಲೆ next ಓಬಳೇಶ್ವರ ಕಂಪನಿ ಬೇಕಾದಷ್ಟು ಯಾವುದೇ ಡ್ರಾಮಾ ಕಂಪನಿಗಳು ಬಂದ್ರೂ ಶ್ರೀಕಂಠಮೂರ್ತಿಗಳ ಡ್ರಾಮಾ ಕಂಪನಿ ಹೀಗೆಯಾವುದೇ ಡ್ರಾಮಾ ಕಂಪನಿ ಬಂದ್ರೂ ಅವರು ಮೊದಲೇ ಯಾವುದಾದರೂ ಊರಿಗೆ ಹೋದ್ರೆ ಹೀಗೆ ಯಾವುದಾದರೂ ನೃತ್ಯ; ಕಲಾವಿದರಿದಾರ ಅಂತ ಗೊತ್ತಾಗದು.ಇಂತಿಂಥೋರು ಅಂತ, ಯಾವ್ದೆ ಜನಗಳ ಮುಖಾಂತರ. ಆವಾಗ ಎಷ್ಟೋ ಸಂದರ್ಭದಾಗ ನನ್ನ ಕರೆಸಿಕೊಂಡಿದಾರೆ. ಕರೆಸಿಕೊಂಡುಬಿಟ್ಟು

ಇಲ್ಲಿ ಏನಾದರೂ ಡ್ರಾಮಾಗಳಲ್ಲಿ ಮಧ್ಯೆ ಡಾನ್ಸ್ ಮಾಡ್ತಿಯೇನಮ್ಮಾ ಅಂತ ಕೇಳಿದ್ರೆ ಖುಷಿಯಾಗಿ ನಾವು ಒಪ್ಪಿಕೋತಾಯಿದ್ದಿವಿ. ಆವಾಗ ಡ್ರಾಮಾ ಹೆಂಗೆ ಅಂದ್ರೆ ಸಿನಿಮಾ ಇದೆಯಲ್ಲ ಆ ಥರನೇ, ಸಿನಿಮಾ ಕಮ್ಮಿ ಡ್ರಾಮಾಗಳು ಜಾಸ್ತಿ ಆವಾಗ. ಹಾಗೆ ನಾನು First ಡ್ರಾಮಾದಲ್ಲಿ Introduce ಆಗಿದ್ದು ಗುಬ್ಬಿ ವೀರಣ್ಣ ಅವರಿಂದ. ಅವರ ಕಾಲದಲ್ಲಿ ಬಹಳ ಸ್ಟ್ರಿಕ್ಟ್ ಜಾಸ್ತಿ. ಬೆಳಗಿನ ಜಾವ ಎಷ್ಟೊತ್ತು ಆದ್ರು ಎಲ್ಲಾ ಕಲಾವಿದರು ಎದ್ದು ಬಂದುಬಿಟ್ಟು ಪ್ರಾಕ್ಟಿಸ್‌ಗೆ ಬರಬೇಕು. ಆ ಪ್ರಾಕ್ಟಿಸ್ ಆಗ್ತಾಯಿದೆ ಅಂತ ಗೊತ್ತಾದಾಗ ನಾವೆಲ್ಲ ಹೋಗ್ಬಿಟ್ಟು ಆ ಪ್ರಾಕ್ಟಿಸ್ ನೋಡ್ತಾ ನಿಂತ್ಕೋತಾಯಿದ್ವಿ. ಸರ್ವೆಸಾಧಾರಣ ಗುಬ್ಬಿ ವೀರಣ್ಣ ನನ್ನ ನೋಡಿ ಏನಮ್ಮ ನಿಂತಿದಿಯಾ ಇಷ್ಟನಾ ಡ್ರಾಮಾ ಅಂತ ಕೇಳೋರು. ಹುಂ, ನಾನು ಡಾನ್ಸ್ ಮಾಡಬೇಕು. ಓ ಡಾನ್ಸ್ ಮಾಡ್ತಿ ಏನು ಡಾನ್ಸ್ ಮಾಡ್ತಿ ಅಂತ ಹೇಳಿದಾಗ ಓಹೋ ಈ ಮಗು ಡಾನ್ಸ್ ಮಾಡುತ್ತೆ ಅಂತ ಅಂದುಬಿಟ್ಟಾಗ ಖುಷಿ. ಎಲ್ಲರಿಗೂ ಮಾಡಿ ತೋರ್ಸಮ್ಮಾ ಅಂದಾಗ, ಡಾನ್ಸ್ ಮಾಡಿದೆ ನಾನು. So ಸ್ವಲ್ಪ ಹಂಗಾಗಿ ಖುಷಿಯಾಗಿ ಹಂಗೆ ಸ್ವಲ್ಪ ಡ್ರಾಮಾ Entrence ಶುರುವಾಯ್ತು ನಮ್ಮದು. ಆಮೇಲೆ ಅವರ ಮಗಳ ಜೊತೆ ನಂದು ಸ್ನೇಹ ಬೆಳಿತು. ಆಮೇಲೆ First ಅವರದು ಡ್ರಾಮಾ ಕಂಪನಿ ಕ್ಲೋಸಿಂಗ್ ಡೇನಲ್ಲಿ ನನ್ನದು ಒಂದು ಕಾರ್ಯಕ್ರಮ ಅರೇಂಜ್ ಮಾಡಿದ್ರು ಗುಬ್ಬಿ ವೀರಣ್ಣ ಅವರು. ತಾವೇ ಮುಂದೆ ಕೂತಿದ್ರು. ಒಂದು ಕಾರ್ಯಕ್ರಮ ನೋಡಿ ತುಂಬಾ ಖುಷಿಯಾಗ್ಬಿಟ್ಟು ನನಗೆ ೨೫ ರೂ. ಬಹುಮಾನ ಕೊಟ್ರು. ಆವಾಗ ೨೫ ರೂ. ಅಂದ್ರೆ ಅದು ಅಷ್ಟು ಬೆಲೆ ಇದ್ದಿದ್ದ ಕಾಲ ಅದು. ಊರಲ್ಲಿ ಎಲ್ಲ ಅದೇ ಒಂದು ಗುಬ್ಬಿ ವೀರಣ್ಣ ೨೫ ರೂಪಾಯಿ ಬಹುಮಾನ ಗಳಿಸಿದಂತಹ ಉಷಾ ದಾತಾರ್ ಅಂತ ಅನೌನ್ಸ್ ಮಾಡೋರು. ಹಾಗಾಗಿ ಇವರ ಪರಿಚಯ ನನಗಾಯ್ತು. ಇದು ಆದ್ಮೇಲೆ ಏನಾಯಿತು ಅಂದ್ರೆ ಸುಮ್ನೆ ಇದ್ದಾಗ ಹೋಗದು ಡಾನ್ಸ್ ಮಾಡೋದು ಬರೋದು ಅಷ್ಟೇನೇ. ಆಮೇಲೆ ಯೋಗಗಾ ನರಸಿಂಹ ಅವರು ಮಾಡಿದ್ರು ಡ್ರಾಮಾ ಕಂಪನಿ. ಯೋಗಾನರಸಿಂಹ ಅವರದು ಹೊಳೆನರಸೀಪುರದಲ್ಲಿ.. ಯೋಗಾನರಸಿಂಹರದು ನಮಗೆ ಮಾಧವಸ್ವಾಮಿ ಕಂಪನಿ ಅಂತೆನೆ ಪರಿಚಯ. ನಮ್ ಮನೆ ಎದುರುಗಡೇನೇ ಇದ್ರು. ಅವಾಗಾ ಅವರ ಮನೆಗೆ ಹೋಗೋದು ಬರೋದು ಆಟ ಆಡೋದು. ಆವಾಗ ಕೇರಳ ಕಲಾಮಂಡಲಂನಲ್ಲಿದ್ದೆ. ರಜಾದಲ್ಲಿ ಹೋಗ್ತಿದ್ದೆ ಬರ್ತಿದ್ದೆ. ಆವಾಗ ಅವರಿಗೆ ತೊಂದರೆ. ಅವರಿಗೆ ಹೆಂಗೋ ಗೊತ್ತಾಯ್ತು. ಹೀಗೆ ಕಲಾ ಮಂಡಲಂ ದಲ್ಲಿದ್ದು ಬಂದ್ಬಿಟ್ಟಿದಿನಿ ಅಂತ ಒಂದ್ಸಲ ನನ್ನನ್ನು ಯೋಗಾನರಸಿಂಹ ಕರೆಸಿಕೊಂಡ್ರು. ನಮಗೆ ಒಬ್ರು ಡಾನ್ಸ್ ಹೇಳಿಕೊಡಾಕೆ ಬೇಕು ನೋಡಮ್ಮ ನೀನು ಶನಿವಾರ-ಭಾನುವಾರ ಬಂದು ಹೇಳಿಕೊಡ್ತೀಯಾ. ಆವಾಗ ಅಂದೆ ನಾನು ಓದ್ತಾಯಿದಿನಿ ಶನಿವಾರ ಮಧ್ಯಾಹ್ನ ಸ್ಕೂಲ್ ಬಿಟ್ ಮೇಲೆ Trainನಲ್ಲಿ ಬಂದು ಹೇಳಿಕೊಡ್ತೀನಿ. ಆವಾಗ ಅರಸೀಕೇರೆಯಿಂದ ಹೊಳೆನರಸೀಪುರಕ್ಕೆ ನಾನು ನನ್ನ ತಮ್ಮ ಹೋಗಿ ಅಲ್ಲಿನ Film Actorಗಳಿಗೆ ಹೇಳಿಕೊಡೋದು. ಆಮೇಲೆ ಇರೋ ಆ ಎರಡು ದಿನದಲ್ಲಿ ನಾನು ಡಾನ್ಸ್ ಡ್ರಾಮಾದಲ್ಲಿ ಮಾಡ್ತಿದ್ದೆ. ಮಾಡ್ಬಿಟ್ಟು

ಶನಿವಾರ ಶೋನಲ್ಲಿ ಮಾಡೋದು. ಆಮೇಲೆ ಭಾನುವಾರ ಫಸ್ಟ್ ಶೋ ಇರೋದು. ಮುಗಿಸ್ಬಿಟ್ಟು next trainನಲ್ಲಿ ನನಗೆ ಹತ್ತಿಸಿಬಿಡೋರು. ನಮ್ಮ ಇವರು ಕಲ್ಯಾಣ್ ಕುಮಾರ್ ಇದಾರಲ್ಲ. ಫಂಡರಿಬಾಯಿ ಅವರು ಒಂದು ಮ್ಯುಚುವಲ್ ಡ್ರಾಮಾ ಕಂಪನಿ ಮಾಡ್ಕೊಂಡಿದ್ರು. ಹಿಂಗೆ ಅದು ೩ ತಿಂಗಳು ೪ ತಿಂಗಳು ಸೀಜನ್ ಆಗಿ ಆವಾಗ ಜೋಗಿಹಳ್ಳಿ ಅಂತ ಹೇಳ್ಬಿಟ್ಟು. ಬಳ್ಳಾರಿ ಜಿಲ್ಲೆಯಲ್ಲಿದೆ. ಜೋಗಿಹಳ್ಳಿಯಲ್ಲಿ ಒಂದು ೧೦-೧೫ ದಿವಸ ಅಲ್ಲಿನವರು ವೆಂಕಟಸ್ವಾಮಿ, ನೆಟ್ಟಕಲ್ಲಪ್ಪ ಬೆಂಗೇರಿ ಅವರು ಒಂದು ಡ್ರಾಮಾ ಕಂಟ್ರಾಕ್ಟ್ ತಗೊಂಡಿದ್ರು. ಅಲ್ಲಿ ದೊಡ್ಡ ಜಾತ್ರೆ ನಡೀತಾ ಇತ್ತು. ಅಲ್ಲಿ ಅವರ ಮೊಮ್ಮಗಳು ನನ್ನ ಸ್ಟೂಡೆಂಟ್ .ನನ್ನ ತಂಗೀನೂ ಅವರ ಮೊಮ್ಮಗಳೂ ತುಂಬಾ ಚೆನ್ನಾಗಿ ಡಾನ್ಸ್ ಮಾಡಿದ್ರು. ಆವಾಗ ವೆಂಕಟಸ್ವಾಮಿ ಅವರಿಗೂ ಅವರ ಹೆಂಡತಿಗೂ ಡಾನ್ಸ್ ಅಂದ್ರೆ ತುಂಬಾ ಹುಚ್ಚು ಜಾಸ್ತಿ. ಆವಾಗ ಅಂದ್ರು, ಯಾಕೆ ಮೇಡಂನ ಕರಕೊಂಡು ಹೋಗಿ ಡ್ರಾಮಾಕ್ಕೂ ಮೊದಲು ನಮ್ಮದೊಂದು ಡಾನ್ಸ್ ಪ್ರೊಗ್ರಾಂ ಇಡಬಾರದು ಅಂತ ಹೇಳಿ ಡೇಲಿ ೨-೩ ದಿವಸ ಡ್ರಾಮಾಗೆ ಮುಂಚೆ ಅವರ ಮೊಮ್ಮಗಳದು ನನ್ನ ತಂಗೀದು ಡಾನ್ಸ್. ನಾನು ಹಾಡೋದು ತಬಲ-ಗಿಬಲ ಎಲ್ಲ ಈ ಡ್ರಾಮಾ ಕಂಪನಿಯವರದೇ.

ವಿಜಯಾ: ಅಂದ್ರೆ ನಿಮಗೆ ಟೈಮ್ ನಲ್ಲಿ ಕೆಲವೊಂದು ಹೆರಾಸ್ ಮೆಂಟ್ ಗಳು ಇದ್ವು ಅಂತ ಕೇಳಿದೀನಿ.

ಉಷಾ: ಹೌದು ಬೇಕಾದಷ್ಟು ಅನುಭವಿಸಿಬಿಟ್ಟಿದ್ದೀನಿ. ಏನೂಂದ್ರೆ ಅದೇ ಮದುವೆ ವಿಷಯಕ್ಕೆ ಬಂದಾಗ ಆಮೇಲೆ ಯಾರ ಜೊತೆನಲ್ಲಾದ್ರೂ ಮಾತಾಡಿದ್ರೆ ನಾನು ಸಂಬಂಧ ಕಲ್ಪಿಸೋದು ಈತರಹ ಎಲ್ಲಾ ಬೇಕಾದಷ್ಟು ಟಾರ್ಚರ್ ಅನುಭವಿಸಿದಿನಿ. ಟಾರ್ಚರ್ ಅಂದ್ರೆ ಮಾಕ್ಸಿಮಂ ಟಾರ್ಚರ್ . ಅಯ್ಯೋ ಕೊನೆಕೊನೆಗಂತೂ...

ವಿಜಯಾ: ಅಷ್ಟೊಂದು ಸಿಕ್ಕಿ ಹಾಕ್ಕೊಬಿಟ್ಟಿದ್ರಿ?

ಉಷಾ: ಅಷ್ಟು ಸಿಕ್ಕಿ ಹಾಕ್ಕೊಂಡಿದ್ದೆ. ಬಹಳ ಅಂದ್ರೆ ಅಷ್ಟಿಷ್ಟಲ್ಲ. ಯಾರತ್ರನಾದ್ರು ಮಾತಾಡಿದ್ರೆ ಸಂಬಂಧ ಕಲ್ಪಿಸೋದು. ಯಾಕಂದ್ರೆ ಕಲಾವಿದರು ಅಂದ್ರೆ ನಮಗೆ ಎಲ್ಲರೂ ಬೇಕು. ಯಾರತ್ರನೂ ವಿರೋಧ ಕಟ್ಟಾಕೆ ಆಗಲ್ಲ. ಇವತ್ತಿಗೂ ನನ್ನ ಪಾಲಸಿ ಇದೆ. ನನಗೆ ಶತ್ರುಗಳಿಲ್ಲ. ನಾನು ಯಾರತ್ರನೂ ಶತೃತ್ವ ಮಾಡಿಕೊಂಡಿಲ್ಲ. ಏಕೆಂದರೆ ನಾನು ಶತೃ ಮಾಡಿಕೋತಿನೋ ನಾಳೆ ಅವರಿಂದನೇ ನಮಗೆ, ಇದೇ ನಟರಾಜ್ ಜೊತೆ ಇವರುಗಳಿಗೂ ಬೇಕಾದಷ್ಟು ಜಗಳಗಳು ಆಗಿ ವೈಷಮ್ಯ ಆಗಿದೆ. ಆದರೆ ನಾನು ಯಾವತ್ತು ಯಾರತ್ರನೂ ಜಗಳ ಮಾಡಿಕೊಂಡಿಲ್ಲ. ಅದೇ ನಟರಾಜ ನನಗೆ ಬೇಕಾಯಿತು ಸಹಾಯಕ್ಕೆ. ಮಾಯಾರಾವ್ ಅವರ ಯಜಮಾನ್ರು ನಟರಾಜ. ನಾನು ಇವತ್ತೂ ನಟರಾಜ್ ಗೆ ಹೇಳಿದ್ರೆ ನಟರಾಜ್ ಅವರೇ ನನಗೆ ದೇವಾಲಯದ ನೃತ್ಯದಲ್ಲಿ ಹೆಸರು ಬಂದಿದ್ರ ಅದು ಬಿಕಾಜ್ ಆಫ್ ನಟರಾಜ್ . ಅವರಿಗೂ ಆವಾಗ ಸ್ವಂತ... ಅಂದ್ರೆ ಆವಾಗಿನ ಜನ ಅಂದ್ರೆ, ಅವರುಗಳಲ್ಲಿ ಒಬ್ಬ ಒಳ್ಳೆ ಕಲಾವಿದನಲ್ಲಿ ಒಳ್ಳೆ ಕಲೆಯನ್ನು ಗುರುತಿಸ್ತಾ ಇದ್ರು ಅವರು.

ಇವರು ಕಾಳಿಂಗರಾಯರು ಹಾಡ ಹೇಳಿ ನಾನು ಡಾನ್ಸ್ ಮಾಡಿದೀನಿ. ಕಾಳಿಂಗರಾಯರೂ ಅಷ್ಟೆ. ನಿನಗೆ ಎಷ್ಟು ಕೆಪ್ಯಾಸಿಟಿ ಇದೆ ಕಣಮ್ಮ ನೀನು ಬಹಳ ಬುದ್ಧಿವಂತ ಹುಡುಗಿ. ಅಂದ್ರು ನನಗೆ ಗುರುಕುಲದಲ್ಲಿ ಆ ಥರ ಟ್ರೈನ್ ಮಾಡಿದ್ರು ನನಗೆ. ಅದರಿಂದ ಎಷ್ಟೋ ಸಲ ಕ್ಲಿಷ್ಟವಾದ ತಾಳಗಳನ್ನು ಕಾಳಿಂಗರಾಯರು ಹಾಕಿ, ನಾನು ಅವರ ಮುಂದೆ ಡಾನ್ಸ್ ಮಾಡಿ ತೋರ್ಸಿದಿನಿ. ಪ್ರತಿಯೊಬ್ಬರ ಹತ್ತಿರ ನಮಗೆ ಯಾವ ತರ ಮಾತಾಡಿದ್ರು ಸಂಬಂಧ ಕಲ್ಪನೆಗಳು, ಏನೋ ಇದೆ ಹಾಗಿದೆ ಹೀಗಿದೆ ಈ ತರಹದ ಟಾರ್ಚರ್ ಗಳು.

ವಿಜಯಾ: ಪಾಠ ಹೇಳಿಕೊಡುವ ಗುರುಗಳ ಹತ್ರ ಕೂಡ ಕೆಲವು ಸಲ ಸಮಸ್ಯೆಗಳಿರುತ್ತೆ ಅಂತ ಕೇಳ್ತೀನಿ. ಕೆಲವು ಡಾನ್ಸರ್ಸ್ ಇಂಟರ್‌ವ್ಯೂಗಳಲ್ಲಿ ಹೇಳ್ತಾರೆ ಗುರುಗಳು ಕೂಡ ಅಷ್ಟೇನೂ ಗುರು-ಶಿಷ್ಯ ಸಂಬಂಧ ಅಷ್ಟಕ್ಕೆ ಬಿಡಲ್ಲ. ತುಂಬ ಹಿಂಸೆ ಆಗುತ್ತೆ ಅಂತ ಆಥರ...

ಉಷಾ: ಆದರೆ ನನ್ನ ಜೀವನದಲ್ಲಿ ಆಥರ ಆಗ್ಲಿಲ್ಲ. ನನಗೆ ಸಿಕ್ಕಿದ್ದು ಗುರುಗಳು ಅಂದ್ರೆ ರಾಕ್ಷಸರಂತೋರು. ಅಂದ್ರೆ ಈ ಥರ ಅಲ್ಲ. ನಾನು ಹೇಳಿದ್ನೆಲ್ಲ ಭಾಸ್ಕರನ್ ಅಂತ ಇಲ್ಲಿ ಕರೆಸ್ಕೊಂಡಿದ್ದೆ. ನನ್ ತಾಯಿ ಕೂಚಿಪುಡಿ ನಾನು ಕಲಿಬೇಕು ಅಂತ ಆಸೆಗೆ ಕರ್ಸಿದ್ರೆ ಹೆಂಗೆ ಅಂದ್ರೆ ಆತ ಸಿಕ್ಕಾಪಟ್ಟೆ ಕುಡಿಯೋದು. ಬಟ್ ಹೆಣ್ಮಕ್ಕಳು ಅಂದ್ರೆ ದೇವರು ಹಂಗೆ ಗೌರವ ಕೊಡೋರು. ಎಷ್ಟು ಆ ಹಿಂಸೆ ಹೆಂಗೆ ಅಂದ್ರೆ ಮಲಗೋಕೆ ಬಿಡ್ತಿರಲಿಲ್ಲ ನನಗೆ. ಏಳು ಏಳು ಕುಂಬಕರ್ಣನಾಗೆ ನಿದ್ದೆ ಮಾಡೋದಲ್ಲ ನಿನಗೆ. ನೀನು ಪ್ರಾಕ್ಟೀಸ್ ಮಾಡು. ರಾತ್ರಿ ೧೨ ಗಂಟೆಗೆ ಪ್ರಾಕ್ಟೀಸ್ ಮಾಡು. ಸರ್ ನನಗೆ ನಿದ್ದೆ ಬರುತ್ತದೆ. ಜೀವನದಲ್ಲಿ ನಿದ್ದೆ ಮಾಡಿ ಮಾಡಿ ಕುಂಬಕರ್ಣ ಆಗ್ಬೇಕು ಅಂತ ಇದಿಯಾ ನೀನು. ನಾನು ಏನೂ ಒಂದು ಧ್ಯೇಯ ಮಾಡಿ ನಮ್ಮೂರು ಹುಡುಗಿ ಕಲಾ ಮಂಡಲಂನಲ್ಲಿ ಕಲಿತೋಳು. ಕರ್ನಾಟಕದಲ್ಲಿ ಮುಂದೆ ಬರಲಿ ಅಂತ ಹೇಳಿ ನಾನು ವದ್ದಾಡ್ತಿದಿನಿ. ನೀನು ಮಲಗಬೇಕು ಅಂತಿದಿಯಾ. ಏಳು ಏಳು ಅಂದ್ಬಿಟ್ಟು. ರಾತ್ರಿ ಹೊತ್ತು ಏನ್ ಮಾಡೋರು ಗೊತ್ತಾ ೧೨ ಗಂಟೇಲಿ ಎಬ್ಬಿಸಿ ತಲೆ ಮೇಲೆ ಚೆಂಬಿಡ್ಸಿಬಿಟ್ಟು ನೀರಿಂದು ಆ ನವರಂಗ ರೋಡಲ್ಲಿ ನಡೆಸೋರು ನನ್ನನ್ನ. ರೋಡಲ್ಲಿ ನಡಿಸಿದ್ರೆ, ಸರ್ ಯಾರಾದ್ರು ನೋಡಿದೋರು ಏನು ಅನ್ನೋರು? ಅವಕ್ಕೆ ಹಿಂದೆ ಒಂದು ಕೋಲು ಇಟ್ಕೊಂಡು ನಮ್ ತಮ್ಮಂದಿರನ್ನು ಕರೆಯೋರು. ಹೇ ಬಾರೋ ನೀನು ಆಕಡೆ ಒಂದು ಕೋಲು ಹಿಡಕ್ಕೋ, ನೀನು ತಲೆ ಮೇಲಿಂದ ಚೆಂಬು ಬಿತ್ತು ಅಂದ್ರೆ ಇಲ್ಲೆ ಹೊಡೆದು ಸಾಯ್ಸಿಬಿಡ್ತೀನಿ ನಿನ್ನ. ಚೆಂಬು ಬೀಳ್ ಬಾರದು. ನೋಡು ಇನ್ನು ೧೨ ಗಂಟೆ ಸದ್ಯ ಅವಾಗ ಬೆಂಗಳೂರಲ್ಲಿ ಇಷ್ಟು ಭಯ ಇರ್ಲಿಲ್ಲ. ಎಲ್ಲಿ ಬೇಕಾದ್ರೂ ಓಡಾಡಬಹುದಿತ್ತು ನಾವು. ಅಲ್ಲಿಂದ ಅವರು ಹೇಳೋವರ್ಗೂ ಇಷ್ಟು ಕಿ.ಮೀ.ನಡೀಬೇಕಿತ್ತು ನಾನು. ಆಮೇಲೆ ತಟ್ಟೆಮೇಲೆ. ನಾನಂದೆ. ಏನ್ಸಾರ್ ತಟ್ಟೆ ಡಬ ಡಬ ಅಂತ ಸೌಂಡ್ ಬಂದ್ರೆ ಜನ ಏನು ತಿಳಕೊಳ್ಳುತಾರೆ. ಏನು ತಿಳಕೋತಾರೆ-ಯಾರೋ ಪೋಲಿಸರು ಬೀಟ್ ಹೊಡಿತಾರೆ ಅಂತ ತಿಳ್ಕೋತಾರೆ ಅಷ್ಟೆ ಮಾಡು ಅನ್ನೋರು. ಈ ಥರ ಹಿಂಸೆ ನನಗೆ. ಆ ಹಿಂಸೆ ತಡೀಲಾರದೆ

ಒಂದುಸಾರಿ ನಮ್ ಪಕ್ಕದ ಮನೆಯ ಫ್ರೆಂಡ್ ಒಬ್ಬು ಅವರ ಮನೇಲಿ ಹೋಗಿ ಮಲಕೊಂಡುಬಿಟ್ಟಿದ್ದೆ ನಾನು. ಅಮ್ಮಾ ಈ ಮನುಷ್ಯ ನಿದ್ದೆ ಕೊಡಲ್ಲ, ಆತನಿಗೆ ಏನೂ ಅಂದ್ರೆ ಏನು ಮನಸಿಗೆ ಸಾಯ್ತೀನಿ ಅಂತ ಬಂದ್ಬಿಟ್ಟಿತ್ತೋ ಏನೋ ಗೊತ್ತಿಲ್ಲ. ಅವರು ನನ್ನ ಹತ್ತಿರ ಇರೋ ಸ್ಟಾಕ್ ಗಳೆಲ್ಲ ನೀನು ಕಲೀಬೇಕು. ಪುಸ್ತಕ ತೆಗಿ ಬರಕೋ ಪ್ರಾಕ್ಟೀಸ್ ಮಾಡು ಈ ಥರ. ನನಗೆ ಯಾವ ಗುರುಗಳು ಆಥರ ಸಿಕ್ಲಿಲ್ಲ. ಅದೊಂದು ನನಗೆ ತುಂಬಾ ಪುಣ್ಯ. ಬೇರೆ ಕಲಾಮಂದಿರದ ಸಮಸ್ಯೆಗಳೇನೋ ನನಗೆ ಗೊತ್ತಿಲ್ಲ. ಅವರಿಗಾಗಿರೋದು. ಬಟ್ ನನ್ನ ಗುರುಗಳು ನನಗೆ ಸಿಕ್ಕಿದ್ದು ಪ್ರತಿಯೊಂದು ಗುರುಗಳು ಕೂಡ ಅವರು ಕಲೆನಾ ನಮಗೆ ಹೇಳಿಕೊಡಬೇಕು. ನಮ್ಮ ಶಿಷ್ಯರನ್ನ ಮುಂದುವರಿಸಬೇಕು ಅನ್ನೋ ಮನೋಭಾವನೆಯಿಂದ ಹೇಳಿಕೊಟ್ಬಾಗ-ಆ ಥರ ನಮ್ಮನ್ನ ಬಳಸಿದೋರೇ ವಿನಹ ಬೇರೆ ಥರ ಯಾವತ್ತೂ ಅಲ್ಲ. ತುಂಬಾ ಹಳೇ ಕಾಲದ ಪದ್ಧತಿಯಿಂದ ಬಂದವರು ಅವರು. ಕಲಾವಿದರ ಫ್ಯಾಮಿಲಿಯಿಂದ ಬಂದವರು ಆದ್ರೂ ಕೂಡ ದೇವದಾಸಿ ಟ್ರೆಡಿಶನ್ ನಿಂದ ಬಂದಿದ್ದ ಮನುಷ್ಯನಾದ್ರೂ ಕೂಡ ಹೆಣ್ಮಕ್ಕಳಿಗೆ ಬಹಳ ಗೌರವ ಕೊಡೋರು. ನಾವು ಪ್ರೊಗ್ರಾಂಗೆ ಹೋದ್ರು ಅಷ್ಟೇನೆ. ಸ್ಟೇಜ್ ಮೇಲೆ-ವೇದಿಕೆ-ಕೂತುಕೊಳ್ಳೋಕೆ ಮುಂಚೆನೆ ಅಲ್ಲಿ ನಿಂತಿರೋರು. ಯಾರಾದ್ರೂ ಮಾತಾಡ್ಸಿದ್ರೆ ನಿಮಗೇನು ಮಾತು ಆ ಹುಡುಗಿ ಹತ್ರ ಏನ್ ಕೇಳ್ಬೇಕು, ಅದನ್ನ ನನ್ನ ಕೇಳು. ಅದಕ್ಕೆ ಉತ್ತರ ನಾನು ಕೊಡ್ತೀನಿ ಅನ್ನೋರು. ಹಂಗಾಗಿ ನಮಗೆ ಬಹಳ ಭಯದಲ್ಲಿ ಬೆಳೆಸಿದ್ರು.

**ವಿಜಯಾ:** ನಿಮಗೆ ನೀವು ಕಲಿಯುವಾಗ ನಿಮ್ಮ ಒಡನಾಟದಲ್ಲಿ ನಿಮಗೆ ಎಷ್ಟೆ ಆಗಲಿ ವಯೋಸಹಜವಾಗಿ ಯಾರ ಬಗ್ಗೆ ಆದ್ರೂ ನಿಮಗೆ ಒಲವು ಅನ್ನೋದು ಬರಲೇ ಇಲ್ವಾ.

**ಉಷಾ:** ಉಹು-ಬರಲೇ ಇಲ್ಲಾರಿ ನನಗೆ. ಅದೇನೋ ಅದೊಂದು ನನಗೆ ಇವತ್ತುವರೆಗೂ ನನಗೆ ಬರಲೇ ಇಲ್ಲ. ನನಗೇನಾಯಿತು ಅಂದ್ರೆ ಜೀವನದಲ್ಲಿ ನನಗೆ ಕಲೆ ಕಲೀಬೇಕು. ಈಗ್ಲೂ ನನಗೆ ಇವತ್ತೂ ನನಗೆ ಏನು ಗೊತ್ತಾ. ಇಷ್ಟು ಹುಡುಗರು ಡಾನ್ಸ್ ಮಾಡ್ತಿದ್ರ ಇವತ್ತು ಜೊತೆಲಿ ಡಾನ್ಸ್ ಮಾಡ್ತಿನಿ ನಾನು.ನನಗೆ ಏನಾಯಿತು ಇನ್ನೂ ಡಾನ್ಸ್ ಮಾಡಬೇಕು. ನಾನು ಇನ್ನು ಮಾಡಿದ್ದು ಸಾಲ್ದು ನನಗೆ. ಎಲ್ಲಿ ಪ್ರೊಗ್ರಾಂ ಇದ್ರೂ ಮಾಡ್ಬೇಕು. ಈಗ ರೀಸೆಂಟ್ ಆಗಿ ಅಕಾಡೆಮಿದೊಂದು ಪ್ರೊಗ್ರಾಮ್ ಆದಾಗ ವರ್ಕ್ ಶಾಪ್ ಮಾಡಿಸಿದಾಗ ಯು.ಎಸ್.ಕೃಷ್ಣರಾವ್ ಅವರು ಇದ್ರು. ನೋಡಿಬಿಟ್ಟು ಅವರು ಅದನ್ನೆ ಹೇಳಿದ್ರು ನಾನೀಗ ೧೫-೨೦ ವರ್ಷದ ಕೆಳಗೆ ಹೆಂಗ ಡಾನ್ಸ್ ಮಾಡ್ತಿದ್ದೇನೋ ಅದೇ ಫಾಸ್ಟನೆಸ್ ಇದೆ. ಅದಕ್ಕಕರೆದುಬಿಟ್ಟು ನೀನು ನಿನ್ನ ಶಕ್ತಿಯ ರಹಸ್ಯ ಏನು? ಎಲ್ಲಿ-ಏನು ತಗೋತಿಯಾ ಟಾನಿಕ್ಕು ಅಂತ ಕೇಳಿದ್ರು. ಇಲ್ಲ ಸರ್ ಏನು ತಗೋಳ್ಳಲ್ಲ ಮಕ್ಕಳ ಜೊತೇಲಿ ಡಾನ್ಸ್ ಮಾಡ್ತಿನಿ. ಬೇರೆ ಡಾನ್ಸ್ ಕ್ಲಾಸ್‌ನಲ್ಲಿ ಹೇಳಿಕೊಡಬೇಕಾದರೆ ಟೀಚರ್ ಗಳು ಕೂತ್ಕೊಂಡು ಹೇಳಿಕೊಡ್ತಾರೆ ಕೋಲಿಟ್ಟುಕೊಂಡು ಮೇಲೆ ಏಳಲ್ಲ. ನಾನುಕೂರಲ್ಲ, ಕೈಯಲ್ಲಿ ಕೋಲಿಟ್ಟುಕೊಂಡು ಸಮಾನವಾಗಿ ಡಾನ್ಸ್ ಮಾಡ್ತೀನಿ ಅದರಿಂದ ನನಗೆ

ಅಲ್ಪಸ್ವಲ್ಪ ಉಳಕೊಂಡಿದೆ ಸ್ಟೆಮಿನಾ. ಬೇರೆ ಇನ್ನೇನು ಇಲ್ಲ. ನಾನು ಅದಕ್ಕೆ ಹೇಳೋದು ನನಗೆ ವಯಸ್ಸಾಗಿದೆ. ಬಟ್ ನನ್ನ ಕಲೆಗೆ ವಯಸ್ಸಾಗಿಲ್ಲಂತ ಈಗಲೂ ಹೇಳ್ತೀನಿ. ಎಲ್ಲಿ ಪ್ರೊಗ್ರಾಮ್ ಇದ್ದರೂ ರೆಡಿ. ಫಸ್ಟ್ ಹೋಗಿಬಿಡುತ್ತಿದ್ದೆ ನಾನು. ಇನ್ನು ಏನೇನೋ ಕಲೀಬೇಕೆನ್ನುವ ಆಸೆ.

ವಿಜಯಾ: ಇದು ಈ ತರದ ಅರ್ಜ್ ಇರೋರಿಗೆ ಸಂಸಾರ ಒಂದು ಗೃಹಕೃತ್ಯ ಕಷ್ಟ ಆಗಬಹುದಲ್ಲ. ಹ್ಯಾಗೆ ನಿಭಾಯಿಸ್ತೀರಿ?

ಉಷಾ: ಇಲ್ಲ ನನಗ ಏನೂ ಕಷ್ಟ ಆಗಲಿಲ್ಲ. ಯಾಕೆಂದರೆ ಮೂರು ಹೊತ್ತೂ ಇದೇ ನನಗೆ. ನಮ್ಮ ಮನೆಯಲ್ಲಿ ನಮ್ಮ ಯಜಮಾನರು ಅಂದ್ರು ಅವಳಿಗೆ ಗಂಡ ಇಲ್ಲದೇ ಇದ್ದರೂ ಪರವಾಗಿಲ್ಲ ಅವಳಿಗೆ ಡಾನ್ಸ್ ಅಂದ್ರೆ ಇಷ್ಟ. ಡಾನ್ಸ್ ಅಂದ್ರೆ ಫಸ್ಟ್ ಖುಷಿ ಅಂದ್ಬಿಟ್ಟು, ಆಮೇಲೆ ಅವರೇ ನನಗೆ ಹೇಳೋರು ಯಾವಾಗ್ಲೂ. ಏನೂಂದ್ರೆ ನೀನು ಸಾಧನೆ ಮಾಡಿದ್ದು ಸಾಲದು ಇನ್ನು ಪ್ರಾಕ್ಟೀಸ್ ಮಾಡು, ಪ್ರಾಕ್ಟೀಸ್ ಮಾಡು ಅಂದ್ಬಿಟ್ಟು ಎಷ್ಟೋ ಸಲಿ ನಾನು ಅವರ ಒಂದು ಗೈಡಲೈನ್ಸ್ ಗಳಲ್ಲಿ ಕಲಿತುಕೊಂಡೆ ನಾನು. ನನಗೆ ಹಿಂದೆ ನೃತ್ಯಗ್ರಾಮಕ್ಕೆ ಹೋಗಬೇಕು, ಆವಾಗ ಎಷ್ಟೋ ಜನ ಹೋಗಬೇಡ ಅಂದಾಗ ನಮ್ಮ ಮನೆಯಲ್ಲಿ ನಮ್ಮ ಯಜಮಾನರೇ ಸ್ವಲ್ಪ ಗಲಾಟೆ ಮಾಡಿ ಕಳಿಸಿದ್ರು ನನಗೆ.

ವಿಜಯಾ: ನೃತ್ಯಗ್ರಾಮಕ್ಕೆ ಹೋದ್ರಾ?

ಉಷಾ: ಹೌದು. ಓಡಿಸ್ಸಿ ವರ್ಕ್‌ಶಾಪ್ ಮಾಡ್ತೀನಿ ಅಂತ ಪ್ರತಿಮಾ ಬೇಡಿ ಒಂದು ಅಡ್ವಟೈಜ್ ಮೆಂಟ್ ಹಾಕಿದ್ರು, ಆವಾಗ ನಾನು ಹೋಗಲ್ಲ ಅಂದ್ರೆ ತಿಳಕೊಳ್ಳೋಕೆ ಒಳ್ಳೇ ಅನುಕೂಲ ಆಗುತ್ತೆ. ನೀನು ಹತ್ತೂ ದಿವಸ ಇದ್ದು ಬಾ ಅಂದ್ರು. ಆವಾಗೇನು ಅಂದ್ರೆ ಆವಾಗ ಮಗ ಬೇರೆ ಚಿಕ್ಕವನು. ಮಗೂನ ಬೇರೆ ಬಿಟ್ಟು ಹೋಗುವುದು ಕಷ್ಟ ಆಗೋದು ನನಗೆ. ಇಲ್ಲಿ ಅವನ್ನ ನಾನು ನೋಡಿಕೋತೀನಿ ಇಲ್ಲೆ ನೃತ್ಯಗ್ರಾಮ ಹತ್ತಿರ ತಾನೆ ಯಾವಾಗ ಬೇಕಾದ್ರೂ ಕರ್ಕೊಂಡು ಬರ್ತೀನಿ. ಶನಿವಾರ-ಭಾನುವಾರ ರಜೆ ಇದ್ದಾಗ ಬಂದು ನೋಡಿಕೊಂಡು ಹೋಗು ಬಟ್ ನೀನು ಹೋಗಿ ಕಲಿತುಕೊಳ್ಳಬೇಕು ಅಂತ. ನಮ್ಮ ಯಜಮಾನ್ರೇ ಬಂದಿದ್ರು ಸೇರಿಸೋಕೆ. ಆಗ ಅವರಿಗೆ ಪ್ರತಿಮಾ ಬೇಡಿಯವರೇ ಬೈದು ಯಾಕೆ ಸಾಕು ಮೋಹಿನಿ ಅಟ್ಟಂ ಮಾಡ್ತಾಳೆ. ಕಥಕ್ಕಳಿ ಮಾಡ್ತಾಳೆ, ಕೂಚಿಪುಡಿ ಮಾಡ್ತಾಳೆ, ಭರತನಾಟ್ಯ-ಯಾಕೆ ಸುಮ್ನೆ ಎಲ್ಲಾ ಕಲೀಬೇಕು ಒಂದೇ ಕಲಿತರೆ ಆಗಲ್ವಾ.ಯಾಕಿದನ್ನ ಕಲೀಬೇಕು.ನೀನೇಕೆ ಸುಮ್ನೆ ಬಂದೆ ಇಲ್ಲಿ ಅಂತ. ಆಮೇಲೆ ಅಂದೆ ಇಲ್ಲ ಇಲ್ಲ- ವಿಷಯ ಫರ್ ಫಾರ್ಮೆನ್ಸ್ ಮಾಡೋ ದೃಷ್ಟಿ ಇಲ್ಲದೇ ಇದ್ದರೂ ಕೂಡ ಓಡಿಸ್ಸಿ ಅಂದ್ರೆ ಏನು? ಅಂತ ತಿಳಕೊಳ್ಳೋಕ್ಕೋಸ್ಕರ ಬಂದೆ ಅಂತ ಹೇಳಿ ಹತ್ತು ದಿವಸ ಕಲಿತೆ ಅಲ್ಲಿ. ಆಮೇಲೆ ಕಲಾವಿದ ನಾರಾಯಣ್ ಅವರು ಇದ್ದಾಗ ಅಲ್ಲಿ ಹೋಗಿ ಅವರತ್ರ ಕಲಿತುಕೊಂಡೆ. ಆಮೇಲೆ ಇದು ಮಾಯಾರಾವ್ ಒಂದು ವರ್ಕ್‌ಶಾಪ್ ಮಾಡಿದಾಗ ಅಲ್ಲಿ ಹೋಗಿ

ಮಾರ್ಶಲ್ ಆರ್ಟ್. ಅಲ್ಲಿ ಎಲ್ಲ ಬೈದ್ರು ನನಗೆ ಏನು ಪರವಾಗಿಲ್ಲ ನಂದು ಫ್ರೀಡಂ ಆದ್ದರಿಂದ ಕಲಿತ್ಕೋತಿನಿ.

ವಿಜಯಾ: ಒಂದು ಹೆಣ್ಣು ಮಗು ಡಾನ್ಸ್ ಮಾಡ್ತಿದ್ದರೆ ಅಂದ್ರೆ ತುಂಬ ಪ್ರಸಿದ್ಧ ಸಂಗೀತಗಾರರು ಹಾಡೋದಿಲ್ಲ ಅಂತ ಅನ್ನೋದು ಒಂದು... ಆತರದ್ದು ನೀವೇನು ಫೇಸ್ ಮಾಡಿದ್ದೀರಾ?

ಉಷಾ: ಹೌದು. ನನಗೆ ಅದಕೆ ಅಂತ ಪ್ರಸಿದ್ಧ ಸಂಗೀತಗಾರರನ್ನು ಇಟ್ಟುಕೊಳ್ಳಲೇ ಇಲ್ಲ ನಾನು. ಯಾಕಂದ್ರೆ ಒಂದು ಪ್ರಶ್ನೆ ಏನು ಅಂದ್ರೆ ಈಗ ನೃತ್ಯಕ್ಕೆ ಸಂಗೀತ ಹಾಡೋದು ಬಹಳ ಕಷ್ಟ. ಅದು ಯಾಕಂದ್ರೆ ಸಂಗೀತಗಾರರು ಕಛೇರಿ ಮಾಡಬೇಕಾದ್ರೆ ಅವರ ಮನೋಧರ್ಮಕ್ಕೆ ತಕ್ಕಂತೆ ಹೆಂಗಬೇಕಾದ್ರೂ ರಾಗಾಲಾಪನೆ ಮಾಡಿಕೊಂಡು ತಮ್ಮ ವಿದ್ವತ್ತನ್ನು ಪ್ರದರ್ಶನ ಮಾಡೋಕೆ ಅವಕಾಶ ಇದೆ. ಇಲ್ಲಿ ನೃತ್ಯಕ್ಕೆ ವಿನಃ ಸಂಗೀತಕ್ಕೆ ನೃತ್ಯ ಅಲ್ಲ. ಇವರು ಹಾಡ್ತಾಯಿರಬೇಕು. ಇವರು ತಮ್ಮ ವಿದ್ವತ್ತನ್ನು ಪ್ರದರ್ಶನ ಮಾಡಾಕಾಗಲ್ಲ. ಇವರು ನೃತ್ಯ ಕಲಾವಿದೆಯ ನೃತ್ಯದ ಕಂಟ್ರೋಲ್ ನಲ್ಲಿ ಇರಬೇಕೇ ವಿನಃ ಇವರು ಸಂಗೀತಾನಾ ಇಷ್ಟ ಬಂದ ಹಾಗೆ ಹಾಡಾಕಾಗಲ್ಲ. ಅದಕ್ಕೆ ಅವ್ರು ಹೇಳ್ತಾರೆ ನಿಮ್ಮ ಡಾನ್ಸ್‌ಗೆ ನಾವು ಸಂಗೀತ ಹೇಳಿ ನಮ್ಮ ಗಂಟಲು ಹೋಗಿಬಿಡುತ್ತೆ ನಾವು ಹಾಡಾಕಾಗಲ್ಲ ಆದ್ದರಿಂದ ನಾವು ಹಾಡಲ್ಲ ಅಂತಾರೆ ಅವರು. ಬೇರೆ ಪಕ್ಕವಾದ್ಯದವರು ಅವರು ನುಡಿಸ್ತಾರೆ ಅವರಿಗೇನು ಇಲ್ಲ. ಇವಾಗ ಏನಾಗಿಬಿಡುತ್ತೆ ಪಕ್ಕ ವಾದ್ಯದವರು ಮೃದಂಗದವರು ಡಾನ್ಸ್‌ಗೆ ನುಡಿಸಿಬಿಟ್ಟರೆ ಅವರನ್ನ ಸಂಗೀತಗಾರರು ಕರಸೋದಿಲ್ಲ. ಹೇ ಅವನು ಡಾನ್ಸ್‌ಗೆ ನುಡಿಸ್ತಾನೆ. ಸಂಗೀತಕ್ಕೆಲ್ಲಿ ನುಡಿಸ್ತಾನೆ ನೃತ್ಯಕ್ಕೆ ಪಕ್ಕವಾದ್ಯ ನುಡಿಸೋನು ನೃತ್ಯಗಾರ್ತಿ ಯಾವ ತರಹ ಕಾಲುಗಳ ಹಾಕ್ತಾಳೋ ಅದಕ್ಕೆ ತಕ್ಕಂತೆ ಅವನು ಬೀಟ್ಸ್ ಕೊಡಬೇಕು. ಆಮೇಲೆ ಎಫೆಕ್ಟ್ ಕೊಡಬೇಕು. ಡಾನ್ಸ್ ಗೆ ಮೃದಂಗ ನುಡಿಸೋ ಅವರನ್ನ ಸಂಗೀತಗಾರ ತುಂಬಾ ಒಂಥರ ಕಾಣೋಕ್ಕೆ ಶುರು ಮಾಡಿಬಿಡುತ್ತಾರೆ. ಈಥರ ಪ್ರಶ್ನೆ ಬರುತ್ತೆ. ಕೆಲವು ಟೈಮ್‌ನಲ್ಲಿ ಕೆಲವು ದೊಡ್ಡ ದೊಡ್ಡ ಸಂಗೀತ ವಿದ್ವಾಂಸರು ಅವರ ಮಕ್ಕಳಿಗೆ ಡಾನ್ಸ್‌ಗೆ ಹಾಡಿದಾರೆ. ಈಗ ಉದಾಹರಣೆಗೆ ಎಂ.ಎಲ್.ವಸಂತಕುಮಾರಿ ಅವರ ಮಗಳು ಶ್ರೀವಿದ್ಯಾ ಈಗ ಒಳ್ಳೇ ಡಾನ್ಸರ್ ಆಗಿದ್ದಳು. ಎಂ.ಎಲ್.ವಸಂತನೇ ಹಾಡೋರು. ಹೀಗೆ ಕೆಲವು ಸಂಗೀತ ವಿದ್ವಾಂಸರು ಮಕ್ಕಳಿಗೆ ಡಾನ್ಸ್ ಕಲಿಸಿದರೆ ಆವಾಗ ಅವರು ಹಾಡ್ತಾರೆ. ಆವಾಗ ಅದು ಅವರಿಗೆ ಪ್ರಶ್ನೆ ಬರೋಲ್ಲ. ಬೇರೆಯವರಿಗೆ ಹಾಡು ಅಂದ್ರೆ ಅವರು ನಾವು ಹಾಡೋಲ್ಲ ಅಂತಾರೆ.

ವಿಜಯಾ: ನೃತ್ಯ ಮಾಡುವವರು ಪುರುಷರೂ ಇರುತ್ತಾರೆ. ಅವರು ಸ್ತ್ರೀಯರನ್ನ ಹೇಗೆ ನೋಡ್ತಾರೆ ಇಲ್ಲಿ ಅಸಮಾನತೆ ಇದೆಯೇ. ಅಸಮಾನವಾಗಿ ನೋಡ್ತಾರ. ಇಲ್ಲಿ ಒಂದು ಹೆಂಗ್ಸು ಡಾನ್ಸ್ ಮಾಡೋದಕ್ಕೂ ಗಂಡ್ಸು ಡಾನ್ಸ್ ಮಾಡೋದಕ್ಕೂ ಏನಾದರೂ ಅಂತರ ಇದೆಯೆ ಆ ಫೀಲ್ಡ್‌ಲ್ಲಿ?

ಉಷಾ: ಈವಾಗ ಆತರಹ ಅಂತರ ಇಲ್ಲ. ಈವಾಗ ಏನಾಗಿದೆ ಅಂದರೆ ತುಂಬಾ ಜನ ಮಹಿಳಾ ನರ್ತಕಿಯರಿದ್ದಾರೆ. ಪುರುಷ ನರ್ತಕರು ತುಂಬಾ ಕಡಿಮೆ ಇರೋದರಿಂದ ಈಗ ಜಾಸ್ತಿ ಡಿಮ್ಯಾಂಡ್ಸ್ ಇರೋದು ಅವರಿಗೇನೆ. ಪುರುಷ ನರ್ತಕರು ಯಾರಾದರೂ ಇದ್ದಾರೆ ಅಂದ್ಬಿಟ್ಟರೆ ಅವರಿಗೆ ಬೇಡಿಕೆ ಜಾಸ್ತಿ. ಈಗ ನಾವು ಒಂದು ನೃತ್ಯ ನಾಟಕ ಮಾಡಿದ್ರೆ ಪುರುಷ ನರ್ತಕರೇ ಬೇಕು. ಅದನ್ನ ಏನ್ ಮಾಡ್ತಾರೆ ಅವರನ್ನ ಕರೆಸ್ಕೋತಾರೆ ಅವಕಾಶ ಕೊಡ್ತಾರೆ. ಆಮೇಲೆ ಗವರ್ನಮೆಂಟ್ ಸ್ಕಾಲರ್ ಶಿಪ್ ನಲ್ಲಿ ಸ್ಕೀಮ್ ಇದೆ. ಏನಂದ್ರೆ ಪುರುಷ ನರ್ತಕರು ಬಂದ್ರೆ ಅವರು ಹೆಂಗೇ ಮಾಡ್ಲಿ ಸ್ಕಾಲರ್ ಶಿಪ್ ಕೊಟ್ಟುಬಿಡುತ್ತಾರೆ ಅವರಿಗೆ. ಯಾಕಂದ್ರೆ ನಮ್ಮಲ್ಲಿ ಪುರುಷ ನರ್ತಕರು ಬಹಳ ಕಮ್ಮಿ ಆದ್ದರಿಂದ ಅವರಿಗೆ ಬಹಳ ಸ್ಕೋಪ್ ಇದೆ. ಲೇಡೀ ಡಾನ್ಸರ್ ಬೇಕಾದಷ್ಟು ಜನ ಸಿಕ್ತಾರೆ. ಪುರುಷ ನರ್ತಕರು ಸಿಗುವುದು ಕಷ್ಟ. ಅವರಿಗೆ ಗ್ಯಾಜುವಲ್ ಆಗಿ ಎಲ್ಲಿ ಹೋದರೂ ಚಾನ್ಸಸ್ ಇದೆ. ಆದರೆ ಆಥರ ಭಾವನೆ ಈಗಿಲ್ಲ. ಆ ಭಾವನೆ ಹೋಗಿಬಿಟ್ಟಿದೆ.

ವಿಜಯಾ: ಮುಂಚೆ ಇತ್ತಾ?

ಉಷಾ: ಮುಂಚೆ ಇತ್ತು. ಗಂಡ್ಸು ಡಾನ್ಸ್ ಮಾಡ್ತಾರೆ ಅಂದ್ರೆ ಥೂ ಏನದು ಹೆಂಗ್ಸಂಗೆ ಡಾನ್ಸ್ ಮಾಡೋದು ಅನ್ನೋರು. ಅದೇ ಹೆಂಗ್ಸು ಹಂಗೆ ಡಾನ್ಸ್ ಮಾಡ್ತಾಳೆ ಅಂದ್ರೆ ಹೇಳಿಕೊಡೋ ಟೀಚರ್ ಮೇಲೆ ಡಿಪೆಂಡ್ ಆಗುತ್ತೆ. ಈಗ ಎಷ್ಟೋ ಜನ ಪುರುಷ ನರ್ತಕರಿದ್ದಾರೆ. ಅವರು ಹೆಂಗಸರಂಗೆ ಯಾರೂ ಮಾಡಲ್ಲ. ಅದನ್ನ ಹೇಳಿ ಕೊಡೋ ಟೀಚರದು ಟೆಕ್ನಿಕ್ ಮೇಲೆ ಹೋಗುತ್ತೆ. ಅದಕ್ಕೆ ಕಥಕ್ಕಳಿ ಅಭ್ಯಾಸ ಈ ಮಾರ್ಶಲ್ ಆರ್ಟ್ ಇಂಥದ್ದೆಲ್ಲ ಅಭ್ಯಾಸ ಮಾಡಿರೋರು ಗಂಡಸರು ಆದರೆ ಅವರು ಗಂಡು ನರ್ತನ ಮಾಡ್ತಾರೆ. ಅವರು ತುಂಬಾ ಹೇಳ್ಕೊಡೋಕೆ ಬಾರ್ದೆ ತಳಕು ಬಳಕು ಮಾಡಿದಾಗ ಸಾಮಾನ್ಯ ನೋಡೋಕೂ ಚೆನ್ನಾಗಿರಲ್ಲ. ಬಟ್ ಆವಾಗ ಹಿಂದಿನ ಕಾಲದಲ್ಲಿ ಒಬ್ಬ ಗಂಡಸು ಮೇಸ್ಟ್ರು ಹೇಳಿಕೊಡಬಹುದು. ಅವನು ಸ್ಟೇಜ್ ಮೇಲೆ ಡಾನ್ಸ್ ಮಾಡ್ತಾನೆ ಅಂದ್ರೆ ಏನು ಹೆಂಗ್ಸಾ, ಹೆಣ್ಣಿಗನಾ, ಇವನೇನು ಹಿಂಗ ಡಾನ್ಸ್ ಮಾಡ್ತಾನೆ ಅಯ್ಯಯ್ಯೋ ಅಂತ ಆಡಿಕೋತಾ ಇದ್ದರು. ಹಂಗಾಗ್ಬಿಟ್ಟು ತುಂಬಾ ಜನ ರಂಗಭೂಮಿ ಮೇಲೆ ಬರ್ತಾನೇ ಇದ್ದಿಲ್ಲ. ಬಹಳ ಬೆರಳೆಣಿಸುವಷ್ಟು ಜನ ಮಾತ್ರ. ಈವಾಗ ಹಾಗಲ್ಲ ತುಂಬಾ ಜನ ಪುರುಷರು ನರ್ತಕರು ಬಂದ್ಬಿಟ್ಟಿದ್ದಾರೆ. ಅವರಿಗೆ ಬೇಡಿಕೆನೂ ಇದೆ. ಇವಾಗ ಏನಾಗಿಬಿಟ್ಟಿದೆ ಅಂದ್ರೆ ನಾವಿಬ್ಬರೂ ಸಮಾನ ರಂಗಕ್ಕೆ ಬಂದುಬಿಟ್ಟಿದ್ದೇವೆ. ಈಗ ಹಿಂದೆ ಇದ್ದಂಗೆ ಪರಿಸ್ಥಿತಿ ಇಲ್ಲ. ಇವಾಗ ಏನಾಗಿದೆ ಎಲ್ಲ ಈಗ ಯಂಗಸ್ಟರ್ಸ್ ಜನರೇಶನ್ ಬಂದು ಬೇಕಾದಷ್ಟು ಬದಲಾವಣೆ ಆಗಿದೆ. ಎಷ್ಟೋ ಪುರುಷ ನರ್ತಕರು ಮತ್ತು ಮಹಿಳಾ ನರ್ತಕಿಯರು ಕೂಡಿ ಎಷ್ಟೊಂದು ಒಳ್ಳೊಳ್ಳೆ ಕ್ರಿಯೇಶನ್ ವರ್ಕ್ ಮಾಡ್ತಾನೇ ಇದ್ದಾರೆ, ಆದ್ದರಿಂದ ಆಥರ ಇಲ್ಲ ಈಗ.

ವಿಜಯಾ: ನೀವು ಸಬ್ಜೆಕ್ಟ್‌ಗಳನ್ನ ಆರಿಸೋವಾಗ ಈಗ ಡಾನ್ಸ್‌ಗೆ, ಈಗ ಆಲ್ ರೆಡಿ

ಇರೋದು ಆಗ ಬಹುತೇಕ ಹೆಣ್ಣನ್ನು ತುಂಬಾ ಸಬ್ಲೈಮ್ ಮಾಡಿ ಹೇಳುವಂತಹ ಸಬ್ಜೆಕ್ಟ್ಸ್ ಇತ್ತಲ್ಲ. ನಿಮ್ಮ ಒಳಗಡೆ ಒಂದು ಈಗೋ ಇರುತ್ತಲ್ಲಾ ಆ ಈಗೋ ಎಲ್ಲಿ ಭಕ್ತಿಯ ಕಾರಣ ಇದ್ದರೂ ಕೂಡ ಎಲ್ಲೋ ಒಂದುಕಡೆ ನಿಮ್ಮನ್ನ ನೀವು ಕೇಳೋಕ್ಕೆ ಮಾಡಿಕೊಳ್ತಿರ್ತಿರಿ ಅಲ್ಲಾ. ಕಂಟೆಂಟ್ ಪಾಯಿಂಟ್ ನಿಂದ ನೃತ್ಯದಲ್ಲಿ ಸಾಮಾನ್ಯವಾಗಿ ಇರೋದೇ ಹಾಗೆ. ಅದನ್ನ ಯಾವಾಗಲಾದರೂ ಯೋಚನೆ ಮಾಡಿದ್ದೀರಾ? ಅನ್ನಿಸಿದೆಯಾ ಏನಾದರೂ? ಈಗ ನಾನು ಯಾಕೆ ಈ ಮಾತು ಕೇಳ್ತೀನಿ ಅಂದ್ರೆ, ಗಂಡಸರೇ ನಾಟಕ ಬರಿಯೋರು. ಅದರಿಂದ ಅವರಿಗೆ ಹೆಂಗಸರ ಮನಸ್ಸಿನ ಅರ್ಥ ಮಾಡಿಕೊಳ್ಳೋಕೆ ಆಗ್ತಿರಲಿಲ್ಲ. ಗಂಡಸರೇ ಹೆಂಗ್ಸು ವೇಷಾನೂ ಹಾಕೋರು. ಒಬ್ಬ ವಿಶ್ವಾಮಿತ್ರನ ಹತ್ತಿರ ಹೋಗಿ ಮೇನಕೆ ನನಗೆಮಗು ಬೇಕು ಅಂತ ಕೇಳೋದನ್ನ ಎಲ್ಲಾ ಹೆಣ್ಣು ತಾಯಿಯೂ ಮಾತೃತ್ವವನ್ನು ಅಪೇಕ್ಷೆ ಪಡ್ತಾಳೆ ನಿಜ. ಆದರೆ ಗಂಡಸಿನ ಹತ್ರ ಹೋಗಿ ಹಂಗೆ ಬೇಡ್ಕೊಳ್ಳೋದಿಲ್ಲ. ಇದು ಗಂಡ್ಸೊಬ್ಬ ಬರೆದಿರೋದರಿಂದ ಹೀಗೆ ನಾಟಕ ಬರೆದಿದ್ದಾನೆ ಅಂತ ಒಂದು ಹೆಂಗಸು ರಿಟರ್ಟ್ ಮಾಡ್ತಾ ಇರ್ತಾಳೆ. ಅಭಿನೇತ್ರಿಯೊಬ್ಬಳು ಹಾಗೆಯೇ ನಿಮ್ಮ ಡಾನ್ಸ್‌ನ ಸಬ್ಜೆಕ್ಟ್ ಬಗ್ಗೆ ನಿಮಗೆ ಯಾವತ್ತಾದರೂ ಒಳಗಡೆಯಾದರೂ ಇದು ಸರಿಯಿಲ್ಲ ಇದು ಪ್ರಮಾದ...

**ಉಷಾ:** ಯಾವ ಹೆಣ್ಣು ಹೋಗಿ ಕೇಳಲ್ಲಾ ಅದು ನನ್ನ ಒಂದು ಜೀವನದ ಉದಾಹರಣೆ. ಯಾವ ಹೆಣ್ಣು ಕೂಡ ಆ ಒಂದು ಆಸೆ ಇದ್ದರೂ ಕೂಡ ಅವಳು ತಾನು ಹೋಗಿ ಕೇಳಿಕೊಳ್ಳೋಕೆ ಇಷ್ಟಪಡೋದಿಲ್ಲ. ಯಾಕೆಂದ್ರೆ ತಾನು ಸೋಲಬೇಕಾಗುತ್ತೆ ಅನ್ನೋ ಪ್ರಶ್ನೆ ಬರುತ್ತೆ. ಅದನ್ನ ಅವಳು ಆಕಡೆಯಿಂದಾನೇ ಬರಲಿ ಅನ್ನೋ ಅಪೇಕ್ಷೆ ಮಾಡುತ್ತಾಳೆ. ಅದನ್ನ ನಾನು ಅಷ್ಟು ಒಪ್ಪಿಕೊಳ್ಳಲ್ಲ.

**ವಿಜಯಾ:** ನಿಮ್ಮ ಡಾನ್ಸ್ ನ ಸಬ್ಜೆಕ್ಟ್‌ನಲ್ಲಿ ಯಾವುದಾದರೂ ಆಥರದ್ದು ಇದೆಯಾ? ಬರೀ ಭಾವಾಭಿನಯಕ್ಕೆ ಒತ್ತು ಕೊಟ್ಟು ಆರಿಸಿಕೊಂಡು ಹೋಗ್ತಾ ಇದ್ದರೂ ಕೂಡ ಎಲ್ಲೋ ಒಂದುಕಡೆ ಹೆಣ್ಣಿನ ಸ್ವಾಭಿಮಾನಕ್ಕೆ ಧಕ್ಕೆ ಬರುವಂತಹ ವಸ್ತು ಇದ್ದಾಗ ಹೇಗೆ ನಿಭಾಯಿಸ್ತೀರಿ ಪುರುಷನಿಗೆ ಸಬ್ಲೈಮ್ ಆಗುವಂತಾದ್ದು ಅವನನ್ನೇ ಆರಾಧಿಸುವ ಅವನಿಗೆ ತೀರಾ ಅಧೀನ ಆಗುವಂತಹ ಸಬ್ಜೆಕ್ಟ್ ಬಂದಾಗ... ಸಾಮಾನ್ಯವಾಗಿ ನೃತ್ಯದಲ್ಲಿ ಹಾಗೆ ಇರುತ್ತೆ ಅಲ್ವಾ. ಕೃಷ್ಣ ಒಂದು ಕೇಂದ್ರ ಪಾತ್ರವಾಗಿಬಿಡುತ್ತದೆ... ಅವನೇ ಹೆಚ್ಚು....

**ಉಷಾ:** ಹೌದು ಕೃಷ್ಣ ಮೇನ್ ಅವನೇ ಕೃಷ್ಣ. ಕೃಷ್ಣನ್ನೇ ಸಬೆಜೆಕ್ಟ್ ಅಗಿ ಇಟ್ಟುಕೋತಾರೆ ಎಷ್ಟೋ ಜನ. ಇಟ್ಕೊಂಡು ಹಾಗಿ ಮಾಡೋ ಸಂದರ್ಭಗಳೂ ಉಂಟು ಬೇಕಾದಷ್ಟು.

**ವಿಜಯಾ:** ಅದು ಪಾತ್ರ ಕೂಡ ಅಷ್ಟೆ. ಈ ಪ್ರಣಯಿನಿಯ, ಅಭಿಸಾರಿಕೆಯ ಪಾತ್ರವಿಟ್ಟು ಬೇರೆನೊ, ನಮ್ಮ ಪುರಾಣಗಳಲ್ಲಿ ಬೇಕಾದಷ್ಟು ಪಾತ್ರ ಇವೆ. ಅವನ್ನ ತಗೊಳ್ಳೋದು ಕಡಿಮೆಯೇ.

ಉಷಾ: ತಗೊಳ್ಳೋದು ಕಡಿಮೆ ಅಂದ್ರೆ, ಅದಕ್ಕೆ ಏನಾಗುತ್ತೆ ಅಂದ್ರೆ ಈ ನೃತ್ಯ ನಾಟಕಗಳನ್ನ ಆಡಿಸ್ಕೋಬೇಕಾದರೆ ನಾವು ನಮ್ಮ ಅಭಿನಯಕ್ಕೆ ಸ್ಕೋಪ್ ಸಿಗುವಂತಾದ್ದು ಸ್ವಲ್ಪ ಜಾಸ್ತಿ ತೊಗೊಳ್ಳದು ಎಲ್ಲರೂವೆ. ತಗೊಂಡು ಅದಕ್ಕೆ ಆ ಕಥಾ ಥರದ ಪಾತ್ರಗಳಿದ್ರೆ, ತಗೊಳ್ಳದ್ರಲ್ಲಿ ತಪ್ಪೇನಿಲ್ಲ. ಆದರೆ ಅದನ್ನ ಬರೆದುಕೊಡುವಂಥಹ ವ್ಯಕ್ತಿ ನಮಗೆ ಸಾಹಿತ್ಯ ಬರೆದುಕೊಡುತ್ತಾರೋ, ಅದನ್ನ ಅವರ ಆ ಪಾತ್ರಕ್ಕೆ ಒಂದು ಭಾವನೆ ತುಂಬಿಕೊಟ್ರೆ ನಮಗೆ ಏನು ಬೇಕಾದ್ರೂ ಮಾಡಬಹುದು.

ವಿಜಯಾ: ಈ ಸ್ತ್ರೀಯರು ಬರೆದಂತಹ ಯಾವ ಇದೂ ಇಲ್ವಾ. ಡಾನ್ಸ್‌ಗೆ ಸ್ತ್ರೀಯರೇ ರಚಿಸಿರುವಂತಹ...

ಉಷಾ: ಇಲ್ಲ ಸ್ತ್ರೀಯರೇ ಬರೆದಿರುವಂತಹದು ನನಗೆ ಯಾವುದೂ ನೆನಪು ಬರ್ತಿಲ್ಲ. ಬರೆದಿರಬೇಕೋ ಏನೋ? ಬಟ್ ಇದುವರಿಗೆಲ್ಲ ಈ ಪುರುಷರು ಬರೆದಿರುವಂಥ ನೃತ್ಯ ನಾಟಕಗಳನ್ನೇ ಮಾಡ್ಕೊಂಡು ಬರ್ತಿರೋದು. ಸ್ವಲ್ಪ ಜಾಸ್ತಿ. ಬರಕೊಡುತಿರೋದು ಅವರಗಳೇನೆ ನಮಗೆ. ಏನಾದ್ರೂ ಬೇಕಾದ್ರೆ ಸಾಹಿತ್ಯ ಬದ್ಧವಾಗಿ ನಾವು ಕೇಳ್ತಿವಿ. ಬರಕೊಡತಾರೆ. ಬರಕೊಡುವಂತಹ ಕವಿಗಳಿಗೆ ಸಂಗೀತದ ಅಭಿರುಚಿ ಇದ್ರೆ ನಮಗೆ ತುಂಬ ಅದರಿಂದ ಹೆಲ್ಪ್ ಆಗುತ್ತೆ. ಅವರಿಗೆ ಸಂಗೀತದ ನಾಲ್ಡೆಜ್ ಇದ್ರೆ ನಮಗೆ ಕಷ್ಟ ಆಗಲ್ಲ. ಇಲ್ಲದಿದ್ರೆ ಅವರು ಬರೆದಿರೋ ಕೆಲವು ರಚನೆ ನಮಗೆ ಪ್ರಾಸಬದ್ಧವಾಗಿ ಇರೋಲ್ಲ. ಪ್ರಾಸ ಬದ್ಧವಾಗಿ ಮಾಡಬೇಕಾದ್ರೆ ಸಾಹಿತ್ಯ ಎಲ್ಲೋ ಒಂದು ಕಡೆ ಲೋಪದೋಷ ಆಗ್ಬಿಡುತ್ತೆ. ತಪ್ಪಾಗಿ ಹೋಗ್ಬಿಡುತ್ತೆ ಒಂದೊಂದು ಸಾರಿ. ಅದು ನಾವು ಗಮನಿಸಿರೊಲ್ಲ. ಅದಕ್ಕೆ ನಾವು ಎಷ್ಟೋ ಸಾರಿ ಈ ಥರ ಪ್ರಸಂಗ ಬಂದಾಗ ಸಾಹಿತಿಗಳ ಹತ್ತಿರ ಹೇಳ್ತಿವಿ. ನೋಡಿ ಇದಕ್ಕೆ ಈಥರ ನಮಗೆ ತಾಳ-ರಾಗದ ಪ್ರಕಾರ ಹೋದಾಗ ಇಲ್ಲಿ ಸಾಹಿತ್ಯಕ್ಕೆ ಈ ಥರ ತೊಂದರೆ ಆಗುತ್ತದೆ. ಇದನ್ನ ಬೇರೆ ಥರ ಸರಿಪಡಿಸಿ ಕೊಡಿ ಅಂತ. ಆ ಥರ ನಮಗೆ ಬರಕೊಡೊರು ಒಳ್ಳೇರು ಇದ್ರೆ ಮಾಡಬಹುದು.

ವಿಜಯಾ: ನಾಟಕಗಳಿಗೂ ಡಾನ್ಸ್ ಡೈರೆಕ್ಟ್ ಮಾಡಿದಿರಿ. ಸಿನಿಮಾಗೂ ಮಾಡಿದೀರಿ ಈ ಎರಡರಲ್ಲೂ ನಿಮ್ಮ ಅನುಭವ.

ಉಷಾ: ಅಯ್ಯೋ ಬೇಕಾದಷ್ಟಿವೆ.

ವಿಜಯಾ: ಏನಾದರೂ ಒಂದೆರಡು ಜ್ಞಾಪಿಸಿಕೊಳ್ಳಬಹುದಾ? ಅಲ್ಲಿ ಹ್ಯಾಗೆ ನಿಮ್ಮ...

ಉಷಾ: ಅಲ್ಲಿ ಸಿನಿಮಾದಲ್ಲಿ ಏನೊಂದ್ರೆ. ಸಿನಿಮಾದಲ್ಲಿ ಯಾವುದೇ ಒಂದು ಸಾಹಿತ್ಯನ ಕೊಟ್ಟು, ಕ್ಯಾಸೆಟ್ ಮಾಡಿ ಕೊಟ್ಟುಬಿಡುತ್ತಾರೆ. ಇದನ್ನ ಮಾಡಿ ಅಂತ ಹೇಳ್ತಾರೆ. ಸಿಕ್ವನ್ಸ್ ಹೇಳ್ತಾರೆ. ಹೀಗೆ ನಾವು ಮಾಡಿದಾಗ ಏನಾಗುತ್ತದೆ ಅಂದ್ರೆ. ಕೆಲವೊಮ್ಮೆ ನಾವು ಮಾಡಿದ್ದಂತಹ ಒಂದು ನಿರ್ದೇಶನ ಅವರಿಗೆ ಇಷ್ಟ ಆಗಲ್ಲ. ಅವರು ಮಾರ್ಕೆಟ್ ದೃಷ್ಟಿಯಿಂದ ಏನೋ ಒಂದು ಇಟ್ಟುಕೊಂಡಿರ್ತಾರೆ. ನಮಗೆ ಈಥರ ಬೇಕು ಅಂತ

ಹೇಳ್ತಾರೆ. ನಮಗೆ ಏನಾಗುತ್ತೆ ಅಂತಂದ್ರೆ, ನಮಗೆ ಆ ಥರ ಮಾಡೋಕೆ ನಮಗೆ ಬರೋದಿಲ್ಲ. ಬಹಳ ಕಷ್ಟ ಆಗುತ್ತೆ. ಅದಕ್ಕೆ ನಾನು ಹೇಳ್ತೀನಿ ನಮ್ಮಂಥ ಕ್ಲಾಸಿಕಲ್ ಡ್ಯಾನ್ಸರ್ ನ ನೀವು ಸಿನಿಮಾಗಳಿಗೆ ನೃತ್ಯ ನಿರ್ದೇಶನ ಮಾಡಾಕ ಕರೆಸ್ತೀರಾ ಬೇಡ ನಿಮ್ಮ ಒಂದು ಟೇಸ್ಟ್ ಬೇರೆ ನಮ್ಮ ಟೇಸ್ಟ್ ಬೇರೆ ಆಗಲ್ಲ ಅಂತ. ಆ ಥರ ಕಹಿ ಅನುಭವನೂ ಆಗಿದೆ. ಕೆಲವೊಮ್ಮೆ ಆಥರ ನೃತ್ಯ ಬೇಡ Something deffrent ಆಗಿ ಬೇಕು ಅಂತ ಹೇಳಿ ನೃತ್ಯ ನಿರ್ದೇಶನಕ್ಕೆ ಕರೆಸಿಕೊಂಡ ಡೈರೆಕ್ಟರ್ಸ್ ಗಳೂ ಇದಾರೆ. ಅವರುಗಳು ಮೊದಲೇ ಹೇಳಿಬಿಡೋರು. ನಮಗೆ ನೋಡಮ್ಮಾ ಯೂಜುವಲ್ ಆಗಿ ಸಿನಿಮಾಗಳಲ್ಲಿ ಇರೋ ಡಾನ್ಸ್ ಗಳ ನೋಡಿ ಬೇಜಾರು ಆಗಿದೆ. ಇದಾದ್ರೂ ಸ್ವಲ್ಪ ವಿಭಿನ್ನಾವಾಗಿದ್ದು, ನೋಡುವರು ಇದ್ಯಾರೋ ಸಿನಿಮಾ ನೃತ್ಯದವರು ಮಾಡಿಲ್ಲ ಬೇರೆ ಯಾರೋ ಮಾಡಿದಾರೆ ಅನ್ನೊದನ್ನ ಗುರ್ತುಹಿಡಿಯಂಗೆ ಮಾಡಿ ಅಂತ. ಅಂಥವರು ಕೂಡ ಕೆಲ್ಸ ಕೊಟ್ಟಿದ್ದಾರೆ. ಅವಾಗದನ್ನ ಮಾಡಿ ತೋರ್ಸಿದ್ದೂ ಉಂಟು.

ವಿಜಯಾ: ಅದು ಯಾವುದು ಮೇಡಂ ಸಿನಿಮಾ?

ಬಿಳಿಗಿರಿ ಬನದಲ್ಲಿ ಮಾಡಿದಾಗ, ಸಿದ್ಧಲಿಂಗಯ್ಯನವರು ನನಗೆ ಹೇಳಿದ್ರೂ, ನನಗೆ ನೀವು ವಿಭಿನ್ನವಾಗಿ ನೃತ್ಯ ನಿರ್ದೇಶನ ಮಾಡಿ. Classical touch Folk ಎರಡೂ ಇರಬೇಕು. ಅಥರ ಮಾಡಿಕೊಡಿ ಅಂದಾಗ. ಟೈಟಲ್ ಸಾಂಗ್ ಅದನ್ನ ಮಾಡಿದ್ದು. ಅದು ಅವರಿಗೆ ತುಂಬಾ ಇಷ್ಟ ಆಯಿತು. ಆಮೇಲೆ ತಿರುಗಿ ಅವರ ಮುಂದಿನ 'ಕೂಡಿ ಬಾಳಿದರೆ ಸ್ವರ್ಗ ಸುಖ'ಅದಕ್ಕೆ ಮತ್ತೆ ನನಗೆ ಕರೆದ್ರು ಅವರು. ಕರೆದುಬಿಟ್ಟು. ನೃತ್ಯ ನಿರ್ದೇಶನ ಮಾಡಿಸಿದ್ರು. ಅಲ್ಲಿ ಹೋದ್ರೆ ಏನಾಗುತ್ತೆ ಅಂದ್ರೆ. ಬೇಗ ಕೆಲಸಗಳು ಆಗಲ್ಲ. ಆಮೇಲೆ ಅವರು ಕರೆದುಕೊಂಡು ಬರುವಂತಹ ಯಾರು ಕಥಾನಾಯಕಿಗೆ ಡಾನ್ಸ್ ಸೆನ್ಸ್ ಇರಲ್ಲ. ಅವರಿಗೆ ರಿದಂ ಸೆನ್ಸ್ ಇರಲ್ಲ ಡಾನ್ಸ್ ಬರೋದಿಲ್ಲ. ಅವರಿಗೆ ಏನೂ ಅಂದ್ರೆ, ಹಿರೋಯಿನ್ ಅಂದ್ರೆ, ಅವರ ಪಾತ್ರಕ್ಕೆ ಎಷ್ಟು ಬೇಕೋ ಅಷ್ಟೇ ನೋಡ್ತಾರೆ ಡಾನ್ಸ್ ಅವರಿಗೆ ಸೆಕೆಂಡರಿ. ಅವರಿಗೆ ಅಷ್ಟು ಸ್ಕೋಪ್ ಕೊಡಲ್ಲ. ಆವಾಗ ನಮ್ಮಂಥವರಿಗೆ ನಿರ್ದೇಶನ ಮಾಡೋಕೆ ಬಹಳ ಕಷ್ಟ ಆಗುತ್ತೆ, ಟೈಮೂ ವೇಸ್ಟ್ ಆಗುತ್ತದೆ. ಆಮೇಲೆ ನಮ್ಮ ಬುದ್ಧಿವಂತಿಕೇನೂ ಏನೂ ನಡಿಯೊಲ್ಲ. ಅಂಥ ಟೈಮಲ್ಲಿ ಅದಕೆ ನಾನಂದೆ ಇನ್ನು ಬೇಡ ನನಗಿದು ಸರಿ ಹೋಗಲ್ಲ. ಅವತ್ತಿಂದ ೭-೮ ಸಿನಿಮಾಗಳಿಗೆ ಡಾನ್ಸ್ ಡೈರೆಕ್ಷನ್ ಮಾಡಿ ಬಿಟ್ಬಿಟ್ಟೆ. ನಾನಿನ್ನು ಬರೋದಿಲ್ಲ...

ವಿಜಯಾ: ನಿಮಗೆ ಯಾವ್ದೊ ಒಂದು ಸಿನಿಮಾ Productionನಲ್ಲಿ ಭಾಗ....

ಉಷಾ: ಹಾ, ಹೌದು. ನೋಡು ಸೆಹಷನೆ ಮರೆತು ಹೋಗಿತ್ತು. ಒಂದುಸಲ ಒಂದು, ಎಂತದು, 'ಸ್ವಾಮಿ ಶರಣಂ ಅಯ್ಯಪ್ಪ' ಅಂತಂದ್ಬಿಟ್ಟು ಸಿನಿಮಾ ತೆಗೆದಾಗ ಒಂದು ಸಿಕ್ವೆನ್ಸ್‌ಗೆ ನೀವೇ ಡಾನ್ಸ್ ಮಾಡ್ಬೇಕು ಅಂದ್ರು ನನಗೆ. ನಾನಂದೆ ಇಲ್ಲ ನಾನು ಮಾಡ್ತಿನಿ. ಆದರೆ ಕಾಸ್ಟ್ಯೂಮ್ಸ್ ಬಗ್ಗೆ ನಾನು ವೆರಿ ಪರ್ಟಿಕೂಲರ್ ಅಂದೆ... ಸರಿ ಎಂದು ಒಪ್ಪಿದರು.

ನನಗೆ ಮೊದಲೆಲ್ಲ ಶೂಟಿಂಗ್ ನಲ್ಲಿ ಆದಾಗ ಅವರು ಕರೆಕ್ಟಾಗೆ, ನಾನು ಹೇಳಿದಂತೆ ಕಾಸ್ಟೂಮ್ಸ್ ಎಲ್ಲ ಹಾಕ್ಕೊಂಡು ಡಾನ್ಸ್ ಮಾಡಿದೆ. ಆಮೇಲೆ Next ಸೀನ್‌ಗೆ ಅವರು ಇಲ್ಲ ಇಲ್ಲ ನೀವು Blouse ಎಲ್ಲ ಹಾಕ್ಕೊಳ್ಳಬಾರ್ದು. ಬರೀ ಪಟ್ಟೀನ ಕಟ್ಟಿಕೊಂಡು ಡಾನ್ಸ್ ಮಾಡ್ಬೇಕು. ಅದಕ್ಕೆ ನಾನು ಮಾಡಲ್ಲ ಅಂದೆ. ತುಂಬಾ ಗಲಾಟೆ ಆಯ್ತು. ನಾನು ಬಹಳ ಅತ್ತು, ನಾನು ಕೋಪ ಬಂದು ೪-೬ ಜನನೆಲ್ಲ ಕರೆಸಿ, ಬೈಸಿ ಎಲ್ಲಾ ಮಾಡ್ಬಿಟ್ರು. ನಾನಂದೆ ಇಲ್ಲ ನಾನು ಮಾಡಲ್ಲ. ನಾನು ನಿಮಗೆ ಯಾವ ಅಗ್ರಿಮೆಂಟೂ ಬರೆದುಕೊಟ್ಟಿಲ್ಲ. ಅದರಿಂದ ನಾನು ಬರಲ್ಲ ಅಂತ ಬಂದ್ಬಿಟ್ಟೆ ವಾಪಾಸು ನಾನು. ಅವತ್ತಿಂದ ಈ ಸಹವಾಸನೇ ಬೇಡ ಅಂತ. ಇದಕ್ಕೆ ತಕ್ಕಂತೆ ಯಾರು ಮಾಡ್ತಾರೋ ಅವರ್ನ ಕರೆಸಿಕೊಂಡು ಮಾಡ್ಕೊಳ್ಳಿ ನಾನು ಮಾಡಲ್ಲ ಅಂದೆ.

ವಿಜಯಾ: ನಿಮ್ಮ ಹತ್ರ ಹುಡುಗರು ಬರ್ತಾರಲ್ಲ ಪಾಠ ಕಲಿಯೋಕೆ. ಎಲ್ರೂ ನಿಮ್ಮ ಹಾಗೇನೇ ಒಂದು Aim ಇಟ್ಕೊಂಡು ಬರೋರು ಇದಾರ, ಅಥವಾ ಏನೋ ಒಂದು ಡಾನ್ಸ್ ಕಲಿಯೋದು ಅಂತ...

ಉಷಾ: ಈಗ ಇಲ್ವೆ ಇಲ್ಲ. ಅದು Aim ಇಟ್ಕೊಂಡು ಬರೋರು ಬಹಳ ಕಮ್ಮಿ. ಈವಾಗ ಏನಾಗಿದೆ ಅಂದ್ರೆ ಪ್ರತಿಯೊಬ್ಬರಿಗೂವೆ ಡಾನ್ಸ್ ಕಲಿಯೋಕೆ ಬರೋದು ಏನಕ್ಕೆ ಅಂದ್ರೆ. ಅವರಿಗೆ ಮೊದ್ಲು TV ಮಾಧ್ಯಮ. ಅವರಿಗೇನೂ ಅಂದ್ರೆ ನಾನು ಬಂದು ತಕ್ಷಣ TVನಲ್ಲಿ Programme ಕೊಡ್ಬೇಕೂ ಆಮೇಲೆ ೪-೬ ಕಡೆ Festivel Programme ಆಗ್ಬೇಕು. ಅಷ್ಟೆ ವಿನಹ ಅವರು ನಾನಿದನ್ನ ಕಲೆ ಅಂತ ಕಲಿತುಕೊಂಡು ಇದರಲ್ಲಿ ಮುಂದೆ ಬರೋವ್ರು ಯಾರೂ ಇಲ್ಲ, ಯಾರೂ ಇಲ್ಲ. ಅದು ಹೊರಟೇ ಹೋಯ್ತು ಅದೇನು ಇನ್ನು ಬಹುಶಃ ನಾವು ನಾಲ್ಕಾರು ಜನ ಬೆಂಗಳೂರಲ್ಲಿ ಬಿಟ್ರೆ. ಎಲ್ಲ ನಿಂತು ಹೋಗುತ್ತೋ ಏನೋ. ಯಾಕಂದ್ರೆ ಪ್ರತಿಯೊಬ್ಬರಿಗೂ ಏನಾಗಿದೆ. ನಮ್ಮ ಮಕ್ಕಳು ಸಾಫ್ಟವೇರ್ ಇಂಜನಿಯರ್ ಆಗ್ಬೇಕು. ಇಲ್ಲ ಡಾಕ್ಟರ್ ಆಗ್ಬೇಕು. ಫಾರಿನ್‌ಗೆ ಹೊಗ್ಬೇಕು. ಇದಿಷ್ಟೆ ಅವರಿಗೆ. ಆಮೇಲೆ ಇನ್ನೊಂದಿದೆ. ಕಲಿಯೋಕೆ ಬರ್ತಾರಲ್ಲ ಅದರಲ್ಲೂ ಒಂದು ಸ್ವಾರಸ್ಯ ಇದೆ. ಈಗ ತಂದೆ-ತಾಯಿ ಮಕ್ಕಳನ್ನು ಡಾನ್ಸ್ ಗೆ ಕಳಿಸ್ತಾರಲ್ಲ. ಗಂಡು ಹುಡುಗರು ಆಗ್ಬಹುದು ಹೆಣ್ಣು ಹುಡುಗಿಯರು ಆಗಬಹುದು. ಏನಕೆ ಅಂದ್ರೆ ತಂದೆ-ತಾಯಿ ಇಬ್ರೂ ಕೆಲಸ ಮಾಡ್ತಾಯಿರುತ್ತಾರೆ. ಅವರಿಗೇನು ಆಗುತ್ತೆ ಅಂದ್ರೆ ಸಂಜೆ ಸ್ಕೂಲ್ ಮುಗಿದ ಮೇಲೆ ಮಕ್ಕಳು ಎಲ್ಲಿ ಹೋಗ್ತಾರೆ. ಸ್ಕೂಲ್ ಮುಗಿದ್ಮೇಲೆ ಇಬ್ರೂ ಕೆಲಸದಿಂದ ಬರೋದಕ್ಕೆ ಹೊತ್ತಾಗುತ್ತೆ. ರಸ್ತೆನಲ್ಲಿದ್ರೆ ಕೆಡಾಕೆ ಛಾನ್ಸ್ ಸ್ ಇದೆ. ಅದಕ್ಕೆ ಡಾನ್ಸು- ಸಂಗೀತ ಅಂತ ತೊಗೊಂಡು ಹೋಗಿ ಅಲ್ಲಿ ಬಿಟ್ಬಿಟ್ರೆ. ಮೇಡಂ ತಲೇನೂ ತಿಂದಾಗೆ, ನಮ್ಮ ಮಕ್ಕಳು ಹೊರಗಡೆ ಸೇಫ್ಟಿಯಾಗೂ ಇರ್ತಾರೆ. ಕರೆಕ್ಟಾಗಿ ಅವರು ಆಫೀಸಿನಿಂದ ಬರೋ ಅಷ್ಟೋತ್ತಿಗೆ ಕ್ಲಾಸೂ ಮುಗ್ಸಿಬಿಡ್ತಿವಿ ನಾವು. ಬಂದ್ಬಿಟ್ಟು ಸ್ಕೂಟರ್ ಮೇಲೆ ಪಿಕಪ್ ಮಾಡಿಕೊಂಡು ಹೊರಟು ಹೋಗುತ್ತಾರೆ. ಹಂಗೂ ಒಂದು ಕೆಟ್ಟ ಗುರಿ ಇದೆ. ಕೆಲವರು

ಏನ್ಮಾಡ್ತಾರೆ, ನಮ್ಮ ಮಗಳು ಏನ್ಮಾಡದು ಅಂದ್ರೆ Extra curriculam ಏನೇನಿದೆ. ನಮ್ಮ ಮಗಳು ಸ್ಪೋರ್ಟ್ಸ್ ನಲ್ಲಿದಾಳೆ, ಡಾನ್ಸ್ ನಲ್ಲಿದಾಳೆ, ಸಂಗೀತದಲ್ಲಿದಾಳೆ, ಕಂಪ್ಯೂಟರಲ್ಲಿ ಇದಾಳೆ, ಪೇಂಟಿಂಗ್ ಕಲಿತಾಳೆ, ಅದು ಒಂದಿಷ್ಟು ಇದು ಬೇಕು ಅವರಿಗೆ ಪಟ್ಟಿಗಳು ಬೇಕು. ಅದಕ್ಕೆ ಕರಕೊಂಡು ಬಂದು ಸೇರಿಸ್ತಾರೆ. ಸೇರಿಸಿಬಿಟ್ಟು ಸಂಗೀತಕ್ಕೂ ಕೊಡಿಸ್ತಾರೆ. ಡಾನ್ಸ್ ಗೂ ಸೇರಿಸ್ತಾರೆ. ಆ ಮಗೂನ ಪಾಪ ಅಲ್ಲಿಂದಿಲ್ಲಿ ಎಳೆದಾಡೋದೆ ಕೆಲ್ಸ. ಒಂದು ದಿವಸ ಡಾನ್ಸ್ ಬರಬೇಕು. ಒಂದಿವಸ ಸಂಗೀತಕ್ಕೆ ಹೋಗಬೇಕು. ಕಂಪ್ಯೂಟರ್‌ಗೆ ಹೋಗಬೇಕು. ಇದರ ಮಧ್ಯೆ ಆಮೇಲೆ ಪ್ರೋಗ್ರಾಂ ಯಾಕ್ ಮಾಡಸ್ಲಿಲ್ಲ. ಪ್ರೋಗ್ರಾಂ ಯಾಕ್ ಮಾಡಸ್ಲಿಲ್ಲ. ಅವಾಗ ನಾನು ಪ್ರೋಗ್ರಾಂ ಮಾಡ್ಸೋಕೆ ಏನು ಸರ್ಕಾರ ನಂದ, ಅಥವಾ ನಾನೇನ್ ಮಿನಿಷ್ಟ್ರಾ? ಅಥವಾ ನಾನೇನು ಟಿ.ವಿ.ಲೀ ಪ್ರೋಗ್ರಾಂ ಮಾಡ್ಸೋಕೆ ಟಿ.ವಿ. ಏನು ನನ್ನ ಮನೇದಾ? ಅಂದೆ ನಾನು. ಈಗ ನಿಮ್ಮ ಮಗಳನ್ನ ಇಂಜನಿಯರ್ ಓದಿಸ್ಬೇಕು, ಎಷ್ಟು ವರ್ಷದಿಂದ ಸ್ಕೂಲಲ್ಲಿ ಕಲಿಸ್ತಾಯಿದಿರಾ ನೀವು. LKG ಮಾಂಟಸರಿಗೆ ಸೇರಿಸ್ತಿರಾ, LKG, UKG, Istd. ದಾಟಿ PUCಗೆ ಬಂದು ಅದಕ್ಕೊಂದು Entrance exam ಆಗಿ, Select ಆಗಿ, ಅವಳು ಇಂಜನೀಯರ್ ಅನ್ನೋದು ಎಷ್ಟು ವರ್ಷ ಸ್ಕೂಲಲ್ಲಿ ವಿದ್ಯಾಭ್ಯಾಸ ಆಗಿರುತ್ತೆ ಹಂಗೆ ಈ ಕಲೆನೂ ಅಂತ ಹೇಳ್ತಿನಿ. ಅದೆಲ್ಲ ಅವರ ತಲೆಗೆ ಹೋಗೊದೆ ಇಲ್ಲ. ಅದೆಲ್ಲ ಬಿಟ್ಟುಬಿಡಮ್ಮ. ಇದೇನು ಮಹಾ ಅವರೇನು ತಿಳಿಕೊಂಡು ಬಿಟ್ಟಿದಾರೆ. ಇದು ಸುಲಭ ಅಂತ ತಿಳಕೊಂಡು ಬಿಟ್ಟಿದಾರೆ. ಹಾಗಾಗಿ ಬಿಟ್ಟಿದೆ ಇದು. ಈವಾಗ....

**ವಿಜಯಾ:** ನಿಮಗೆ ಯಾವಾಗ್ಲಾದ್ರೂ ಅನಿಸಿದೆಯಾ, ನಾವು ಹುಟ್ಟುತಲೇ ಒಂದು ಶ್ರೀಮಂತ ಒಂದು Upper Caste Upper ಇದರೊಳಗಡೆ ಇದ್ದಿದ್ರೆ, ಮೇಲ್ವರ್ಗದಲ್ಲಿ ಇದ್ದಿದ್ರೆ ಇಷ್ಟೊಂದು ನಿಮಗೆ ಸಮಸ್ಯೆಗಳು ಆಗ್ತಿರಲಿಲ್ಲ ಅಂತ. ನಾವು ನೋಡ್ತಿದಿವಲ್ಲ ಇವಾಗ ತುಂಬಾ ಶ್ರೀಮಂತರ ವರ್ಗದವರಿಗೆ ಇಷ್ಟು ಸಮಸ್ಯೆಗಳು ಬಂದಂಗಿಲ್ಲ.

**ಉಷಾ:** ಹಣ, ಹಣ ಬೇಕಾದಷ್ಟಿರುತ್ತದೆ, ಆಮೇಲೆ ದೊಡ್ಡ ದೊಡ್ಡೋರ ಪರಿಚಯ ಇರುತ್ತಲ್ವ ಅವರಿಗೆ. ಹಣ ಇದ್ದಲ್ಲಿ ಏನು ಬೇಕಾದ್ರು ನಡಿಯುತ್ತೆ. ಆದರೆ ಹಣ ಇಟ್ಟುಕೊಂಡು ಕಲೆನಲ್ಲಿ ಮುಂದೆ ಬಂದಿರೋದು ಕಮ್ಮಿ.

*****

ಹೀಗೆಯೇ ಹರಟುತ್ತಾ ಹರಟುತ್ತಾ ಬದುಕಿನ ಎಷ್ಟೆಲ್ಲಾ ವ್ಯಾಪ್ತಿಗಳಲ್ಲಿ ಸಂಚರಿಸಬಹುದಿತ್ತು. ಬದುಕಿನಲ್ಲಿ ಇಷ್ಟೊಂದು ಎತ್ತರದ ಸಾಧನೆಯನ್ನು ಮಾಡಿದ ಈ ಹೆಣ್ಣಿನ ಲೋಕದ ಇತರ ಆಯಾಮಗಳ ದರ್ಶನ ಬಹಳ ಅರ್ಥಪೂರ್ಣವಾಗಿತ್ತು. ಒಳಹೊಕ್ಕಷ್ಟು ಗಾಢವಾಗಿ ಆವರಿಸುವ ಅನುಭವಲೋಕ ಮಹಿಳಾ ಅಭಿವ್ಯಕ್ತಿಯ ಒಂದು ಮುಖವನ್ನಾದರೂ ಗ್ರಹಿಸುವ ಅವಕಾಶ ನೀಡಿತ್ತು.

# ಮನೆಯೊಳಗಿನ ಮಾತು

*ಚಂದ್ರಮತಿ ಸೋಂದಾ*

ಕುಟುಂಬವನ್ನು ಸಮಾಜದ ಒಂದು ಘಟಕವಾಗಿ ಪರಿಗಣಿಸುತ್ತೇವೆ. ಸಮಾಜದ ಪರಿಕಲ್ಪನೆಯೇ ಇಲ್ಲದ ಕಾಲದಲ್ಲಿಯೂ ಕುಟುಂಬ ವ್ಯವಸ್ಥೆ ಇದ್ದಂತೆ ಕಾಣುತ್ತದೆ. 'ಕುಟುಂಬ ಜೀವನವು ಯಾವ ಕಾಲದಲ್ಲಿ ಹುಟ್ಟಿತು ಎಂಬುದನ್ನು ನಿರ್ಧರಿಸಲಾಗಿಲ್ಲ. ಎಷ್ಟು ಹಿಂದಿನ ಕಾಲದ ಚರಿತ್ರೆಯನ್ನು ನಾವು ಪರಿಶೀಲಿಸಿದರೂ ಅಲ್ಲಾಗಲೇ ಕುಟುಂಬ ಜೀವನವು ನೆಲೆಯಾಗಿದ್ದಂತೆ ಸ್ಪಷ್ಟವಾಗುತ್ತದೆ. ನಮಗೆ ತಿಳಿದಿರುವ ಅತ್ಯಂತ ಪ್ರಾಚೀನವಾದ ಬೆಬಿಲೋನಿಯಾ, ಈಜಿಪ್ಟ, ಭಾರತೀಯ ಮತ್ತು ಚೀಣೀಯ ಸಮಾಜಗಳಲ್ಲಿ ಅದು ಅಗಲೇ ತುಂಬ ಬೆಳೆದ ಸ್ಥಿತಿಯಲ್ಲಿತ್ತು. ನಾಗರಿಕ ಜೀವನದ ಆವರಣದಲ್ಲಿ ಬಾರದೆ ಉಳಿದಿರುವ ಕಾಡು ಜನರಲ್ಲಿಯೂ ಅನಾಗರಿಕ ಜನರಲ್ಲೂ ಅದಾಗಲೇ ನಿರ್ದಿಷ್ಟವಾದ ರೂಪ ಪಡೆದಿತ್ತು. ಆದಿಮಾನವನು ಕೂಡ ಸಂಘಜೀವಿ ಎಂದು ಹೇಳಲು ಆಧಾರವಿದೆ'(ಜಿ.ಹನುಮಂತ ರಾವ್ , ಕುಟುಂಬ ಜೀವನ, ಪು.೪-೫). ಕಾಲದಿಂದ ಕಾಲಕ್ಕೆ ಕುಟುಂಬದ ಸ್ವರೂಪದಲ್ಲಿ ಬದಲಾವಣೆಯಾಗುತ್ತ ಬಂದಿರುವಂತೆ ಕಾಣುತ್ತದೆ. ಎರಡು-ಮೂರು ತಲೆಮಾರಿಗೆ ಸೇರಿದ ಜನರು ಒಟ್ಟಾಗಿ ಬದುಕುವುದನ್ನು ಅವಿಭಕ್ತ ಕುಟುಂಬವೆಂತಲೂ ಗಂಡ-ಹೆಂಡತಿ ಮಕ್ಕಳು ಮಾತ್ರ ಒಂದು ಸೂರಿನಡಿ ಇರುವುದನ್ನು ವಿಭಕ್ತ ಕುಟುಂಬವೆಂತಲೂ ಸಮಾಜಶಾಸ್ತ್ರಜ್ಞರು ಕರೆಯುತ್ತ ಬಂದಿದ್ದಾರೆ.

ಭಾರತದಲ್ಲಿ ತೀರ ಇತ್ತೀಚಿನವರೆಗೂ ಅವಿಭಕ್ತ ಕುಟುಂಬ ಪದ್ಧತಿ ಸಾಮಾನ್ಯವಾಗಿತ್ತು. ಈಗೀಗ ಈ ಪದ್ಧತಿ ಶಿಥಿಲವಾಗಿ ಪಳೆಯುಳಿಕೆಗಳಂತೆ ವಿರಳವಾಗಿ ಕೆಲವೆಡೆ ಕಾಣಬಹುದಾಗಿದೆ. ಸ್ವಾತಂತ್ರೋತ್ತರದಲ್ಲಿ ನಮ್ಮ ಆಡಳಿತ ವ್ಯವಸ್ಥೆಯು ಕೈಗಾರಿಕೆಗಳಿಗೆ ನೀಡಿದ ಪ್ರಾಶಸ್ತ್ಯ, ನಗರೀಕರಣ, ಆರ್ಥಿಕ ಸ್ವಾವಲಂಬನೆಯ ಆಕಾಂಕ್ಷೆ, ವ್ಯಕ್ತಿ ಸ್ವಾತಂತ್ರ್ಯದ ಹಂಬಲ-ಇವೆಲ್ಲ ಅವಿಭಕ್ತ ಕುಟುಂಬ ವ್ಯವಸ್ಥೆಯ ಶೈಥಿಲ್ಯಕ್ಕೆ ಹಾಗೂ ವಿಭಕ್ತ ಕುಟುಂಬದ ಸಾರ್ವತ್ರಿಕತೆಗೆ ಕಾರಣವಾದ ಅಂಶಗಳು.

ಯಾವುದೇ ವ್ಯವಸ್ಥೆಯಲ್ಲಿಯೂ ಗುಣಾತ್ಮಕ ಅಂಶಗಳಿರುವಂತೆ ಧನಾತ್ಮಕ ಅಂಶಗಳೂ ಇರುತ್ತವೆ. ಅವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿ ವೃದ್ಧರಿಗೆ, ನಿರಾಶ್ರಿತರಿಗೆ, ರೋಗಿಗಳಿಗೆ ಸಾಕಷ್ಟು ಶುಶ್ರೂಷೆ, ಒತ್ತಾಸೆ, ಭದ್ರತೆ ದೊರೆಯುತ್ತಿತ್ತು. ಅದೇ ಹೊತ್ತಿನಲ್ಲಿ ವ್ಯಕ್ತಿಗತ ಅನಿಸಿಕೆ, ಆಕಾಂಕ್ಷೆಗಳಿಗೆ ಸ್ಥಾನವಿರುತ್ತಿರಲಿಲ್ಲ. ಮನೆಯ ಹಿರಿಯರ/ಯಜಮಾನನ ಮಾತೇ

ಕೊನೆಯದಾದ್ದರಿಂದ ಆತನ ಸಾರ್ವಭೌಮತ್ವವನ್ನು ಪ್ರಶ್ನಿಸುವಂತಿರಲಿಲ್ಲ. ಇಡಿಯಾಗಿ ಜವಾಬ್ದಾರಿ ಆತನದಾಗಿರುತ್ತಿತ್ತು. ಕೆಲವೊಮ್ಮೆ ಅಪರೂಪವಾಗಿ ಯಜಮಾನಿಯದೂ ಆಗಿರುತ್ತಿತ್ತು. ಈ ಅಂಶಗಳನ್ನು ಕುರಿತು ಲೇಖಕಿಯರು ತಮ್ಮ ಕೃತಿಗಳಲ್ಲಿ ಹೇಗೆ ಅಭಿವ್ಯಕ್ತಿಸಿದ್ದಾರೆ ಎನ್ನುವುದನ್ನು ಈ ಅಧ್ಯಾಯದಲ್ಲಿ ಪರಿಶೀಲಿಸಲಾಗಿದೆ.

ಕೃಷಿ ಪ್ರಧಾನವಾಗಿರುವ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಕೆಲಸಕಾರ್ಯಗಳಿಗೆ ಮಾನವ ಸಂಪನ್ಮೂಲ ಅಧಿಕವಾಗಿ ಅವಶ್ಯಕವಾಗಿರುವುದರಿಂದ ಅವಿಭಕ್ತ ಕುಟುಂಬವು ಆ ಪ್ರದೇಶದಲ್ಲಿ ಕಾಣಬರುವ ಪ್ರಮಾಣದಲ್ಲಿ ನಗರ ಪ್ರದೇಶದಲ್ಲಿ ಇರುವಂತೆ ಕಂಡುಬರುವುದಿಲ್ಲ. ಬದಲಾದ ಸಾಮಾಜಿಕ ಪರಿಸ್ಥಿತಿಯಿಂದಾಗಿ ಸ್ವಾತಂತ್ರ್ಯಾನಂತರದಲ್ಲಿ ಅನೇಕ ಮಹಿಳೆಯರು ಬರವಣಿಗೆಗೆ ತೊಡಗಿದ್ದರೂ ಗ್ರಾಮೀಣ ಮಹಿಳೆಯರು ತಮ್ಮ ಅನಿಸಿಕೆಗಳಿಗೆ ಅಭಿವ್ಯಕ್ತಿ ನೀಡಿದ್ದು ಕಡಿಮೆ. ಆ ಕಾರಣದಿಂದಾಗಿ ಅವಿಭಕ್ತ ಕುಟುಂಬದ ಇತಿ-ಮಿತಿಯನ್ನು ಲೇಖಕಿಯರು ಗಂಭೀರವಾಗಿ ಪರಿಗಣಿಸಿದ್ದನ್ನು ಅಷ್ಟಾಗಿ ಕಥಾನಕಗಳಲ್ಲಿ ಕಾಣಲಾಗುವುದಿಲ್ಲ. ಕೆಲವೇ ಕಥೆಗಳು ದೊರಕುತ್ತವಾದರೂ ಅವು ತೀರ ಶಿಥಿಲ ರೂಪದಲ್ಲಿರುವ ಅವಿಭಕ್ತ ಕುಟುಂಬದ ಹಿನ್ನೆಲೆಯುಳ್ಳವಾಗಿವೆ.

ದಿನವಿಡೀ ಮನೆಯಲ್ಲಿ, ಹೊಲದಲ್ಲಿ ದುಡಿಯುತ್ತಿದ್ದರೂ 'ಉಂಡ್ಯಾ ಬಿಟ್ಯಾ' ಎನ್ನುವುದನ್ನು ಕೇಳುವವರಿಲ್ಲದೆ ತೀರ ನೊಂದ ಮಲ್ಲವ್ವನ ಬದುಕನ್ನು ಶಾಂತದೇವಿ ಕಣವಿಯವರ 'ಜಾತ್ರೆ ಮುಗಿದಿತ್ತು'(ಅದೇ ಹೆಸರಿನ ಸಂಕಲನ) ಕತೆ ಬಿಚ್ಚಿಡುತ್ತದೆ. ಶಾಲೆ ಕಲಿತವಳೆಂದು ಕಿರಿಯ ಸೊಸೆಯನ್ನು 'ತಲೆಯಲ್ಲಿಟ್ಟು' ಮೆರೆಯುವ ಅತ್ತೆಗೆ ಮಲ್ಲವ್ವನ ಬಗ್ಗೆ ತಾತ್ಸಾರ. ಅವಳ ತವರನ್ನು ಸದಾ ಹಂಗಿಸುವಳು. ಅವಳಿಗೆ ಬೇಕಾದ ಚಿಕ್ಕ ಪುಟ್ಟ ವಸ್ತುಗಳನ್ನು ಕೊಳ್ಳಲಿಕ್ಕೂ ಮಲ್ಲವ್ವನಿಗೆ ಕಾಸುಸಿಗದೆ ಹೋದಾಗ ಅನ್ಯಮಾರ್ಗ ಹಿಡಿಯುವುದು ಅನಿವಾರ್ಯವಾಗುತ್ತದೆ. '....ನನ್ನ ಕೈಯಾಗ ನಾಕ ದುಡ್ಡು ರೊಕ್ಕ ಇದ್ದರ, ನನ್ನ ಗಂಡಾ ಹೇಣ್ತಿ ಅನ್ನೂ ಮಾಯಾ ಮಾಡಿದ್ದರ, ಹಿರೇ ಸೊಸಿ ಅಂತ ಹಿರೇತನ ಕೊಟ್ಟಿದ್ದರ ಏನೂ ಇಲ್ಲಾಂದರೂ ಕಡೀಕ ಕತ್ತೀ ದುಡಿದಾಂಗ ಇಷ್ಟು ದುಡೀತಿನಲ್ಲ ಇದಕ್ಕಾದರ ಕಿಮ್ಮತ್ತ ಕೊಟ್ಟಿದ್ದರ ನನ್ನ ಬಾಳೇ ಇಷ್ಟು ಬವಣಿ ಅಗತದ್ದಿಲ್ಲಾ. ಈಗ ಗುಣಾ ಯಾರೂ ನೋಡೂದಿಲ್ಲಾ ಎಲ್ಲರಿಗೂ ಹಣಾನ ಬೇಕು'(ಪು.೫) ಎಂದು ಪರಿತಾಪ ಪಡುವ ಮಲ್ಲವ್ವ ತಮ್ಮ ಹೊಲದಲ್ಲಿ ಬೆಳೆದ ವಸ್ತುಗಳನ್ನೇ ಮಾರಿ ಕಾಸು ಕೂಡಿಟ್ಟು, ಮನೆಯಲ್ಲಿ ತನ್ನ ಸ್ಥಾನ ಹೆಚ್ಚಿಸಿಕೊಳ್ಳಬೇಕೆಂದು ಹೊರಟು ಗಂಡನ ಕತ್ತಿಗೆ ಬಲಿಯಾಗುತ್ತಾಳೆ. ಗಂಡನ ನಿರ್ಲಕ್ಷ್ಯ, ಅತ್ತೆಯ ಯಜಮಾನಿಕೆಯ ಕತ್ತರಿಗೆ ಸಿಕ್ಕ ಮಲ್ಲವ್ವನ ಬಾಳು ಸಾವಿನಲ್ಲಿ ಪರ್ಯವಸಾನವಾಗುತ್ತದೆ. ಓರಗಿತ್ತಿಯೊಂದಿಗೆ ಅವಳನ್ನು ಹೋಲಿಸಿ ಸದಾ ಅತ್ತೆ ಮೂದಲಿಸದಿರುತ್ತಿದ್ದರೆ ಆಕೆ ಕಾಸನ್ನು ಗಳಿಸಲು ಒಳಮಾರ್ಗ ಹಿಡಿಯುವ ಪ್ರಮೇಯವೇ ಇರುತ್ತಿರಲಿಲ್ಲ. ಹಾಗೆ ಮಾಡುವಾಗ ಮಲ್ಲವ್ವನಿಗೆ ತಾನು ಈ ರೀತಿ ಅಪ್ರಾಣಿಕಗಳಾಗ ಬೇಕಾಯಿತಲ್ಲ ಎನ್ನುವ ನೋವಿರುತ್ತದೆ. 'ಖರೇ ರೀತಿಯಿಂದ ಬಾಳೇ ಮಾಡಿದರೆ

ಕಿಮ್ಮತ್ತಿಲ್ಲ ಚಿಗವ್ವಾ ಮನಿಯವರ ಕೂತು ನನಗೆ ಕಳವನ್ನೂ ಕಲಿಸ್ತಾರ, ಸುಳ್ಳಿನೂ ಮಾಡ್ತಾರ'(ಅದೇ) ಎಂದು ಮೊಣಕಾಲ ಸಂದಿಯಲ್ಲಿ ತಲೆಯಿಟ್ಟು ಅಳುವ ಮಾತು ಅವಳ ನೋವಿನ ಆಳವನ್ನು ಕಾಣಿಸುತ್ತದೆ. ಜೊತೆಗೆ, ದಿನವಿಡೀ ದುಡಿಯುತ್ತಿದ್ದ ಆಕೆಯ ಕೈಯಲ್ಲಿಯೂ ಹಣ ಓಡಾಡುತ್ತಿದ್ದರೆ ಅವಳು ಹೀಗೆ ಗಂಡನ ಸಂಶಯಕ್ಕೆ ಬಲಿಯಾಗುವ ಪರಿಸ್ಥಿತಿ ಉಂಟಾಗುತ್ತಿರಲಿಲ್ಲ. ವ್ಯಕ್ತಿಗತವಾದ ಚಿಕ್ಕ ಪುಟ್ಟ ಆಸೆ, ಬಯಕೆಗಳಿಗೂ ತೃಪ್ತಿ ಸಿಗದಂಥ ಉಸಿರುಗಟ್ಟಿಸುವ ಇಂಥ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ಜೀವಗಳು ಹೇಗೆ ನರಳಿ ಸಾಯುತ್ತವೆ ಎನ್ನುವುದನ್ನು ಈ ಕತೆ ಅನಾವರಣಗೊಳಿಸುತ್ತದೆ.

ವಿಭಿನ್ನ ಪರಿಸರದಲ್ಲಿ ಬೆಳೆದ ಜೀವಿಗಳು ಒಂದೇ ಸೂರಿನಡಿ ಬದುಕುವಾಗ ಇಬ್ಬರ ನಡುವೆ ವೈಮನಸ್ಯ ಉಂಟಾಗುವುದು ಸಹಜ. ಹೊಂದಾಣಿಕೆಯ ಮೂಲಕ ಸಂಬಂಧವನ್ನು ಉಳಿಸಿಕೊಳ್ಳಬೇಕಾಗುತ್ತದೆ. ಇಬ್ಬರೂ ತಮ್ಮ ತಮ್ಮ ಅಭಿಮಾನವನ್ನು ಬದಿಗೊತ್ತಿದಾಗ ಸೌಹಾರ್ದತೆ ಸಾಧ್ಯ ಎನ್ನುವುದನ್ನು ಎಚ್ .ಎಸ್ .ಕಾತ್ಯಾಯನಿ ಅವರ 'ಕಾಳಿ' ಕತೆ ಧ್ವನಿಸುತ್ತದೆ. ತಮ್ಮ ಅಸ್ತಿತ್ವಕ್ಕಾಗಿ ತವಕಪಡುವ ಅತ್ತೆ-ಸೊಸೆಯರ ನಡುವೆ ವಿವಾದ ಉಂಟಾಗುತ್ತದೆ. ಕಾಳಿಗೆ ಹಿರಿಯಳಾದ ತನ್ನ ಮಾತೇ ನಡೆಯಬೇಕೆಂಬ ಹಠವಿದ್ದಂತೆ ಕೆಂಪಿಗೂ ತಾನು ಮಾಡಿದ್ದು ಸರಿಯೆಂಬ ಅಭಿಮಾನ. ಬಿರುಕು ದೊಡ್ಡದಾಗಿ ಕೆಂಪಿ ತವರಿಗೆ ಹೋದರೆ ಅದನ್ನು ಹೆಚ್ಚಿಸಲು ನೆರೆಹೊರೆಯವರು ಗಾಳಿ ಹಾಕುತ್ತಾರೆ. ಕೆಂಪಿಯ ತಾಯಿಯ ಸಂಧಾನದಿಂದ ಅತ್ತೆ ಸೊಸೆಯರು ಸ್ವಾಭಿಮಾನ ಬಿಟ್ಟು ತಮ್ಮ ತಪ್ಪನ್ನು ಅರಿತುಕೊಳ್ಳುತ್ತಾರೆ. ವಿರಸ ಕೊನೆಯಾಗುತ್ತದೆ. ಒಂದು ಕುಟುಂಬದ ಸದಸ್ಯರಲ್ಲಿ ಪರಸ್ಪರ ಔದಾರ್ಯವಿದ್ದಾಗ ಮಾತ್ರ ಕೌಟುಂಬಿಕ ನೆಮ್ಮದಿ ಸಾಧ್ಯ ಎನ್ನುವ ತತ್ವವನ್ನು ಕತೆ ಪ್ರತಿಪಾದಿಸುತ್ತದೆ. ಹೆಂಗಸು ಹೆಂಗಸಿನ ನಡುವಿನ ಭಿನ್ನಾಭಿಪ್ರಾಯವನ್ನು ಹೆಚ್ಚಿಸುವವರು ಹಾಗೂ ನಿವಾರಿಸುವವರು ಹೆಂಗಸರೇ ಎನ್ನುವುದು ಕತೆಯ ನಿಲುವಾಗಿದೆ. ಅದಕ್ಕೆ ಕಾರಣವಾಗಿರುವ ಸಾಮಾಜಿಕ ಪರಿಸ್ಥಿತಿಯನ್ನು ಕತೆ ವಿಶ್ಲೇಷಿಸುವುದಿಲ್ಲ; ಪ್ರಶ್ನಿಸುವುದೂ ಇಲ್ಲ.

ಅಣ್ಣ ತಮ್ಮಂದಿರು ಒಂದೇ ಸೂರಿನಡಿ ಬದುಕುತ್ತಿರುವ ಕುಟುಂಬದಲ್ಲಿ ಯಜಮಾನನಿಂದ ಮಹಿಳೆಯು ಲೈಂಗಿಕ ಶೋಷಣೆಗೆ ಒಳಗಾಗುವ ಅವಕಾಶ ಹೆಚ್ಚಾಗಿರುತ್ತದೆ. ಮಹಿಳೆಯನ್ನು ಇಕ್ಕಟ್ಟಿಗೆ ಸಿಲುಕಿಸಿ ಆಕೆ ಬಾಯಿ ಬಿಡದಂತೆ ಮಾಡುವ ಹುನ್ನಾರವನ್ನು ಗಂಡು ಸಲೀಸಾಗಿ ಮಾಡಬಲ್ಲನೆನ್ನುವುದನ್ನು 'ಅಣ್ಣ ತಮ್ಮ'(ಜಾತ್ರೆ ಮುಗಿದಿತ್ತು) ಕತೆಯಲ್ಲಿ ಶಾಂತಾದೇವಿ ಕಣವಿಯವರು ಕಂಡರಿಸುತ್ತಾರೆ. ತಮ್ಮನ ಮುಗ್ಧತೆಯನ್ನು ಅರಿತಿದ್ದ ಶಿವಪ್ಪ ಅವನ ಹೆಂಡತಿ ಕಾಶವ್ವಳನ್ನು ಸರ ಕದ್ದಿರುವ ಅಪಾದನೆಗೆ ಸಿಲುಕಿಸಿ ಲೈಂಗಿಕವಾಗಿ ಶೋಷಿಸತೊಡಗುತ್ತಾನೆ. ಅವನ ದರ್ಪಕ್ಕೆ ಹೆದರಿದ ಕಾಶವ್ವ ಅಸಹಾಯಕಳಾಗಿ ಅವನ ಕಾಮದಾಹಕ್ಕೆ ಬಲಿಯಾಗಬೇಕಾಗುತ್ತದೆ. ಅತ್ತೆಯ ಜೋರು, ಗಂಡನ ಮುಗ್ಧತೆ, ಓರಗಿತ್ತಿಯ ನಿರ್ಲಕ್ಷ್ಯ, ಭಾವನ ದೌರ್ಜನ್ಯ ಈ ಅಡಕೊತ್ತಿನಲ್ಲಿ ಸಿಕ್ಕ ಕಾಶವ್ವನ ಬದುಕು ಮೂರಾಬಟ್ಟೆಯಾಗುತ್ತದೆ. ಅಣ್ಣ ಮತ್ತು ಹೆಂಡತಿಯ ಸಂಬಂಧವನ್ನು ಕಣ್ಣಾರೆ ಕಂಡ

ತಮ್ಮ ಹೆಣವಾಗುತ್ತಾನೆ. ತಂಗಿಯ ಸ್ಥಾನದಲ್ಲಿ ಕಾಣಬೇಕಾದ ನಾದಿನಿಯನ್ನು ತನ್ನ ದೈಹಿಕ ತೃಷೆ ತಣಿಸಲು ಬಳಸಿಕೊಂಡ ಭಾವನ ನಿರ್ಲಜ್ಜ ನಡತೆ ಅವಳ ವೈವಾಹಿಕ ಬದುಕನ್ನು ಆಪೋಶನ ತೆಗೆದುಕೊಳ್ಳುತ್ತದೆ. ಕೌಟುಂಬಿಕ ಪರಿಸರದಲ್ಲಿ ಮನುಷ್ಯ ಸಂಬಂಧಗಳಿಗೆ ನೈತಿಕ ನೆಲೆಗಟ್ಟು ಆಧಾರ. ಅದು ಶಿಥಿಲವಾದಾಗ ಒಳಗಿನ ಜೀವಗಳು ಸತ್ತ ಬದುಕನ್ನು ಜೀವಿಸಬೇಕಾಗುತ್ತದೆನ್ನುವುದು ಕತೆಯ ದನಿಯಾಗಿದೆ.

ಅನುಪಮಾ ನಿರಂಜನ ಅವರ 'ಒಂದು ಗಿಣಿಯ ಕಥೆ' (ಇದೇ ಹೆಸರಿನ ಸಂಕಲನ) ಕೂಡ ಇದೇ ಬಗೆಯದು. ಇದರಲ್ಲಿ ಕಥಾನಾಯಕಿ ಗೀತಾಳ ಮೇಲೆ ಅತ್ಯಾಚಾರ ಮಾಡುವವನು ಅವಳ ಮಾವ. ಮಾವನ ಅತಿಯಾದ ಶಿಸ್ತಿನಿಂದಾಗಿ ಗೀತಾಳಿಗೆ ಗಂಡನ ಮನೆ ಪಂಜರ ಎನಿಸುತ್ತದೆ. ಅವಳ ಹೊಟ್ಟೆನೋವಿಗೆ ಔಷಧ ಕೊಡುವುದಾಗಿ ಹೇಳಿ ಮತ್ತುಬರುವ ಔಷಧಿ ಕೊಡುವ ಮಾವ ಪ್ರಭುದೇವನು ಅವಳು ನಿದ್ದೆಯಲ್ಲಿರುವಾಗ ತನ್ನ ಕಾಮತೃಷೆ ತೀರಿಸಿಕೊಳ್ಳುತ್ತಾನೆ. ಆ ಮನೆಯಿಂದ ಹೊರಹೋಗಲು ಧೈರ್ಯವಿಲ್ಲದ ಗಂಡನ ಅಳುಬುರುಕುತನದಿಂದಾಗಿ ಅವಳಿಗೆ ಇಂಥ ಪರಿಸ್ಥಿತಿಯೊದಗುತ್ತದೆ. ಅದರ ಅರಿವಿದ್ದ ಗೀತಾ ನಿದ್ದೆಗುಳಿಗೆ ಸೇವಿಸಿ ಸಾಯುತ್ತಾಳೆ. ಮಾವನ ಶ್ರೀಮಂತಿಕೆಯ ಸೊಕ್ಕಿಗೆ ತುಸುವಾದರೂ ಧಕ್ಕೆಯೊದಗಲೆಂದು ತನ್ನ ಸಾವಿನ ಮೂಲಕ ಪ್ರತಿಭಟನೆ ತೋರುತ್ತಾಳೆ. ಗಂಡನಿಗೆ ನಿಜಸ್ಥಿತಿ ತಿಳಿಯಲೆಂದು ಆತನ ಶರಟಿನ ಜೇಬಿನಲ್ಲಿ ಕಾಗದ ಬರೆದಿಡುವುದರಿಂದ ಮಾವನ ಬಣ್ಣ ಬಯಲಾಗುತ್ತದೆ. ಬದುಕನ್ನು ಅಪಾರವಾಗಿ ಪ್ರೀತಿಸುತ್ತಿದ್ದ, ಸ್ವಾತಂತ್ರ್ಯವನ್ನು ಅಪೇಕ್ಷಿಸುತ್ತಿದ್ದ ಜೀವವೊಂದನ್ನು ಪ್ರಭುದೇವನ ಸ್ವಾರ್ಥ-ಅಹಂಕಾರಗಳು ಬಲಿತೆಗೆದುಕೊಳ್ಳುತ್ತವೆ. ಮನೆಯ ಹಿರಿಯನಾಗಿ ಮಗಳಂತೆ ನಡೆಸಿಕೊಳ್ಳಬೇಕಾದ ಮಾವನೇ ಸೊಸೆಯ ಮೇಲೆ ಅತ್ಯಾಚಾರವೆಸಗುವ ನೀಚತನ ಊಹೆಗೂ ನಿಲುಕದ್ದು. ಕೌಟುಂಬಿಕ ಬದುಕು ಮಹಿಳೆಯನ್ನು ಯಾವ ರೀತಿಯಲ್ಲಿ ಹಿಂಸಿಸುತ್ತಿದೆ ಎನ್ನುವುದಕ್ಕೆ ಈ ಕತೆ ಒಂದು ಮಾದರಿಯನ್ನು ಒದಗಿಸುತ್ತದೆ. ಇಂಥ ಪರಿಸ್ಥಿತಿಯಲ್ಲಿ ಮಹಿಳೆ ರಾಜಿ ಮಾಡಿಕೊಂಡು ತನ್ನ ಮನೋಭಿಲಾಷೆಯನ್ನು ಹತ್ತಿಕ್ಕಿ ಬದುಕಬೇಕಾಗುತ್ತದೆ. ಇಲ್ಲವೆ ಅಲ್ಲಿಂದ ಸಿಡಿದು ಹೊರಬಂದು ಬದುಕುವ ತಾಕತ್ತನ್ನು ಗಳಿಸಬೇಕಾಗುತ್ತದೆ. ಮೂರನೆಯದು ಗೀತಾಳಂತೆ ಆತ್ಮಹತ್ಯೆಯ ಮಾರ್ಗ.

ಅವಿಭಕ್ತ ಕುಟುಂಬದಲ್ಲಿ ಹತ್ತಾರು ಜನರಿಗೆ ಹೊತ್ತು-ಹೊತ್ತಿಗೆ ಅಡಿಗೆ ಮಾಡಿ ಬಡಿಸುವ ಕೆಲಸ ಪ್ರಯಾಸಕರವಾದದ್ದೇ. ಕಾಯಿಲೆ ವರು, ಬಸಿರಿ-ಬಾಣಂತಿಯರು, ಬಂದು-ಹೋಗುವ ನೆಂಟರು ಮುಂತಾದ ಎಲ್ಲ ತಾಪತ್ರಯಗಳನ್ನೂ ಎದುರಿಸಬೇಕಾದ್ದು ಅನಿವಾರ್ಯವೇ. ಕೆಲಮಟ್ಟಿನ ಶಿಕ್ಷಣ ಪಡೆದ ಹುಡುಗಿಯರೂ ವ್ಯಕ್ತಿ ಸ್ವಾತಂತ್ರ್ಯಕ್ಕೆ ಹೆಚ್ಚು ಆದ್ಯತೆ ನೀಡುವುದರಿಂದ ಅವಿಭಕ್ತ ಕುಟುಂಬದ ಕಷ್ಟ-ಕಾರ್ಪಣ್ಯಗಳಿಗೆ ತಮ್ಮನ್ನು ಒಡ್ಡಿಕೊಳ್ಳಲು ಒಪ್ಪುವುದಿಲ್ಲ. ಇದನ್ನು ಸ್ವೀಕರಿಸುವಲ್ಲಿನ ಭಿನ್ನತೆಯನ್ನು ವೈದೇಹಿಯವರ 'ವರ್ತುಲ' (ಮರಗಿಡಬಳ್ಳಿ) ಕತೆ ತೆರೆದಿಡುತ್ತದೆ. ಸಾಕಷ್ಟು ಕೃಷಿ ಉತ್ಪನ್ನವಿರುವ

ಕುಟುಂಬದ ಮಗ ಉದ್ಯೋಗ ಹಿಡಿದು ದೂರದ ಊರಿನಲ್ಲಿರುವುದನ್ನು ಆಕ್ಷೇಪಿಸುತ್ತಿದ್ದ ತಾಯಿಗೆ ಸೊಸೆಯೇ ಅದಕ್ಕೆ ಕಾರಣವಿರಬೇಕೆಂಬ ಗುಮಾನಿ, 'ನಾಲ್ಕು ಮಂದಿಯೊಂದಿಗಿದ್ದು ಜೈಸಬೇಕು. ಅದು ಬಾಳು' (ಪು.೩೦) ಎಂಬ ಗೊಣಗು ಸೊಸೆಯೆದುರು. ಮಗಳಿಗೆ ಮದುವೆ ನಿಶ್ಚಯವಾದಾಗ ಆಕೆ ಆಡುವ ಮಾತುಗಳೇ ಬೇರೆ. 'ಈಚೆ ಮದುವೆ ಆದೊಡನೆ ಆಚೆ ಬಿಡಾರ ಮಾಡುತ್ತಾನೆ. ಅವರ ಪಾಡಿಗೆ ಅವರು-ಕಷ್ಟವೊ ಸುಖವೊ-ಇರಬಹುದಲ್ಲ...ಅಷ್ಟು ಜನರ ಮಧ್ಯೆ, ಆ ಮಡಿ-ಮೈಲಿಗೆ ಗಲಾಟೆಯಲ್ಲಿ ನಮ್ಮ ರೇಖ ಇರುವುದು ಹೌದೆ? ನಾಲ್ಕು ದಿನಕ್ಕೆ ಓಡಿ ಬಂದಾಳು' (ಪು.೩೩) ಭಿನ್ನ ಅಳತೆಗೋಲಿನಿಂದ ಪರಿಸ್ಥಿತಿಯನ್ನು ಅರ್ಥೈಸುವ ಅತ್ತೆಯ ವ್ಯಕ್ತಿತ್ವ ಸ್ವಕೇಂದ್ರಿತ ನೆಲೆಯದು. ಮಗಳಿಗೆ ಅನುಕೂಲವಾಗಿರುವ ಅಂಶಗಳು ಸೊಸೆಯ ವಿಷಯಕ್ಕೆ ಬಂದಾಗ ಸ್ವಾರ್ಥಮೂಲದ್ದಾಗಿ ಕಾಣುತ್ತದೆ. ವ್ಯಕ್ತಿಯ ದ್ವಿಸ್ತರ ನ್ಯಾಯವನ್ನು ಕತೆ ಅನಾವರಣಗೊಳಿಸುತ್ತದೆ. ಆಕೆಯ ಈ ದ್ವಿಮುಖ ನೀತಿಯನ್ನು ಎತ್ತಿ ತೋರಿಸುವವನು ಪುರುಷನೇ ಆಗಿರುವುದು ಕತೆಯ ಸಂಕೀರ್ಣತೆಯನ್ನು ಹೆಚ್ಚಿಸಿದೆ. ಇಲ್ಲಿ ತಾಯಿಯನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದು ಮಗನಿಗೆ. ಈ ಕತೆ ಅವಿಭಕ್ತ ಕುಟುಂಬದ ಶೈಥಿಲ್ಯಕ್ಕೆ ಕಾರಣವಾದ ಒಳರಾಜಕೀಯದ ಒಂದು ಮುಖವನ್ನು ಸಮರ್ಥವಾಗಿ ಹಿಡಿದಿಡುತ್ತದೆ.

ವಿವಾಹ ಸಂಸ್ಥೆಯು ವಿವಾಹೋತ್ತರದಲ್ಲಿ ಮಹಿಳೆಯನ್ನು ದುಡಿಯುವ ಒಬ್ಬ ವ್ಯಕ್ತಿಯಾಗಿ ಪರಿಗಣಿಸುತ್ತದೆ.ಅದರಲ್ಲಿಯೂ ಕೆಳವರ್ಗದ ಕುಟುಂಬದಲ್ಲಿ ಆಕೆಯನ್ನು ಆದಾಯದ ಮೂಲವಾಗಿ ಕಾಣುವುದೇ ಹೆಚ್ಚು. ಸಾರಾ ಅಬೂಬಕ್ಕರ್ ಅವರ ಕಾದಂಬರಿ 'ಸಹನಾ'ದಲ್ಲಿ ನಸೀಮಾಳನ್ನು ಆಕೆಯ ತಾಯಿ ಹದಿಮೂರು ವರ್ಷಕ್ಕೇ ಮದುವೆಮಾಡಿ ಕಳಿಸುತ್ತಾಳೆ. ಅವಿಭಕ್ತ ಕುಟುಂಬದಲ್ಲಿ ಬದುಕಬೇಕಾಗಿ ಬಂದುದರಿಂದ ಅವಳ ಬದುಕು ಕಮರಿಹೋಗುತ್ತದೆ. ಹೆಂಡತಿಯ ಮೇಲೆ ಒಲವಿದ್ದರೂ ಹಿರಿಯರೆದುರು ಅದನ್ನು ತೋರ್ಪಡಿಸಲಾಗದ ಅವಳ ಗಂಡನ ಅಸಹಾಯಕತೆಯನ್ನು ಕೃತಿ ಕಾಣಿಸುತ್ತದೆ. ಅದೇ ವೃತ್ತದಲ್ಲಿ ಸುತ್ತುತ್ತಿರುವ ಇಲ್ಲಿನ ಮಹಿಳೆಯರಿಗೆ ತಮ್ಮ ಸ್ಥಿತಿಯ ಅರಿವೇ ಆಗದಂಥ ವ್ಯವಸ್ಥೆಯ ಕ್ರೌರ್ಯ ನಮ್ಮನ್ನು ಬೆಚ್ಚುವಂತೆ ಮಾಡುತ್ತದೆ. ವರ್ಷಕ್ಕೊಮ್ಮೆ ಹೆರುತ್ತ ದೈಹಿಕ ಅಸಾಮರ್ಥ್ಯದಿಂದಾಗಿ ಕಾಯಿಲೆಗೆ ತುತ್ತಾಗುವ ಸೊಸೆಯ ಬಗೆಗೆ ಅತ್ತೆಗೆ ಅನುಕಂಪವಿರುವುದಿಲ್ಲ. ಮಗನಿಗೆ ಹೆಣ್ಣಿನ ಸಂಪರ್ಕವಿಲ್ಲವೆಂದು ಇನ್ನೊಂದು ಮದುವೆ ಮಾಡಿಸುವ ತಾಯಿ, ಕುಟುಂಬದಲ್ಲಿ ಹೆಣ್ಣಿಗಿರುವ ನಿಕೃಷ್ಟ ಸ್ಥಾನವನ್ನು ಅರ್ಥಮಾಡಿಕೊಳ್ಳಲಾರದೆ ಶೋಷಣೆಯ ವರ್ತುಲದ ಒಂದು ಬಿಂದುವಾಗುತ್ತಾಳೆ. ಯಾವ ಕುಟುಂಬವನ್ನುಹೆಂಗಸಿನ ಭದ್ರನೆಲೆ ಎಂದು ಸಮಾಜವು ಭಾವಿಸುತ್ತ ಬಂದಿದೆಯೊ ಅಲ್ಲಿ ಆಕೆಯ ಸ್ಥಿತಿ ಹೇಗಿದೆ ಎನ್ನುವುದನ್ನು ನಸೀಮಾಳ ಈ ಕೆಳಗಿನ ಆಲೋಚನೆ ತೆರೆದಿಡುತ್ತದೆ: 'ಮುಸ್ಲಿಂ ಹೆಣ್ಣಾಗಿ ಹುಟ್ಟಿದ ಬಳಿಕ ಆಕೆಗಿರುವುದು ಒಂದೇ ಗುರಿ ಮದುವೆ! ಯಾರಾದ ರೊಬ್ಬನ ಕೊರಳಿಗೆ ಆಕೆಯನ್ನ ಕಟ್ಟಬೇಕು! ಬಳಿಕ ಈ

ಮದುವೆಯನ್ನು ಕಾಪಾಡಿಕೊಂಡು ಬರಲು ಆತನು ತಲಾಕ್ ಹೇಳದಂತೆ ಮಾಡಲು ಆಕೆ ಆತ ಮತ್ತು ಆತನ ಪರಿವಾರದವರ ನಡುವೆ ಸರ್ಕಸ್ ಮಾಡಬೇಕು'(ಪು.೧೩೪) (ಮುಸ್ಲಿಮೇತರ ಮಹಿಳೆಯರಸ್ಥಿತಿ ಇದಕ್ಕಿಂತ ತೀರ ಭಿನ್ನವಾಗೇನೂ ಇಲ್ಲ).

ಹೆಂಗಸಿಗೆ ಮದುವೆ ಕಡ್ಡಾಯವೆಂದೇ ಭಾವಿಸುವ ಸಂದರ್ಭದಲ್ಲಿಯೂ ಅವಳಿಂದ ಲಾಭವಿದೆ ಎಂದಾದಲ್ಲಿ ಆಕೆ ಅವಿವಾಹಿತಳಾಗಿ ಇರಲೆಂದು ಹಾರೈಸುವ ಬಂಧುಗಳಿಗೆ ಕೊರತೆಯಿಲ್ಲ. ಒಮ್ಮೆ ಅವಳು ಮದುವೆ ಆಗುವುದಾಗಿ ನಿರ್ಧರಿಸಿದರೆ ಅವರಿಗೆ ಆಘಾತ. ನೇಮಿಚಂದ್ರ ಅವರ 'ತೆರೆಗಳು ಸರಿದವು' (ನಮ್ಮ ಕನಸುಗಳಲ್ಲಿ ನೀವಿದ್ದಿರಿ) ಕತೆಯ ನಾಯಕಿ ಅಚಲಳ ಜೀವನದಲ್ಲಿ ಇದೇ ರೀತಿ ಆಗುತ್ತದೆ. ಹುಡುಗಿಯರು ಮದುವೆಯಾಗಿ ಸಂಸಾರ ನಡೆಸುವ ವಯಸ್ಸಿನಲ್ಲಿ ಓದುತ್ತ ಪಿಎಚ್.ಡಿ ಡಿಗ್ರಿ ಮುಗಿಸಿದ ಅಚಲಳಿಗೆ ಗಂಡು ಸಿಗುವುದು ಕಷ್ಟವಾಗುತ್ತದೆ. ಅವಳು ಕೈತುಂಬ ಸಂಬಳ ತರುತ್ತಿದ್ದುದರಿಂದ ತಮಗೆ ಭಾರವೆಂದು ಅವಳು ಅವಿವಾಹಿತಳಾಗಿ ತಮ್ಮೊಂದಿಗೆ ಇರುವುದು ಮುಜುಗರವೆಂದು ಅಣ್ಣ ಅತ್ತಿಗೆಯರಿಗೆ ಎನಿಸುವುದಿಲ್ಲ. ಆಕೆಯ ವಯಸ್ಸು ನಲವತ್ತಕ್ಕೆ ಸಮೀಪಿಸಿದಾಗ ಅವಳನ್ನು ಅರ್ಥಮಾಡಿಕೊಂಡ ವ್ಯಕ್ತಿಯೊಬ್ಬ ದೊರೆತು, ಆತನೇ ಬೇಡಿಕೆಯನ್ನು ಮುಂದಿಟ್ಟಿದ್ದರಿಂದ ಅವಳಿಗೆ ಸಂಗಾತಿಯೊಬ್ಬನ ಅಗತ್ಯವಿದೆ ಎನಿಸಿ, ಮದುವೆಯಾಗಲು ಸಿದ್ಧಳಾಗುತಾಳೆ. ಅಚಲಳ ನಿರ್ಧಾರ ತಿಳಿದ ಅಣ್ಣ-ಅತ್ತಿಗೆಯರು ಅವಳು ಆ ವಯಸ್ಸಿನಲ್ಲಿ ಮದುವೆಯಾಗುವುದು ಹಾಸ್ಯಾಸ್ಪದವೆಂದು ಏನೇನೋ ಸಬೂಬು ಹೇಳುತ್ತಾರೆ. ಅವಳಿಂದ ಬರುವ ಲಾಭಕ್ಕೆ ಸಂಚಕಾರವಾಗುತ್ತದೆಂಬ ಒಳಗಿನ ರಹಸ್ಯ ಅವರಿಬ್ಬರ ಮಾತಿನಿಂದ ಅಚಲಳಿಗೆ ತಿಳಿಯುತ್ತದೆ. 'ನಯವಾದ ವಂಚನೆಗಳ ಹುರುಳಿಲ್ಲದ ವಾತ್ಸಲ್ಯದ, ತೆಳುವಾದ ಮುಖವಾಡಗಳ ಪಾರದರ್ಶಕ ಸತ್ಯಗಳ ಬಲಿಯಾಗಿ ಬಿದ್ದಿದ್ದೆ. ಇಂದು ನಾನು ವಿವಾಹವಾದರೆ ಹಗುರಾಗಿ ಸಾಗುತ್ತಿದ್ದ ಮನೆಯ ಆಡಳಿತ ನಿನ್ನೊಬ್ಬನ ಮೇಲೆ ಬೀಳುತ್ತೆ. ಪುನೀತ್ ಅಸಿತರ ಬೇಡಿಕೆಗಳಿಗೆಲ್ಲ ನೀನೊಬ್ಬನೇ ಹೊಣೆ' ಎಂದು ಅಣ್ಣನಿಗೆ ಹೇಳಬೇಕೆನಿಸಿದರೂ ಆಕೆ ಹಾಗೆ ಮಾಡುವುದಿಲ್ಲ. ಸರಳ ವಿವಾಹ ಕೂಡ ಖರ್ಚಿನ ಬಾಬ್ತು ಎನ್ನುವ ಅತ್ತಿಗೆಯ ಮಾತಿನಿಂದ ಅವಳ ಎದುರಿನ ತೆರೆ ಸರಿಯುವಂತಾಗುತ್ತದೆ. 'ಮುಂದಿನ ಶನಿವಾರ ನಾನು-ಪ್ರಕಾಶ್ ತಿರುಪತಿಯಲ್ಲಿ ವಿವಾಹವಾಗ್ತೇವೆ. ಇಷ್ಟವಿದ್ದರೆ ಬರಬಹುದು ಒತ್ತಾಯವಿಲ್ಲ' ಎನ್ನುವ ನಿರ್ಧಾರದ ಮಾತುಗಳನ್ನು ಹೇಳಲು ಅಚಲಳಿಗೆ ಸಾಧ್ಯವಾಗುತ್ತದೆ. ನಮ್ಮ ಒಡಹುಟ್ಟು, ಆತ್ಮೀಯರು, ಬಂಧುಗಳು ಎಂದು ಭಾವಿಸಿದವರ ನಿಜಬಣ್ಣ ಬಯಲಾಗುವುದು ಅವರಿಗೆ ಸಿಗುತ್ತಿರುವ ಸೌಲಭ್ಯ ಅಲಭ್ಯ ಎಂದು ತಿಳಿದಾಗಲೇ. ಪ್ರೀತಿ ವಾತ್ಸಲ್ಯಗಳು ನಿಜವೆಂದೇ ನಂಬಿದ್ದಾಗ ಇನ್ನೊಂದು ಮುಖವನ್ನು ಕಾಣಲು ಸಾದ್ಯವಾಗದು. ಬದುಕಿನ ತಿರುವಿನಲ್ಲಿ ಬಂಧುತ್ವದ ಪರೀಕ್ಷೆಯಾಗುತ್ತದೆ ಎನ್ನುವುದನ್ನು ಅಚಲಳ ಜೀವನದ ಅನುಭವ ತೆರೆದಿಡುತ್ತದೆ. ಹಣದ ಎದುರು ಸಂಬಂಧ ಹೇಗೆ ಶಿಥಿಲವಾಗುತ್ತದೆ, ಅಮುಖ್ಯವಾಗುತ್ತದೆ ಎನ್ನುವುದನ್ನು ಕತೆ ಅನಾವರಣಗೊಳಿಸುತ್ತದೆ.

ಎಲ್ಲಿ ವ್ಯಕ್ತಿ ಜವಾಬ್ದಾರಿಯನ್ನು ಹೊರಲು ಸಿದ್ಧನಾ/ಳಾಗುತ್ತಾನೋ/ಳೋ ಅಲ್ಲೆಲ್ಲ ಜವಾಬ್ದಾರಿಗಳು ಹೆಗಲಿಗೇರಲು ಸಿದ್ಧವಾಗಿರುತ್ತವೆ. ಕುಟುಂಬದ ಸ್ವರೂಪ ಯಾವುದೇ ಇರಲಿ ಅನೇಕರಿಗೆ ಅದು ನೋವಿನ ನೆಲೆಯೇ ಆಗಿರುತ್ತದೆ. ಮಹಿಳೆಯ ನೋವಿಗೆ ವಿವಾಹ ಸ್ಥಿತಿ ಮಾತ್ರ ಕಾರಣ ಎನ್ನುವ ಸರಳ ತೀರ್ಮಾನಕ್ಕೆ ಬರುವಂತಿಲ್ಲ. ಗಂಗಾ ಪಾದೇಕಲ್ ಅವರ 'ಬದುಕಿನ ಬೇರನ್ನರಸಿ' (ಹೊಸಹೆಜ್ಜೆ) ಕತೆಯ ಕುಸುಮಳಂತೆ ಅವಿವಾಹಿತಳಾಗಿ ತವರನ್ನು ಒಂದು ನೆಲೆಗೆ ತರಲು ಶ್ರಮಿಸುವುದರಲ್ಲಿ ವ್ಯಕ್ತಿಗತ ಭಾವನೆಗಳನ್ನೆಲ್ಲ ಹತ್ತಿಕ್ಕಿ ನಿಸ್ವಾರ್ಥಿಯಾಗಿ ದುಡಿಯಬೇಕಾಗುತ್ತದೆ. ಮುಂದೆ ಕುಸುಮ ಒಡಹುಟ್ಟಿದವರಿಂದಲೇ ನಿಷ್ಠುರ ನುಡಿಗಳನ್ನು ಕೇಳುವಂತಾಗುತ್ತದೆ. 'ರಕ್ತ ನೀರಿಗಿಂತ ಗಟ್ಟಿ ಅಂತಾರಲ್ಲ, ಅದೆಲ್ಲ ಸುಳ್ಳು ಅಂತಾನಿಸ್ತಿದೆ ನನಗೆ (ಪುಟ.೨) ಎಂದು ಕುಸುಮ ಹೇಳುವಷ್ಟರಮಟ್ಟಿಗೆ ಅವಳ ಒಡಹುಟ್ಟಿದವರು ಅವಳನ್ನು ನೋಯಿಸುತ್ತಾರೆ. ಅವರವರದೇ ಆದ ಕುಟುಂಬ ರೂಪುಗೊಂಡ ಮೇಲೆ ತಮ್ಮ ಉನ್ನತಿಗೆ ಶ್ರಮಿಸಿದವರ ಬಗ್ಗೆ ಆಲೋಚಿಸುವುದಾಗಲಿ, ಅವರ ಬಗ್ಗೆ ಅನುಕಂಪವಾಗಲಿ ಇಲ್ಲದಾಗ ಆ ವ್ಯಕ್ತಿ ಗಂಡಿರಲಿ, ಹೆಣ್ಣಿರಲಿ ಅತೀವ ನೋವಿಗೆ ಒಳಗಾಗುವುದು ಮಾನವಸಹಜವಾದುದೇ ಆಗಿದೆ. ಎಲ್ಲರೂ ತಮ್ಮ-ತಮ್ಮ ಬದುಕನ್ನು ನೋಡಿಕೊಂಡು ಆಕೆಯನ್ನು ಅಲಕ್ಷಿಸಿದಾಗ ಕುಸುಮಳಿಗೆ ಒಂಟಿತನ ಕಾಡುತ್ತದೆ. ತನ್ನದೇ ಆದ ಮನೆ ಗಂಡ-ಮಕ್ಕಳು ಬೇಕೆನ್ನುವ ಹಂಬಲ ಮೂಡುತ್ತದೆ. ಆಗ ಸ್ವಂತದ ಬಗೆಗಿನ ಆಲೋಚನೆ ದಟ್ಟವಾಗತೊಡಗುತ್ತದೆ. ತನ್ನದೆನ್ನುವ ಜೀವವೊಂದು ಬೇಕೆನ್ನುವ ಆಕಾಂಕ್ಷೆ ಕುಸುಮಳಲ್ಲಿ ಮೊಳೆತದ್ದು ಹೀಗೆಯೇ. 'ಶಶೀ, ಇಷ್ಟು ದಿನಗಳು ನನ್ನ ಒಡಹುಟ್ಟುಗಳಿಗಾಗಿ ದುಡಿದೆ. ಅವರಿಗಾಗಿ ಬದುಕಿದೆ. ಇನ್ನಾದರೂ ನಾನು ನನ್ನ, ಕೇವಲ ನನ್ನದೇ ಆದ ಬದುಕನ್ನು ಬಾಳಬೇಕು' (ಪುಟ.೧೨) ಎಂದು ಕುಸುಮ ಗೆಳತಿಗೆ ಹೇಳುವ ಮಾತುಗಳು ಅವಳ ನೋವಿನ ಆಳವನ್ನು ಪರಿಚಯಿಸುತ್ತವೆ.' ಕುಸುಮಳಂತೆಯೇ 'ಆಸರೆ'ಯ (ಪ್ರೇಮಾಭಟ್-ಪಂಚಾಮೃತ) ಪದ್ಮಳೂ ತನ್ನ ತವರಿಗಾಗಿ ದುಡಿಯುತ್ತಾಳೆ. ತಂಗಿ ತಮ್ಮಂದಿರೆಲ್ಲರ ಬದುಕು ವ್ಯವಸ್ಥಿತವಾಗಿ ರೂಪಿತವಾದ ಮೇಲೆ ತಾಯಿಯ ಸೇವೆ ಅವಳ ಪಾಲಿನದಾಗುಳಿಯುತ್ತದೆ. ತಾಯಿಯ ಸಾವಿನ ನಂತರ ಒಂಟಿಯಾಗಿದ್ದ ಅವಳನ್ನು ಆಫೀಸರನೊಬ್ಬ ಮದುವೆಯಾಗಲು ಬಯಸುತ್ತಾನೆ. ಆದರೆ ಅವನಿಗೆ ಈಗಾಗಲೇ ಹೆಂಡತಿ ಮಕ್ಕಳು ಇರುವುದರಿಂದ ನಿವೃತ್ತಿಯಾದ ಮೇಲೆ ಮದುವೆಯಾಗುವುದಾಗಿ ತಿಳಿಸುತ್ತಾನೆ. ಅವಳಿಗೆ ಅವನ 'ಬಣ್ಣ' ತಿಳಿಯುತ್ತದೆ. ಅವಳ ತಮ್ಮ ತಾನು 'ಆಸರೆ' ನೀಡುವುದಾಗಿ ಹೇಳುತ್ತಾನೆ. ಆಕೆಯ ಸೇವೆ ಹಾಗೂ ದುಡಿಮೆಯನ್ನು ಬಂಡವಾಳವಾಗಿಸಿಕೊಳ್ಳಲು ಬಯಸುವ ಇಂಥವರಿಂದ ಅವಳಿಗೆ ನಿಜವಾಗಿ ಆಸರೆ ದೊರಕುತ್ತದೆಯೇ? ಅಥವಾ ಅವಳ ಆಸರೆ ಇಂಥ ಜನಕ್ಕೆ ಬೇಕೇ? ಎನ್ನುವ ಪ್ರಶ್ನೆಯನ್ನು ಕತೆ ಎತ್ತುತ್ತದೆ. ಕುಸುಮಳನ್ನು ಆಕೆಯ ಬಾಸ್ ಮದುವೆಯಾಗಲು ಇಚ್ಛಿಸುವುದು ಕೂಡ ಅವಳಿಗೆ ಸಂಸಾರದ ಜವಾಬ್ದಾರಿ

ಹೊತ್ತು ರೂಢಿಯಿದೆ ಎಂಬ ಕಾರಣದಿಂದ. ಶೋಷಣೆಯ ಒಂದು ಮುಖವನ್ನು ಈ ಕತೆಗಳು ಕಾಣಿಸುತ್ತವೆ.

ವಿಭಕ್ತ ಕುಟುಂಬದಲ್ಲಿ ಮಹಿಳೆಯ ಸ್ಥಿತಿ ಅವಿಭಕ್ತ ಕುಟುಂಬಕ್ಕೆ ಹೋಲಿಸಿದರೆ ಸ್ವಲ್ಪ ಉತ್ತಮ. ಕುಟುಂಬದ ಆಗುಹೋಗುಗಳನ್ನು ತೀರ್ಮಾನಿಸುವ ಅವಕಾಶ ಸ್ವಲ್ಪಮಟ್ಟಿಗೆ ದೊರಕುತ್ತದೆ. ಆಕೆಯ ಸಣ್ಣಪುಟ್ಟ ಬಯಕೆ ಬೇಡಿಕೆಗಳನ್ನು ಪೂರೈಸಿಕೊಳ್ಳು ಸಾಧ್ಯವಾಗುತ್ತದೆ. ಒಟ್ಟಿನಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಇಂಬು ದೊರೆಯುತ್ತದೆ.

ಸ್ವಾತಂತ್ರ್ಯೋತ್ತರದಲ್ಲಿ ಬದಲಾದ ಆಡಳಿತಾತ್ಮಕ ತೀರ್ಮಾನಗಳಿಂದಾಗಿ ನಗರೀಕರಣ ಹಾಗೂ ಕೈಗಾರಿಕೀಕರಣಕ್ಕೆ ಹೆಚ್ಚಿನ ಒತ್ತುಬಿತ್ತು. ಜೊತೆಗೆ ಜನಸಂಖ್ಯಾ ಹೆಚ್ಚಳವೂ ಸೇರಿದ್ದರಿಂದ ಕೆಲಸವನ್ನು ಅರಸಿಕೊಂಡು ಸ್ಥಳಾಂತರವಾಗುವ ಕುಟುಂಬಗಳ ಸಂಖ್ಯೆ ವೃದ್ಧಿಸಿತು. ಕೆಲಸಮಾಡುವ ಜಾಗಕ್ಕೆ ಸಮೀಪವಿರುವಂತೆ ಕುಟುಂಬವನ್ನು ಸ್ಥಳಾಂತರಿಸುವುದು ಅನಿವಾರ್ಯವಾಯಿತು. ಇದಲ್ಲದೆ ಜನಸಂಖ್ಯಾಸ್ಫೋಟ ತಡೆಗಟ್ಟಲು ಸರಕಾರವು ಪ್ರಚಾರಗೊಳಿಸಿದ 'ಚಿಕ್ಕಕುಟುಂಬ'ದ ಪರಿಕಲ್ಪನೆಯೂ ಕೆಲಮಟ್ಟಿಗೆ ಪರಿಣಾಮ ಬೀರಿದ್ದಿರಬಹುದು. ಈ ಎಲ್ಲ ಕಾರಣಗಳಿಂದಾಗಿ ಅವಿಭಕ್ತ ಕುಟುಂಬ ಪದ್ಧತಿ ವಿರಳವಾಗಿ ವಿಭಕ್ತ ಕುಟುಂಬವು ಪ್ರಾಧಾನ್ಯ ಪಡೆಯಿತು.

ವಿಭಕ್ತ ಕುಟುಂಬವಿರಲಿ, ಅವಿಭಕ್ತ ಕುಟುಂಬವಿರಲಿ ಹೆಂಗಸನ್ನು ದುಡಿಮೆಯ ಯಂತ್ರದಂತೆ ಕಂಡರೆ ಅವಳ ಪರಿಸ್ಥಿತಿಯಲ್ಲಿ ಯಾವ ವ್ಯತ್ಯಾಸವೂ ಆಗದು ಎನ್ನುವುದಕ್ಕೆ ಪ್ರೇಮಾಭಟ್ ಅವರ 'ಸಿಕ್ಕು' ಕತೆಯ ಗಿರಿಜಾ ಉದಾಹರಣೆಯಾಗುತ್ತಾಳೆ. ಹಳ್ಳಿಯಲ್ಲಿ 'ಉಂಡುಡಲು' ತೊಂದರೆ ಇಲ್ಲದಿದ್ದರೂ ಸ್ವಾತಂತ್ರ್ಯವಿಲ್ಲ ಎಂದು ನಗರದ ಬದುಕಿಗೆ ಬಂದ ಗಿರಿಜೆಗೆ ನಗರದಲ್ಲಿ ಎಷ್ಟೇ ದುಡಿದರೂ ಆರ್ಥಿಕ ಮುಗ್ಗಟ್ಟು ಎದುರಾಗುತ್ತದೆ. ಅವಳು ಹಳ್ಳಿಯಲ್ಲಿರುವಾಗ ಬರುತ್ತಿದ್ದ ನೆಂಟರು ಅವಳ ಅನುಪಸ್ಥಿತಿಯಲ್ಲಿ ಆ ಕಡೆ ಮುಖ ಹಾಕುತ್ತಿರಲಿಲ್ಲ. ತಿರುಗಿ ಆಕೆ ಹಳ್ಳಿಗೆ ಬರುತ್ತಿದ್ದಂತೆ ನೆಂಟರ ಹಾವಳಿ ಪ್ರಾರಂಭವಾಗುತ್ತದೆ. ವಿಭಕ್ತ ಕುಟುಂಬದ ತಾಪತ್ರಯ, ಅವಿಭಕ್ತ ಜಂಜಡಗಳೆರಡನ್ನೂ ಕತೆ ಬಿಚ್ಚಿಡುತ್ತದೆ. ದುಡಿಮೆ, ಸಹನೆ, ಉಪಚಾರಗಳನ್ನು ಮೈಗೂಡಿಸಿಕೊಳ್ಳುವುದು ಹೆಣ್ಣಿಗೆ ಅನಿವಾರ್ಯವಾಗಿರುವ ಕೌಟುಂಬಿಕ ಸಿಕ್ಕಿನಿಂದ ಆಕೆ ಬಿಡಿಸಿಕೊಳ್ಳುವುದು ಸುಲಭವಲ್ಲ ಎನ್ನುವುದಾಗಿ ಕತೆ ಸೂಚಿಸುತ್ತದೆ.

ಕುಟುಂಬದ ಸದಸ್ಯರೊಂದಿಗೆ ಭಾವನಾತ್ಮಕ ಸಂಬಂಧವಿದ್ದಾ ಮಾತ್ರ ಮನೆಯಲ್ಲಿ ಆರೋಗ್ಯಕರ ವಾತಾವರಣ ಇರಲು ಸಾಧ್ಯ ಎನ್ನುವುದನ್ನು 'ಕೋಲು ಕೋಲೆನ್ನ ಕೋಲೆ' ಕತೆ (ಪಂಚಾಮೃತ) ಸಾಬೀತು ಪಡಿಸುತ್ತದೆ. ಎಲ್ಲರೂ ಸೇರಿ ಒಂದೇ ರಾಗದಲ್ಲಿ ಹಾಡಿ ಆಡುವ ಕೋಲಾಟವನ್ನು ಇಷ್ಟಪಡುವ ಪವಿತ್ರ ಬದುಕಿನಲ್ಲಿಯೂ ತುಂಬಿದ ಸಂಸಾರವನ್ನು ಆಯ್ದುಕೊಂಡವಳು. ಸೊಸೆ ಮಗಳಲ್ಲಿ ಭೇದ ಮಾಡುವ ಅತ್ತೆಯ ಕಾರಣದಿಂದ ಎಷ್ಟೇ

ಅನಾನುಕೂಲ ಪರಿಸ್ಥಿತಿಯನ್ನು ಎದುರಿಸಿದರೂ ಬೇರೆ ಸಂಸಾರ ಹೂಡಬಾರದೆಂದು ನಿರ್ಧರಿಸಿ 'ಗುಂಪಿನಲ್ಲಿ ಸಿಗುವ ಆನಂದಕ್ಕೆ ಒಂದು ಭಾವನಾತ್ಮಕ ಅರ್ಥವಿದೆ' ಎಂದು ಭಾವಿಸುತ್ತಾಳೆ. ಪವಿತ್ರಳ ಆದರ್ಶ ಹೊತ್ತು ತುಂಬಿದ ಕುಟುಂಬದ ಸೊಸೆಯಾಗಿ ಹೋದ ಗೆಳತಿ ಅಂಬಿ ಬೇರೆಯಾಗಿ ಸಂಸಾರ ಹೂಡುತ್ತಾಳೆ. ಒಂದೇ ಸನ್ನಿವೇಶಕ್ಕೆ ವಿಭಿನ್ನ ಪ್ರತಿಕ್ರಿಯೆ ಸೂಚಿಸುವ ಮಹಿಳೆಯ ವ್ಯಕ್ತಿತ್ವದ ವಿಭಿನ್ನ ಮುಖವನ್ನು ಈ ಕತೆ ಅನಾವರಣಗೊಳಿಸುತ್ತದೆ.

ಹೊರಗಿನಿಂದ ಕುಟುಂಬಕ್ಕೆ ಸೊಸೆಯಾಗಿ ಬಂದ ವಹಿಳೆ ಅಲ್ಲಿನ ಸದಸ್ಯರ ಬೇಕು ಬೇಸಡಗಳನ್ನು ಗಮನಿಸುತ್ತ ತನ್ನತನವನ್ನೇ ಪೂರ್ತಿಯಾಗಿ ಮರೆತಾಗ ಅವಳು ಆ ಮನೆಯವಳಾಗಿ ಪರಿಗಣಿತಳಾಗುತ್ತಾಳೆ. ತನ್ನದೇ ಆದಂಥ ವ್ಯಕ್ತಿತ್ವವನ್ನು ಉಳಿಸಿಕೊಳ್ಳಬೇಕಾದಲ್ಲಿ ಆಕೆ ನಿರಂತರವಾಗಿ ತನ್ನನ್ನು ಸಂಘರ್ಷಕ್ಕೆ ಒಡ್ಡಿಕೊಳ್ಳಬೇಕಾಗುತ್ತದೆ.

ಈ ಕತೆಗಳು ಕಾಣಿಸುವ ಒಂದು ಅಂಶವೆಂದರೆ ವಿವಾಹಮೂಲಕವಾಗಿ ಏರ್ಪಡುವ ಸಂಬಂಧ ಹಾಗೂ ರಕ್ತ ಸಂಬಂಧಗಳಲ್ಲಿನ ವ್ಯತ್ಯಾಸ. ತಾಯಿ-ಮಗಳು, ಅಕ್ಕ-ತಂಗಿ-ಚಿಕ್ಕಮ್ಮ ಮೊದಲಾದ ರಕ್ತ ಸಂಬಂಧಗಳಲ್ಲಿ ಮಹಿಳೆಯರು ಒಬ್ಬರನ್ನೊಬ್ಬರು ನೋಡುವ, ಗ್ರಹಿಸುವ ರೀತಿಗೂ ಅತ್ತೆ-ಸೊಸೆ, ಅತ್ತಿಗೆ-ನಾದಿನಿ-ಓರಗಿತ್ತಿಯರ ನಡುವಿನ ದೃಷ್ಟಿಗೂ ಸಾಕಷ್ಟು ಅಂತರವಿದೆ. ಗಂಡಿನ ಮೂಲಕ ಏರ್ಪಡುವ ಸಂಬಂಧಗಳಲ್ಲಿ ವ್ಯಾವಹಾರಿಕ ದೃಷ್ಟಿ ಮುಖ್ಯವಾದರೆ ರಕ್ತ ಸಂಬಂಧದಲ್ಲಿ ಭಾವನಾತ್ಮಕ ದೃಷ್ಟಿ ಮುಖ್ಯವಾಗುತ್ತದೆ. ರಕ್ತಸಂಬಂಧಗಳಲ್ಲಿ ಕಾಣಬರುವ ವಾತ್ಸಲ್ಯ, ವಾಂಛಲ್ಯ, ಮಮಕಾರಗಳು, ಬಾಂಧವ್ಯದ ಬಿಗಿಪು ವಿವಾಹ ಸಂಬಂಧದಲ್ಲಿ ಕಂಡು ಬರುವುದಿಲ್ಲ. ಇಲ್ಲಿ ಅಧಿಕಾರದ, ಆರ್ಥಿಕಭದ್ರತೆಯ ಸವಾಲು ಎದುರಾಗುವುದರಿಂದ ಮಹಿಳೆಯರು ಪರಸ್ಪರ ಸ್ಪರ್ಧಿಗಳಾಗಿ ಎಲ್ಲರೂ ನರಳುವಂತಾಗುತ್ತದೆ. ಹಾಗಾಗಿ 'ಹೆಣ್ಣಿಗೆ ಹೆಣ್ಣೇ ಶತ್ರು' ಎಂಬ ನುಡಿಗಟ್ಟು ತಲೆಮಾರಿನಿಂದ ತಲೆಮಾರಿಗೆ ರವಾನೆಯಾಗುತ್ತಲೇ ಬರುತ್ತಿದೆ.

ಈ ಕತೆಗಳು ಮಹಿಳೆಯ ಸ್ಥಿತಿಯನ್ನು, ಅವಳ ಅನಿಸಿಕೆಯನ್ನು ಕಾಣಿಸಲು ಪ್ರಯತ್ನಿಸುತ್ತವೆ. ಅವಳ ಇಂಥ ಸ್ಥಿತಿಗೆ ಕಾರಣವಾಗಿರುವ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಕಾರಣಗಳ ಹುಡುಕಾಟವನ್ನಾಗಲಿ, ಆಳವಾದ ಚಿಂತನೆಯನ್ನಾಗಲಿ ಒಳಗೊಳ್ಳುವುದಿಲ್ಲ. ಕುಟುಂಬ ವ್ಯವಸ್ಥೆಯಲ್ಲಿನ ಉಸಿರುಕಟ್ಟಿಸುವ ವಾತಾವರಣದ ಅರಿವಿದ್ದರೂ ಅದರಿಂದ ಹೊರಬರಲಾರದೆ ಆ ವರ್ತುಲದಲ್ಲಿಯೇ ಸುತ್ತುವ ಗಿರಿಜೆ-ನಸೀಮರಂಥವರಾಗಲಿ, ಒಳದಾರಿ ಹಿಡಿಯಹೊರಟು ಬಲಿಯಾದ ಮಲ್ಲವ್ವನಾಗಲಿ ಆರ್ಥಿಕವಾಗಿ ಸ್ವಾವಲಂಬಿಗಳಾಗಿದ್ದಲ್ಲಿ ಅಲ್ಲಿಂದ ಬಿಡಿಸಿಕೊಳ್ಳುವ ಸಾಧ್ಯತೆ ಇತ್ತೆಂಬುದನ್ನು ಕುಸುಮಳ ರಚನಾತ್ಮಕ ನಿರ್ಧಾರ ಸ್ಪಷ್ಟಪಡಿಸುತ್ತದೆ. ಆದರೆ ಎಲ್ಲ ಸನ್ನಿವೇಶದಲ್ಲಿಯೂ ಆರ್ಥಿಕ ಸ್ವಾವಲಂಬನೆಯೊಂದೇ ಪರಿಹಾರ ಎನ್ನುವಂತಿಲ್ಲ ಎಂಬುದಾಗಿ ಪವಿತ್ರಳ ನಿರ್ಣಯದಿಂದ ಅರ್ಥಮಾಡಿಕೊಳ್ಳಬಹುದು. ಭಾವನಾತ್ಮಕ ಪಾತಳಿಯಲ್ಲಿಯೇ ಸುತ್ತುವ ಹೆಣ್ಣಿನ ಮನಸ್ಸು ಎಷ್ಟೇ ಅನನುಕೂಲಗಳಿದ್ದರೂ ತೆಗೆದುಕೊಳ್ಳುವ ನಿರ್ಧಾರವು ವ್ಯಕ್ತಿಯ

ನೆಲೆಗಿಂತ ಸಮಾಜ ನಿರ್ಮಿತ ಮೌಲ್ಯದ ಕಡೆಗೇ ವಾಲುತ್ತದೆ ಎನ್ನುವುದನ್ನು ಇಂಥ ರಚನೆಗಳು ಕಾಣಿಸುತ್ತವೆ. ಆಯಾ ಪಾತ್ರಗಳು ತೆಗೆದುಕೊಳ್ಳುವ ನಿರ್ಧಾರಗಳು ಅವರ ಪರಿಸ್ಥಿತಿ, ಸಾಮಾಜಿಕ ಸ್ಥಾನಮಾನ, ಆರ್ಥಿಕಭದ್ರತೆ, ಕುಟುಂಬದೊಂದಿಗಿನ ಅವರ ಸಂಬಂಧದ ಸ್ವರೂಪ ಇವೆಲ್ಲವುಗಳಿಂದ ಪ್ರಭಾವಿತವಾಗಿರುತ್ತದೆ. ಈ ಎಲ್ಲ ಬಿಗಿತಗಳ ನಡುವೆಯೇ ಮಹಿಳೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾಗಿದೆ, ವ್ಯಕ್ತಿ ವಿಶಿಷ್ಟತೆಯನ್ನು ಕಾಣಿಸಬೇಕಾಗಿದೆ ಎನ್ನುವುದನ್ನು ಈ ಬಗೆಯ ಅಧ್ಯಯನ ತೋರಿಸಿಕೊಡುತ್ತದೆ.

ಕುಟುಂಬದೊಳಗಿನ ಶೋಷಣೆಯ ಅರಿವು ಮಹಿಳೆಗೆ ಈ ಹಿಂದೆ ಇರಲಿಲ್ಲ ಎನ್ನಲಾಗದು. ಆದರೆ ಎಷ್ಟೇ ತೊಂದರೆ ಇರಲಿ, ನೋವಿರಲಿ ಮಹಿಳೆ 'ಬಾಯ್ಮುಚ್ಚಿ'ಕೊಂಡು ಅದನ್ನು ಸಹಿಸಬೇಕು ಅದೇ ಹೊಂದಾಣಿಕೆ ಎನ್ನುವುದು ಎಂದಿನಿಂದಲೂ ಸಮಾಜ ಒಪ್ಪಿತ ಮೌಲ್ಯವೇ ಆಗಿದೆ. ಮಹಿಳೆಗೆ ದೊರೆತ ಶಿಕ್ಷಣ ಹಾಗೂ ಬದಲಾದ ಸಾಮಾಜಿಕ ಪರಿಸರದಿಂದಾಗಿ ತನ್ನ ನೋವಿಗೆ, ತನಗಾದ ಅನ್ಯಾಯಕ್ಕೆ ಕಾರಣಗಳನ್ನು ಹುಡುಕುವ, ಅರ್ಥಮಾಡಿಕೊಳ್ಳುವ ಆಲೋಚನಾ ಕ್ರಮವೊಂದು ಮಹಿಳೆಯಲ್ಲಿ ಬೆಳೆಯುತ್ತಿದೆ. ಅದರಿಂದ ತನ್ನ ಕಷ್ಟ ಅಪರಿಹಾರ್ಯವಲ್ಲ ಎಂಬ ಅರಿವು ಉಂಟಾಗುತ್ತಿದೆ. ಈ ನಿಟ್ಟಿನಲ್ಲಿ ಲೇಖಕಿಯರ ಹಲವು ರಚನೆಗಳು ಮಹಿಳೆಯರಲ್ಲಿ ಉಂಟಾಗಿರುವ ಜಾಗ್ರತಿಯನ್ನು ವಿಸ್ತರಿಸುವ, ದಾಖಲಿಸುವ ಕೆಲಸವನ್ನು ಮಾಡುತ್ತಿವೆ. ತನ್ನ ಸ್ಥಿತಿಯ ಸುಧಾರಣೆಗೆ ತಾನೇ ಕ್ರಿಯಾಶೀಲಳಾಗಬೇಕಿದೆ ಎನ್ನುವುದನ್ನು ಮಹಿಳೆಯು ಅರ್ಥಮಾಡಿಕೊಂಡಾಗಷ್ಟೇ ಅವಳ ಬಿಡುಗಡೆ ಸಾಧ್ಯ ಎನ್ನುವುದು ಈ ಲೇಖಕಿಯರ ನಂಬಿಕೆಯಾಗಿದೆ.

# ಬಸವಿಯರು

*ಶೈಲಜಾ ಹಿರೇಮಠ*

ಹೊಟೇಲುಗಳು ಒಂದೇ ರೀತಿ ಇರುವುದಿಲ್ಲ. ಫೈವ್ ಸ್ಟಾರ್ ಅಂತ ಇದೆ, ತ್ರೀಸ್ಟಾರ್ ಕೂಡ ಇದೆ. ಸಣ್ಣಸಣ್ಣ ಉಪಹಾರಗೃಹಗಳಿವೆ, ಬೀದಿಯಲ್ಲಿಯೇ ಸ್ಟೋವ್ ಇಟ್ಟುಕೊಂಡು ನಡೆಸುವ ಬೀದಿ ಕ್ಯಾಂಟೀನುಗಳಿವೆ. ನಾನು ಹಳಿ ತಪ್ಪಿ ಮಾತನಾಡುತ್ತಿಲ್ಲ. ಭಾರತೀಯ ಸಂಸ್ಕೃತಿಯಲ್ಲಿ(?) ಕಾಣುವ ಲೈಂಗಿಕ ದಾಸಿಯರ ಕುರಿತು ಬರೆಯುವ ಸಂದರ್ಭದಲ್ಲಿ ಹೀಗೆ ಮಾತನಾಡುವುದು ಅನಿವಾರ್ಯವೆನಿಸಿತು. ಇಂತಹ ಹೋಲಿಕೆ ನೀಡುವುದು ಸರಿಯೇ ಎಂದು ನಾನು ಅನೇಕ ಬಾರಿ ತಲ್ಲಣಗಳಿಗೆ ಒಳಗಾಗಿದ್ದು ನಿಜ. ಪುರುಷರೇ ಕಟ್ಟಿಕೊಟ್ಟಿರುವ ಭಾಷೆಯ ಮೂಲಕ ಈ ವ್ಯವಸ್ಥೆಯನ್ನು ಲೇವಡಿಗೊಳಪಡಿಸಲು ನನಗೆ ಅನ್ಯದಾರಿಗಳು ಕಾಣಲಿಲ್ಲ. ಭಾರತೀಯ ಜಾತಿವಾರು ಸಮಾಜದಲ್ಲಿಯ ಲೈಂಗಿಕ ದಾಸಿಯರೆಲ್ಲರನ್ನೂ ಸಮಗ್ರವಾಗಿ ಗಮನಿಸಿದರೆ ತೀರ ಶೋಷಣೆಗೆ ಒಳಗಾಗಿರುವ ಕೆಳಜಾತಿಯ ಮಹಿಳೆಯರಿಗೆ ಅನ್ಯಾಯ ಮಾಡಿದಂತಾಗುತ್ತದೆ. ಬೀದಿ ಕ್ಯಾಂಟೀನ್ ಗಳಂತಿರುವ ಬಸವಿಯರ ಕುರಿತು ಪ್ರತ್ಯೇಕವಾದ ಅಧ್ಯಯನ ಅಗತ್ಯ. ಲೈಂಗಿಕ ದಾಸಿಯರ ಒಟ್ಟು ವ್ಯವಸ್ಥೆಯಲ್ಲಿ ಈ ಬಗೆಯ ಭಿನ್ನ-ಭಿನ್ನ ಕವಲುಗಳನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಕೆಲವು ಸಂಗತಿಗಳು ಪುನರುಕ್ತಿಯಾಗುವುದು ಸಹಜ.

ಬಸವಿ ಸಂಪ್ರದಾಯವನ್ನು ಸಮಾಜಶಾಸ್ತ್ರದ ನೆಲೆಯಲ್ಲಿಟ್ಟು ವಿಶ್ಲೇಷಿಸುವ ಗಂಭೀರ ಪ್ರಯತ್ನ ಜೋಗನ್ ಶಂಕರ್, ಗುರುಮೂರ್ತಿಯವರಿಂದ ನಡೆದಿದೆಯಾದರೂ ನನಗದು ತೃಪ್ತಿಕರವಾಗಿ ಕಂಡಿಲ್ಲ. ಪಾತರ, ಬಸವಿ, ಮರುಳೆ, ಸಬಿ ಮೊದಲಾದವರನ್ನೆಲ್ಲ 'ದೇವದಾಸಿ' ಎಂದು ಸಾಮಾನ್ಯೀಕರಿಸಿ, ಅಧ್ಯಯನ ಮಾಡಿದ ಫಲಶ್ರುತಿ ಅಷ್ಟು ಪರಿಣಾಮ ಕಾರಿಯಾಗದು. ಲೈಂಗಿಕದಾಸಿಯರಲ್ಲಿ ಕಂಡುಬರುವ ಪ್ರತಿಯೊಂದು ಪಂಗಡದವರ ಅಧ್ಯಯನ ಪ್ರತ್ಯೇಕವಾಗಿಯೇ ನಡೆಸಬೇಕಾಗಿದೆ. ಅದಕ್ಕೆ ಸ್ತ್ರೀವಾದಿ ಚಿಂತನೆಯ ಸ್ಪರ್ಶದ ಅಗತ್ಯವಿದೆ. ಅಂದಾಗ ಮಾತ್ರ ಅದರ ಮೂಲ ಬೇರುಗಳನ್ನು ಹುಡುಕಲು, ಅದಕ್ಕೆ ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ.

ನೈತಿಕ-ಅನೈತಿಕ ಮೌಲ್ಯಗಳನ್ನಿಟ್ಟು ಬಸವಿಯಂತಹ ವ್ಯವಸ್ಥೆಯನ್ನು ವಿಶ್ಲೇಷಿಸಬಾರದು. ತಲೆತಲಾಂತರದಿಂದ ಒಪ್ಪಿಕೊಂಡ ನೀತಿ-ಅನೀತಯಂತಹ ಮೌಲ್ಯಗಳು ಪುರುಷಶಾಹಿ

ಸಂಸ್ಕೃತಿಯ ತಾತ್ವಿಕ ಚಿಂತನೆಗಳಾಗಿವೆ. ಈ ಮೌಲ್ಯಗಳನ್ನಿಟ್ಟು ಅಧ್ಯಯನ ಮಾಡುವುದೆಂದರೆ ಪುರುಷದೃಷ್ಟಿಕೋನದಿಂದಲೇ ಅಧ್ಯಯನ ಮಾಡುವುದಾಗಿರುತ್ತದೆ. ಇಂತಹವುಗಳನ್ನು ಇಟ್ಟುಕೊಂಡೇ ಬಸವಿಯಂತಹ ಅನೇಕ ಸಂಪ್ರದಾಯಗಳನ್ನು ದೂಷಿಸುವುದು ಸುಲಭ. ನೈತಿಕ ಸಿಟ್ಟನ್ನು ತೋರಿಸುವುದು ಇನ್ನೂ ಸತ್ಯ. ಅದರಿಂದಾಗಿ ಹೊಸದಾಗಿ ಏನನ್ನೂ ಹೇಳಿದಂತಾಗುವುದಿಲ್ಲ. ಹೀಗಾದಾಗ ಮಹಿಳಾ ಚರಿತ್ರೆಗೆ ನ್ಯಾಯವೊದಗಿಸುವುದು ಕನಸಿನ ಮಾತಾಗುತ್ತದೆ. ಅದಕ್ಕಾಗಿ ಅಸ್ತಿತ್ವ ಹಾಗೂ ಆರೋಗ್ಯವನ್ನು ಕೇಂದ್ರವಾಗಿರಿಸಿಕೊಂಡು ವಿಷಯವನ್ನು ಪ್ರವೇಶಿಸುವುದು, ಚಿಂತನೆಗೊಳಪಡಿಸುವುದು ಹೆಚ್ಚು ಸೂಕ್ತ.

ಲೈಂಗಿಕ ದಾಸಿಯರ ವ್ಯವಸ್ಥೆಯ ಕುರಿತು ಮಾತನಾಡುವ ಮತ್ತು ಬರೆಯುವ ಬಹುಪಾಲು ಸಮಾಜಸೇವಕರು ಹಾಗೂ ಅಧ್ಯಯನಕಾರರು-"ಅವರು ನೀತಿಬಾಹಿರರು. ಕೊಳಕಾಗಿರುವವರು. ಅವರನ್ನು ನೈತಿಕ ಚೌಕಟ್ಟಿಗೆ ಒಳತರುತ್ತಿದ್ದೇವೆ" ಎನ್ನುವ ಅಹಂ ಹೊತ್ತುಕೊಂಡೇ ಇಂತಹ ಕ್ಷೇತ್ರಗಳನ್ನು ಪ್ರವೇಶಿಸುತ್ತಾರೆ. ಅವರ ಬದುಕಿನ ಕ್ರಮಗಳನ್ನು, ಅವರೇ ಕಟ್ಟಿಕೊಂಡಿರುವ ಜೀವನ ಮೌಲ್ಯಗಳನ್ನು ಅರ್ಥಮಾಡಿಕೊಳ್ಳಲು ಸಾವಧಾನವನ್ನವರು ತೋರುವುದಿಲ್ಲ. ತಾವು ಕಟ್ಟಿಕೊಂಡಿರುವ ಸಂಸ್ಕೃತಿಯ ಕನ್ನಡಕವನ್ನು ಹಾಕಿಕೊಂಡೇ ಆ ಜನಾಂಗದ ಮೌಲ್ಯಗಳನ್ನು ಲೇವಡಿ ಮಾಡುತ್ತಾರೆ, ಕನಿಕರಿಸುತ್ತಾರೆ, ಸರಿತಪ್ಪುಗಳನ್ನು ನಿರ್ಧರಿಸಿಬಿಡುತ್ತಾರೆ. ಈ ಹರಿಬರಿಯ ದೃಷ್ಟಿಕೋನದ ಅಧ್ಯಯನಕಾರರು, ಚಳುವಳಿಗಾರರು, ಜನಾಂಗದ ಮೌಲ್ಯ ಮತ್ತು ಸಾಮಾಜಿಕ ವ್ಯವಸ್ಥೆಯ ಮಧ್ಯೆ ಬಹುದೊಡ್ಡ ಕಂದಕವನ್ನು ನಿರ್ಮಿಸಿಬಿಡುತ್ತಾರೆ. ಹೀಗಾದಾಗ ವ್ಯವಸ್ಥೆಯ ವಸ್ತುಸ್ಥಿತಿಯನ್ನು ಅರ್ಥಮಾಡಿಕೊಳ್ಳುವುದು ಮರೀಚಿಕೆಯಾಗಿಯೇ ಉಳಿಯುತ್ತದೆ. ನಮ್ಮವರು ಈ ಸುಧಾರಣಾವಾದಿ ಪರಿಕಲ್ಪನೆಯನ್ನು ವಸಾಹಾತುಶಾಹಿ ವ್ಯವಸ್ಥೆಯಿಂದಲೇ ಪಡೆದುಕೊಂಡಿದ್ದಾರೆ. ಬ್ರಿಟೀಷರು ನಮ್ಮನ್ನು ಉದ್ಧರಿಸುವಂತೆಯೇ ನಡೆದುಕೊಂಡರು. ಇವತ್ತಿನ ಅಧ್ಯಯನಕಾರರು, ಸುಧಾರಣಾವಾದಿಗಳು ಇದಕ್ಕಿಂತ ಭಿನ್ನವೆನ್ನಿಸುವುದಿಲ್ಲ.

ಧರ್ಮಕೇಂದ್ರಿತ ಲೈಂಗಿಕ ದಾಸಿಯರಲ್ಲಿ ಪ್ರಧಾನವಾಗಿ ಎರಡು ಕವಲುಗಳು ಕಾಣಿಸಿಕೊಳ್ಳುತ್ತವೆ. ರಂಭಾ ಪರಂಪರೆ, ರೇಣುಕೆ ಪರಂಪರೆ. ಇದರಲ್ಲಿಯೇ ಮತ್ತೊಂದು ಹನುಮ ಪರಂಪರೆಯನ್ನು ಗುರುತಿಸಬಹುದು. ರಂಭಾ ಪರಂಪರೆಗೆ ಸೇರಿದವರು ದೇವಾಲಯದ ಲೈಂಗಿಕದಾಸಿಯರಾದರೆ, ರೇಣುಕೆ ಮತ್ತು ಹನುಮ ಪರಂಪರೆಗೆ ಸೇರಿದವರು ದೇವರ ಲೈಂಗಿಕದಾಸಿಯರು. ಮೊದಲನೆಯ ವರ್ಗಕ್ಕೆ ಸೇರಿದವರು ಪಾತರದವರಾದರೆ, ಎರಡನೆಯ ವರ್ಗಕ್ಕೆ ಸೇರಿದವರು ಬಸವಿಯರಾಗುತ್ತಾರೆ. ರೇಣುಕೆ ಹಾಗೂ ಹನುಮ ಪರಂಪರೆಗೆ ಸೇರಿದವರಲ್ಲಿ ಸಂಪ್ರದಾಯ ಆಚರಣೆಗಳು ಭಿನ್ನವಾದರೂ ಅವರಿಬ್ಬರಿಗೆ ಲೈಂಗಿಕಸೇವೆ ಧರ್ಮಪ್ರಧಾನವಾದುದಾಗಿದೆ. ಈ ಸಂಖ್ಯಾ ಅಂಶಗಳನ್ನು ಗಮನಿಸಿಯೇ ಅವರನ್ನು ಬಸವಿಯರು ಎಂದು ಗುರುತಿಸಿದೆ.

ರೇಣುಕೆ ಸಂಪ್ರದಾಯ ಜಲಪರಂಪರೆಗೆ ಸೇರಿದರೆ, ಹನುಮ ಸಂಪ್ರದಾಯ ಅಗ್ನಿ ಪರಂಪರೆಗೆ ಸೇರಿದೆ. ಸವದತ್ತಿ ಎಲ್ಲಮ್ಮ, ಕೊಕಟನೂರು ಎಲ್ಲಮ್ಮ, ಚಿಂಚಲಿ ಮಾಯವ್ವ, ಉಚ್ಚಂಗಿದುರ್ಗದ ಉಚ್ಚೆಂಗೆವ್ವ, ಹುಲಗಿಯ ಹುಲಿಗೆವ್ವ ಈ ಎಲ್ಲ ದೇವತೆಗಳ ದೇವಸ್ಥಾನಗಳ ಪಕ್ಕದಲ್ಲಿ ನದಿ ಇಲ್ಲವೆ ಹಳ್ಳಗಳು ಹರಿಯುತ್ತಿವೆ. ಇವೆರಡೂ ಇಲ್ಲವಾದಲ್ಲಿ ಕೊಳ್ಳಗಳಾದರೂ ಇರಲೇಬೇಕು. ಜಲಸಂಸ್ಕೃತಿ, ಮಾತೃಮೂಲ ಪರಂಪರೆಗೆ ಸೇರಿದೆ. ಅದಕ್ಕಾಗಿ ರೇಣುಕಾ ಪರಂಪರೆಗೆ ಸೇರಿದವರು ಮಾತೃಮೂಲ ಸಂಸ್ಕೃತಿಯ ಪಳೆಯುಳಿಕೆಗಳು. ಮುತ್ತುಕಟ್ಟಿಸಿಕೊಳ್ಳುವ ಇವರು ಪುರುಷ ಸ್ಪರ್ಶಕ್ಕೆ ಒಳಗಾದ ತಾಳಿ ಮತ್ತು ಕರಿಮಣಿಯನ್ನು ಹಾಕಿಕೊಳ್ಳುವುದಿಲ್ಲ. ಇತ್ತೀಚಿನ ಬಸವಿಯರು ಮುತ್ತಿನ ಜೊತೆ ತಾಳಿಯನ್ನು ಕಟ್ಟಿಕೊಳ್ಳುತ್ತಾರೆ. ಆದರೆ ಅದು ಮೂಲದಲ್ಲಿ ಹಾಗಿರಲಿಲ್ಲ.

ಮಾಧ್ವರಲ್ಲಿಯೂ ಹೆಣ್ಣುಗಂಡಿಗೆ ಇಬ್ಬರಿಗೂ ಮುದ್ರೆ ಹಾಕುವ ಸಂಪ್ರದಾಯ ಇದೆ. ಪುರುಷರಿಗೆ ಎದೆಯ ಮೇಲೆರಡು, ಎರಡೂ ತೋಳುಗಳು ಹಾಗೂ ಹಣೆಯ ಮೇಲೆ ಗಟ್ಟಿಮುದ್ರೆಯನ್ನು ಹಾಕುತ್ತಾರೆ. ಮಹಿಳೆಯರಿಗೆ ಎರಡೂ ಒಳಮುಂಗೈಗಳಿಗೆ ಹಾಕುತ್ತಾರೆ. ಪವಿತ್ರೀಕರಣದ ಸಂಕೇತವೆಂದು ಭಾವಿಸುತ್ತಾರೆ.

ಮಾಧ್ವಸಂಪ್ರದಾಯ ಹನುಮನಿಂದ ಪ್ರಾರಂಭವಾಗುತ್ತದೆ. ಹನುಮನ ಅವತಾರವೇ ಭೀಮ, ಭೀಮನ ನಂತರ ಬರುವವನೇ ಮಾಧ್ವ. ತಮಿಳುನಾಡಿನ ಶ್ರೀರಂಗಂಲ್ಲಿದ್ದ ರಾಮಾನುಜಾಚಾರ್ಯರು ತಿರುಪತಿಗೆ ಹೆಚ್ಚಿನ ಪ್ರಚಾರವನ್ನು ನೀಡಿದರು. ಚೋಳ, ಹೊಯ್ಸಳರ ಅವಧಿಯ ನಂತರ ವಿಜಯನಗರ ಆಳ್ವಿಕೆ ಬರುತ್ತದೆ. ಹೊಯ್ಸಳರ ಅವಧಿಯಲ್ಲಿ ರಾಮಾನುಜಚಾರ್ಯರು ಕರ್ನಾಟಕದ ಮೇಲುಕೋಟೆಗೆ ಬರುತ್ತಾರೆ. ವಿಜಯನಗರ ಪರಂಪರೆಯಲ್ಲಿ ಮೊದಲು ಶೈವ ಅರಸರಿದ್ದರು. ಸಾಳ್ವನರಸಿಂಗನಿಂದಲೇ ವೈಷ್ಣವರ ಆಳ್ವಿಕೆ ಪ್ರಾರಂಭವಾಗುತ್ತದೆ. ಕೃಷ್ಣದೇವರಾಯರ ಅವಧಿಯಲ್ಲಿ ವ್ಯಾಸರಾಯರು ಬರುತ್ತಾರೆ. ವ್ಯಾಸರಾಯರು ಆಂಜನೇಯನಿಗೆ ಹೆಚ್ಚು ಮಹತ್ವವನ್ನು ಕೊಡುತ್ತಾರೆ. ಇದರಿಂದಾಗಿ ಕೃಷ್ಣದೇವರಾಯರು ತಿರುಪತಿ ಪ್ರಭಾವಕ್ಕೆ ಒಳಗಾದಂತೆ ಆಂಜನೇಯನ ಪ್ರಭಾವಕ್ಕೂ ಒಳಗಾಗುತ್ತಾರೆ. ವ್ಯಾಸರಾಯರು ಸ್ಥಾಪಿಸಿದ ಆಂಜನೇಯ ಮೂರ್ತಿಗಳು ವಿಶಿಷ್ಟವಾಗಿವೆ. ಕರ್ನಾಟಕದಲ್ಲಿ ಹತ್ತನೆಯ ಶತಮಾನದ ಅವಧಿಯಲ್ಲಿಯೇ ಕಂಬದಲ್ಲಿ ಕೆತ್ತಿದ ಆಂಜನೆಯ ಚಿತ್ರಗಳಿದ್ದರೂ, ಅದಕ್ಕೆ ಒಂದು ಸ್ವತಂತ್ರ ಅಸ್ತಿತ್ವ ಬಂದುದು ಕೃಷ್ಣದೇವರಾಯರ ಅವಧಿಯಲ್ಲಿಯೆ(೧೫೦೦) ಸುಮಾರು ಏಳೂನೂರಕ್ಕೂ ಹೆಚ್ಚು ಆಂಜನೆಯ ದೇವಸ್ಥಾನಗಳನ್ನು ಅವನು ಕಟ್ಟಿಸಿದನೆಂಬ ಪ್ರತೀತಿಯಿದೆ. ಈ ಎಲ್ಲಾ ದೇವಾಲಯಗಳಿಗೆ ಬಸವಿ ಬಿಡುವ ಸಂಪ್ರದಾಯ ಪ್ರಾರಂಭವಾಯಿತು. ಹನುಮ ಪರಂಪರೆಗೆ ಸೇರಿದ ಬಸವಿಯರಿಗೆ ಮುದ್ರೆ ಹಾಕಲಾಗುತ್ತದೆ. ಆದರೆ ಮಾಧ್ವ ಮಹಿಳೆಯರಿಗೆ ಹಾಕಿದಂತಲ್ಲ. ಬಸವಿಯರಿಗೆ ಎದೆಯ ಮೇಲ್ಭಾಗಗಳಿಗೆ ಹಾಕುತ್ತಾರೆ.

ಮುದ್ರೆಯ ಅಗ್ನಿ ಸ್ಪರ್ಶದಿಂದ ಪವಿತ್ರರಾಗುವರೆಂಬ ನಂಬಿಕೆ ಅವರಲ್ಲಿ ಇದೆ. ಅಗ್ನಿ ವೈದಿಕರಿಗೆ ಶ್ರೇಷ್ಠವಾದುದಾಗಿದೆ. ಅದು ಪಿತೃಮಾನ ಪರಂಪರೆಗೆ ಸೇರಿದೆ. ಧರ್ಮ ಪ್ರಚಾರ ಉದ್ದೇಶ ಮತ್ತು ಪುರುಷಶಾಹಿ ಸಂಸ್ಕೃತಿಯ ಸ್ವಾರ್ಥತೆಗಳೆರಡೂ ಮುದ್ರೆ ಬಸವಿ ಸಂಪ್ರದಾಯದಲ್ಲಿದೆ.

ಬಸವಿ ಬಿಡುವುದಕ್ಕೆ ಹೊರಿ ಹೊರಿಸುವುದು, ಮನೆಗೆ ಬಿಡುವುದು, ದೇವರಿಗೆ ಬಿಡುವುದು, ದೇವರ ಹೊರಿಸುವುದು, ದೇವರ ಬಿರುದಾವಳಿ ಹೊರುವುದು ಮೊದಲಾಗಿ ಹೇಳುವರು.

ಮ್ಯಾಸನಾಯಕರು, ಊರನಾಯಕರು, ಗಂಗಮತದವರು, ಹರಿಜನರು, ತಳವಾರರು ಈ ಜನಾಂಗಗಳಲ್ಲಷ್ಟೇ 'ಬಸವಿ' ಬಿಡುವ ಸಂಪ್ರದಾಯವಿದೆ. ಹೆಚ್ಚಾಗಿ ನಾಯಕ ಹೆಣ್ಣುಮಕ್ಕಳನ್ನು ಬಸವಿಯಾಗಿಸುವ ಸಂಪ್ರದಾಯ ಬಳ್ಳಾರಿ ಜಿಲ್ಲೆಯಲ್ಲಿದ್ದಷ್ಟು ಪ್ರಬಲವಾಗಿ ಉತ್ತರ ಕರ್ನಾಟಕದ ಉಳಿದ ಜಿಲ್ಲೆಗಳಲ್ಲಿ ಇಲ್ಲ. ಮರಾಠ ಮಹಿಳೆಯರನ್ನು ಬಸವಿ ಬಿಡುವ ಆಚರಣೆ ಚಿಂದಲಿ, ಎಡೂರ ಮೊದಲಾದ ಭಾಗಗಳಲ್ಲಿದೆ. ಇವನ್ನು ಹೊರತುಪಡಿಸಿದರೆ ಬೇರೆಲ್ಲಿಯೂ ಮರಾಠ ಮಹಿಳೆಯರು ಬಸವಿಯರಾಗಿರುವ ಉದಾಹರಣೆ ಸಿಕ್ಕುವುದು ಬಹಳ ವಿರಳ. ವಿಜಾಪೂರ, ಬೆಳಗಾಂವ, ಧಾರವಾಡ, ಬಳ್ಳಾರಿ, ದಾವಣಗೆರೆ ಈ ಎಲ್ಲ ಜಿಲ್ಲೆಗಳಲ್ಲಿ ಹರಿಜನ, ಗಂಗಮತ, ತಳವಾರ ಈ ಸಂಪ್ರದಾಯಕ್ಕೊಳಪಡುವುದು ಸಾಮಾನ್ಯವಾಗಿದೆ.

ರೇಣುಕೆ ಪರಂಪರೆಗೆ ಸೇರಿದವಳು ಮುತ್ತುಕಟ್ಟಿಸಿಕೊಂಡರೆ, ಹನುಮ ಪರಂಪರೆಗೆ ಸೇರಿದವಳು ಮುದ್ರೆ ಹಾಕಿಸಿಕೊಳ್ಳುವಳು. ಗಟ್ಟಿಮುದ್ರೆ ಹಾಕಿಸಿಕೊಂಡವರನ್ನು ಮೂರು ಮುದ್ರೆ ಸೂಳೇರು'ಎಂದು ಕರೆಯುವ ವಾಡಿಕೆ ಜನಸಾಮಾನ್ಯರಲ್ಲಿತ್ತು. ವಿಜಾಪೂರ, ಬೆಳಗಾಂ, ಧಾರವಾಡ ಜಿಲ್ಲೆಗೆ ಸೇರಿದವರು ಹೆಚ್ಚಾಗಿ ಮುತ್ತು ಕಟ್ಟಿಸಿಕೊಂಡರೆ, ಬಳ್ಳಾರಿ ಹಾಗೂ ದಾವಣಗೆರೆ ಜಿಲ್ಲೆಗೆ ಸೇರಿದ ಬಹುಪಾಲು ಬಸವಿಯರು ಮುದ್ರೆ ಹಾಕಿಸಿಕೊಳ್ಳುವರು. ಮುದ್ರೆಗಳಲ್ಲಿಯೇ ಎರಡು ವಿಷಯಗಳಿವೆ. ಗಟ್ಟಿಮುದ್ರೆ ° ಹೂಮುದ್ರೆ°. ಗಟ್ಟಿಮುದ್ರೆ ಪರಂಪರೆ ಹೂಮುದ್ರೆಗಿಂತಲೂ ಹೆಚ್ಚು ಪ್ರಾಚೀನವಾದುದಾಗಿರಬೇಕು. ಯಾಕೆಂದರೆ ಉಗ್ರ ಆಚರಣೆಗಳು ನಾಗರೀಕತೆಗೆ ಒಳಗಾದಂತೆಲ್ಲಾ ಸೌಮ್ಯಗೊಳ್ಳುತ್ತಾ ಹೋಗುತ್ತವೆ.

ನಾನು ಸಂದರ್ಶಿಸಿದ ಗಟ್ಟಿಮುದ್ರೆ ಹಾಕಿಸಿಕೊಂಡ ಮಹಿಳೆಯರೆಲ್ಲಾ ಅದನ್ನು ವೈಭವೀಕರಿಸಿಯೇ ಹೇಳಿದರು. ಅದರ ಆಳದೊಳಗಿನ ವಿಕಾರತೆ ಕ್ರೂರತೆ ಅವರಿಗರ್ಥ ವಾಗಿತ್ತೋ ಇಲ್ಲವೊ! ಕಮಲಾಪುರದ ಲಕ್ಷ್ಮಿ(ಹೆಸರು ಬದಲಾಯಿಸಲಾಗಿದೆ) ಬಹಳ ಸೂಕ್ಷ್ಮವಾಗಿ ಪ್ರತಿಕ್ರಿಯಿಸಿದಳು. 'ಪಂಚಲೋಹದ ಮುದ್ರೆಗಳನ್ನು ನಮಗೆ ಹಾಕಿದರೆ ನಾವು ಬಸವಿಯರಾದಂತೆ. ಶಂಖ, ಚಕ್ರ, ಪದ್ಮ ಹೀಗೆ ಮೂರು ಮುದ್ರೆಗಳಿರುತ್ತವೆ. ಮುದ್ರೆಗಳನ್ನು ಹರೆಯದ ಹುಡುಗಿಗೆ ಮಾತ್ರ ಹಾಕುವರು. ನನಗಾಗ ಹದಿನಾರು ವರ್ಷ

ವಯಸ್ಸು. ವಯಸ್ಸಿಗನುಗುಣವಾಗಿ ನನ್ನಲ್ಲಿ ದೈಹಿಕ ಬದಲಾವಣೆಗಳಾಗಿದ್ದವು. ಏಕಾಏಕಿ ಮನೆಯಲ್ಲಿ ನನ್ನನ್ನು ಬಸವಿ ಇಡುವ ಯೋಜನೆಯನ್ನು ಹಾಕಿಕೊಂಡರು. ಒಂದು ಮಹೂರ್ತವನ್ನು ನಿಗದಿಪಡಿಸಿ ತಲೆ ಸ್ನಾನ ಮಾಡಿಸಿ ಹನುಮಂತ ದೇವರ ದೇವಸ್ಥಾನಕ್ಕೆ ಕರೆದುಕೊಂಡು ಹೋದರು. ಆ ಗುಡಿಯ ಪೂಜಾರಿ ನಮ್ಮ ಜಾತಿಯವನೇ(ನಾಯಕ). ಮಡಿ ಸೀರೆಯನ್ನು ಉಡಿಸಿದ ನನಗೆ ಎಲೆ ಅಡಿಕೆಯನ್ನಿಟ್ಟು ಏನೇನೋ ಶಾಸ್ತ್ರಗಳನ್ನು ಮಾಡಿದರು. ದೇವರೆದುರಾಗಿ ನನ್ನನ್ನು ಕೂಡಿಸಿದ್ದರು. ನನಗೆ ಎದುರಾಗಿ ಪೂಜಾರಿ ಕುಳಿತಿದ್ದನು. ಮುದ್ರೆ ಹಾಕಲು ಮೈಮೇಲಿನ ಜಂಪರಿನ ಗುಂಡಿಗಳನ್ನು ಬಿಚ್ಚಲು ಹೇಳಿದರು. ನಾನು ಹೌಹಾರಿದೆ. ಭೂಮಿ ತಾಯಿ ನನ್ನನ್ನೇಕೆ ನುಂಗಿ ಪುಣ್ಯಕಟ್ಟಿಕೊಳ್ಳುತ್ತಿಲ್ಲ ಎನಿಸಿತು. ಅಪಮಾನದಿಂದ ಕುಗ್ಗಿ ಹೋದ ನನ್ನ ದೊಡ್ಡ ದೇಹ ಹಿಡಿಯಷ್ಟಾಗಿತ್ತು. ನನ್ನ ಕಣ್ಣೀರಿಗೇನಾದರೂ ಶಕ್ತಿ ಬಂದಿದ್ದರೆ ನಮ್ಮವ್ವ, ಅಪ್ಪ, ಪೂಜಾರಿ, ಅದಕ್ಕೆ ಕಾರಣವಾದ ಈ ಸಮಾಜ ಎಲ್ಲವೂ ಹೇಳಹೆಸರಿಲ್ಲದಂತೆ ಕೊಚ್ಚಿ ಹೋಗಬೇಕಾಗಿತ್ತು. ಹೆತ್ತ ತಾಯಿಯಿಂದಲೂ ಬಚ್ಚಿಟ್ಟುಕೊಂಡ ನನ್ನ ದೇಹ ಅಂದು ದೇವಾಲಯದಲ್ಲಿ ಸಾರ್ವಜನಿಕವಾಗಿ ಬೆತ್ತಲುಗೊಂಡಿತ್ತು. ನಮ್ಮ ಮುಂದಿನ ಬದುಕಿಗೆ ಇದು ರಂಗತಾಲೀಮಾಗಿರಬೇಕು. ಪೂಜಾರಿಯನ್ನೊಳಗೊಂಡಂತೆ ಅಲ್ಲಿದ್ದವರ ಮುಖವೆಲ್ಲ ಚಕ್ಕನೇ ವಿದ್ಯುದ್ದೀಪದಂತೆ ಹತ್ತಿಕೊಂಡವು. ಎದುರುಗಡೆ ಕೆಂಡದಲ್ಲಿ ಕಾದು ಕೆಂಡದಂತೆಯೇ ನಿಗಿನಿಗಿಸುತ್ತಿದ್ದ ಮುದ್ರೆಗಳಿದ್ದವು. ಅದನ್ನು ನೋಡಿ ಮುಂದಿನದನ್ನು ನೆನಪಿಸಿಕೊಂಡೆ ತೊಡೆ ಸಂದಿಯಲ್ಲಿ ನಡುಕವುಂಟಾಗಿ ಅಲ್ಲಿಯೇ ಸಣ್ಣಗೆ ಉಚ್ಚೆಹೋಯಿತು. ಅದನ್ನು ಹೇಳುವ ಸ್ಥಿತಿಯಲ್ಲಿ ನಾನು ಇರಲಿಲ್ಲ. ಕೇಳುವ ಸ್ಥಿತಿಯಲ್ಲಿ ಅವರು ಇರಲಿಲ್ಲ. ವೀಳ್ಯೆದೆಲೆಯನ್ನು ಎದೆಯ ಮೇಲ್ಭಾಗದ ಎರಡೂ ಬದಿಗೆ ಇಟ್ಟು ಅವುಗಳ ಮೇಲೆ ಮುದ್ರೆಗಳನ್ನು ಒತ್ತಿದರು. ಎಡಭಾಗಕ್ಕೆ ಶಂಖ, ಬಲಭಾಗಕ್ಕೆ ಚಕ್ರ ಇತ್ತು. ಅದೇ ಕ್ಷಣದಲ್ಲಿಯೇ ಬಲಗೈ ತೋಳ ಮೇಲೆ ಪದ್ಮವನ್ನು ಹಾಕಿದರು. ಅಪಮಾನ ಹಾಗೂ ನೋವುಗಳನ್ನು ತಾಳಿಕೊಳ್ಳಲಾರದ ನಾನು ಯಮನ ಮನೆಗೆ ಮುಟ್ಟುವಂತೆ ಚೀರಿದೆನು. ನನ್ನ ತಾಯಿ ಗಾಭರಿಗೊಂಡಳು. ಪೂಜಾರಿ ತಕ್ಷಣ ನನ್ನ ಬಾಯಲ್ಲಿ ಬಾಳೆಹಣ್ಣನ್ನು ಇಟ್ಟನು. ಸಾವು ನೋವಿನ ಸಂಕಟದಲ್ಲಿ ಅದನ್ನು ಕಚ್ಚಿ ಬೀಸಾಕಿದೆ. ನನ್ನವ್ವ ಏನೋ ಅಘಟಿತ ಘಟನೆ ಸಂಭವಿಸಿದಂತೆ ಎದೆ ಎದೆ ಹೊಡೆದುಕೊಂಡು ಅಳಲು ಪ್ರಾರಂಭಿಸಿದಳು. ಮುದ್ರೆ ಹಾಕಿಸಿಕೊಳ್ಳುವಾಗ ಹಾಗೂ ಗಾಯ ಮಾಯುವವರೆಗೂ ನೋವು ಎಂದು ನರಳಬಾರದಂತೆ. ಚಾರಿತ್ರಹೀನರಿಗೆ ಮಾತ್ರ ನೋವಾಗುವುದಂತೆ, ಗಾಯಕ್ಕೆ ಹುಳುಬೀಳು ವುದಂತೆ. ಈ ನಂಬಿಕೆ ಪ್ರಚಲಿತದಲ್ಲಿದ್ದುದರಿಂದಲೇ ಗಟ್ಟಿಮುದ್ರೆ ಹಾಕಿಸಿಕೊಂಡರಾರೂ ನೋವಾಗಿದೆ ಎಂದು ಹೇಳುವುದಿಲ್ಲ. ಅದು ಹ್ಯಾಂಗ ನೋವಾಗುವುದಿಲ್ಲ ನೀವೇ ವಿಚಾರಿಸಿ. ಒಂದು ಸಣ್ಣ ಇರುವಿ ಕಡದ್ರ ಅವ್ವಾ ಅಂತ ಚೀರತೀವಿ ಕಾಸಿ ಬೆಂಕಿ ಇಟ್ರೆ ನೋವಾಗಂಗಿಲ್ಲೇನು? ಮುದ್ರಿ ಹಾಕಿದ ಮೇಲೆ ಹನುಮದಾಳಿ ಕಟ್ಟಿದರು. ತಾಳಿ ಮೇಲೆ

ಹನುಮಂತನ ಮುದ್ರೆ ಇರುತ್ತದೆ. ನಮ್ಮದು ಒಂಟಿ ತಾಳಿ. ಗಂಡುಳ್ಳವರ್ಹಂಗ ಎರಡ ತಾಳಿ ಇರುವುದಿಲ್ಲ" ಇಷ್ಟು ಹೇಳಿದ ಅವಳ ಗಂಟಲು ನರಗಳು ಉಬ್ಬಿನಿಂತಿದ್ದವು. ಕಣ್ಣುಗಳು ತೇವವಾಗಿದ್ದವು. ಅವಳ ದುಃಖದ ಆಳ ನನಗೆ ನಿಲುಕಿತ್ತು. ಬಾಯಲ್ಲಿ ಸೆರಗನ್ನು ಉಂಡೆಯಾಗಿಸಿಕೊಂಡ ಅವಳು ಒಳಗಿನ ರೂಮಿನೊಳಗೆ ಓಡಿಹೋದಳು. ಅವಳನ್ನು ಮರಳಿ ಕರೆದು ಸಂತೈಸುವ ಚೈತನ್ಯ ನನ್ನಲ್ಲಿ ಉಡುಗಿ ಹೋಗಿತ್ತು.

ಮರಿಯಮ್ಮನ ಹಳ್ಳಿಯಲ್ಲಿಯ ಭೀಮವ್ವ ಹೂಮುದ್ರೆ ಹಾಕಿಸಿಕೊಂಡವಳು. ಅದನ್ನ ಅವಳು ಬೇಸರದಿಂದಲೇ ನೆನಪಿಸಿಕೊಂಡಳು. "ನನಗ ಹೂಮುದ್ರೆ ಹಾಕಿದಾಗ ಹದಿನೈದು-ಹದಿನಾರು ವರ್ಷ ವಯಸ್ಸಾಗಿತ್ತು. ಗಟ್ಟಿಮುದ್ರಿ ಹಾಕಿಸಿಕೊಂಡ್ರ ಬಾಳs ನೇಮನಿತ್ಯದಿಂದ ನಡಕೋಬೇಕಾಗತೈತಿ. ಮದಲಿನಿಂದ ಚರಿತ್ರೆಯನ್ನು ಸುದ್ದ ಇಟಕೋಬೇಕಾಗತೈತಿ. ಅದೆಲ್ಲ ಕಷ್ಟ. ನಾನು ಹನುಮದೇವರ ಬಿರುದಾವಳಿ ಹೊತ್ತಕೊಂಡೇನಿ. ಅವತ್ತ ಹನುಮಂತ ದೇವರ ಗುಡಿಗೆ ಕರಕೊಂಡು ಹೋದ್ರು. ಅಂವ ನನಗ ಹೊಸಾ ಬಟ್ಟಿ ಉಡಿಸಿದ್ರು. ಪೂಜಾರೆಪ್ಪ ಬಂದು ಅದೇನೇನೂ ಎಲಿ ಶಾಸ್ತ್ರ ಮಾಡಿದಾ. ಅಮ್ಯಾಲಿ ಎದಿಭಾಗವನ್ನು ಬೆತ್ತಲು ಮಾಡಬೇಕಂತ ಹೇಳಿದರು. ನನ್ನ ಜೀವಾ ಬಾಯಾಗ ಬಂದ್ಹಂಗ ಆಯ್ತು. ಆದ್ರೂ ತಗೀದs ಬ್ಯಾರೆ ದಾರಿ ಇರ್ಲಿಲ್ಲ. ಎರ್ಡು ಮಲ್ಲಿಗಿ ಹೂವ್ನ ದೇವರ ಮುಂದ್ಲ ದೀಪಕ್ಕ ಹಿಡ್ದು ಒಮ್ಮಾಕ ಎರ್ಡೂ ಎದೆ ಮ್ಯಾಗ ಒತ್ತಿದಾ. ಹೀಂಗ ಆದ್ರ ಹೂ ಮುದ್ರಿ ಹಾಕಿದ್ಹಾಂಗ. ಅದಾದಮ್ಯಾಲಿ ಹನುಮದಾಳಿ ಕಟ್ಟಿದಾ. ಇಷ್ಟಾದ್ರ ನಾವು ಬಸವೇರು ಆದ್ಹಂಗ" ಎಂದು ಹೇಳಿ ಎದುರಿಗಿನ ಗೋಡೆಯನ್ನು ದಿಟ್ಟಿಸುತ್ತ ಕುಳಿತಳು. ಅವರವರ ಮನೆತನದ ಸಂಪ್ರದಾಯಕ್ಕನುಗುಣವಾಗಿ ಕೆಲವರು ಮುದ್ರೆ ಹಾಕಿಸಿಕೊಂಡರೆ, ಮತ್ತೆ ಹಲವರು ಮುತ್ತು ಕಟ್ಟಿಸಿಕೊಳ್ಳುತ್ತಾರೆ. ಇಂಥ ಜಾತಿಯವರೇ ಮುದ್ರೆ ಹಾಕಿಸಿಕೊಳ್ಳಬೇಕು, ಇಂಥ ಕುಲದವರೇ ಮುತ್ತು ಕಟ್ಟಿಸಿಕೊಳ್ಳಬೇಕೆಂಬ ನಿರ್ಬಂಧವೇನಿಲ್ಲ. ಪುರುಷನ ಲೈಂಗಿಕ ಸ್ವೇಚ್ಛಾಚಾರದ ಅಧಿಕಾರಕ್ಕೆ ಈ ಮುದ್ರೆಗಳು ಜೀವಂತ ಸಾಕ್ಷಿಗಳು. ಜೀತದಾಳಿನ ಕಾಲುಗಳಿಗೂ ಮುದ್ರೆ ಹಾಕುತ್ತಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಮೇಲ್ವರ್ಗದ ಸ್ವಾರ್ಥಕ್ಕೆ ಮುದ್ರೆಯೊತ್ತಿಸಿಕೊಂಡ ಗಂಡು ಜೀತದಾಳು ವರ್ಗ ಜಾತಿ ನೆಲೆಯಲ್ಲಿ ಒಂದು ರೀತಿಯ ಶೋಷಣೆಗೆ ಒಳಪಟ್ಟರೆ ಮುದ್ರೆಯೊತ್ತಿಸಿಕೊಂಡ ಈ ಬಗೆಯ ಲೈಂಗಿಕದಾಸಿಯರು ಜಾತಿ, ವರ್ಗ ಹಾಗೂ ಲಿಂಗ ಕಾರಣದಿಂದಾಗಿ ಅವರಿಗಿಂತ ಭೀಕರ ಶೋಷಣೆಗೆ ಒಳಪಟ್ಟರು.

ರೇಣುಕೆ ಸಂಪ್ರದಾಯದಲ್ಲಿ ಮುದ್ರೆ ಹಾಕಿಸಿಕೊಳ್ಳುವುದಿಲ್ಲ. ಅವರು ಮುತ್ತು ಕಟ್ಟಿಸಿಕೊಳ್ಳುವ ಸಾಂಸ್ಕೃತಿಕ ಪ್ರಕ್ರಿಯೆ ಮುದ್ರೆ ಹಾಕಿಸಿಕೊಳ್ಳುವವರಿಗಿಂತಲೂ ಭಿನ್ನವಾಗಿದೆ. ಹುನಗುಂದ ಭೀಮವ್ವ ಎಲ್ಲವನ್ನೂ ಸವಿವರವಾಗಿ ಮಾನಸಿಕ ಸ್ಥಿಮಿತತೆಯನ್ನು ಕಾಪಾಡಿಕೊಂಡು ಹೇಳಿದಳು. "ಕರೀ ಕಂಬಳಿ ಹಾಸ್ತಾರ. ಸ್ಯಾಸಕ್ಕಿ ಹೊಯ್ತಾರ'. ಗಂಡಿನ

ಜತೆ ಮದ್ವಿಯಾಗುವರ್ಗಿ ಇಬ್ಬರು ಕುಂಡ್ರುವ್ಹಂಗ ಎರ್ಡ ಚೌಕ ಸ್ಯಾಸಕಿ ಹಾಕ್ತಾರ. ಆದ್ರ ನಮಗ ಹಂಗಲ್ಲ ಒಂದ ಚೌಕಾ ಮಾತ್ರ ಹಾಕ್ತಾರ. ನಮಗ ಸಂವದತ್ತಿಗಿ ಹೋಗಾಕ ಆಗ್ಲಿಲ್ಲ. ಹೀಂಗಾಗಿ ನಮ್ಮ ಕಾರ್ಯಾ ಮನಿಯಾಗ ಮಾಡಿದ್ರು. ಸೂಳೇರ ಮದ್ವಿಗಿ ಗಂಡುಳ್ಳವರು ಯಾಕ ಬರ್ತಾರ? ಬಸವೇರ ಸೇರಿರ್ತಾರ. ಏನಿಲ್ಲಂದ್ರೂ ಐದ ಮಂದಿ ಬಸವೇರು ಇರಾಕಬೇಕು. ತೆಲಿಸ್ನಾನಾ ಮಾಡಿಸ್ತಾರ, ಹೊಸಸೀರಿ ಉಡಸ್ತಾರ. ಎರ್ಡ ಕೆಂಪ ಮುತ್ತು ಮೂರು ಬಿಳಿ ಮುತ್ತು ದಾರದಾಗ ಹಾಕಿ ಪೋಣಸ್ತಾರ. ಅದು ನಮಗ ತಾಳಿ ಇದ್ಹಂಗ. ಪೂಜಾರಪ್ಪ ಏನೇನೋ ಶಾಸ್ತ್ರಾ ಮಾಡಿಸಿ ಹಿರಿ ಬಸವಿ ಕಡಿಯಿಂದ ಮುತ್ತ ಕಟ್ಟಿಸ್ತಾನ. ನನ್ನ ಕಾರ್ಯಕ ಬಂದ ಪೂಜಾರಿ ಕುರುಬರವನು. ಒಮ್ಮೆ ಮುತ್ತು ಕಟ್ಟಿಸಿಕೊಂಡ ಮ್ಯಾಕ ನಮಗ ಮದ್ವಿ ಆಗಾಕ ಬರಂಗಿಲ್ಲ. ನಮ್ದು ದೇವಿ ಜೊತೆ ಮದ್ವಿ ನಡೆದು ಹೋಗಿರ್ತದ. ನಮ್ಮವ್ವ ಅವ್ನಿಗೆ ದಕ್ಷಿಣ ಉಲ್ಪಿ ಇಟ್ಟುಕೊಟ್ಟಳು. ಅವನು ಮುತ್ತು ಕಟ್ಟಿದ ಮ್ಯಾಕ ಪಡ್ನಲಗಿ ಕೊಟ್ಟು ನಮ್ಮಿಂದ ಭಾಷಾ ತಗೋತಾನ. ಬಾಲಬ್ರಾಷಿ ಮಾತನಾಡಬಾರದು. ಯ್ಯಾರ್ಯಾರ ಸತ್ರ, ಕೆಟ್ರ ಉಣಬಾರ್ದು. ಮೆಟ್ಟ ಮುಟ್ಟಬಾರದು. ನಿನ್ನ ಮನಿಗಿ ಯಾರಾದ್ರೂ ಏನಾರ ಕೇಳಕೊಂಡು ಬಂದ್ರೂ ಇಲ್ಲ ಅನ್ನಬಾರ್ದು. ಹೀಂಗ ಬಾಳಃ ನೇಮ ನಿತ್ಯ ಹೇಳ್ತಾರ. ಅವರು ಒಂದೊಂದು ಮಾತಿಗೂ ಭಾಷ್ಯಾ ಇಸಗೋತಾರು. ನಾವು ಆಯ್ತಿರಿ ಅಂತ ಹೇಳಿ ಭಾಷ್ಯಾ ಕೊಡ್ತೀವಿ. ಆಮ್ಯಾಲಿ ಐದವಾರ ಊರಾಡಾಕ ಹೋಗಬೇಕು. ಐದಿನಿ ವಾರ ಮುತ್ತ ಕಟ್ಟಿಸಿದ ದಿವಸದ್ಹಂಗ ಸಿಹಿ ಅಡಗಿ, ಮಾಂಸದಡಿಗಿ ಮಾಡ್ತಾರ. ಒಂದು ತಟ್ಯಾಗ ಮಾಡಿದ ಅಡಿಗೀನು ಬಡಸ್ತಾರ, ಅದು ಮುಖ್ಯ ಎಡಿ. ಅದನ್ನ ಬಸವೇರು ಬಿಟ್ರೆ ಮತ್ಯಾರು ಮುಟ್ಟಂಗಿಲ್ಲ. ಅದನ್ನ ಐದ ಮಂದಿ ಹಿರೆ ಬಸವೇರ್ಗಿ ಎಡಿ ಇಡ್ತಾರ. ಅದನ್ನ ಬಸವೇರು ಮೊದಲು ಉಂತಾರ. ಆಮ್ಯಾಕ ಅವರ ಜೊತಿ ಅದೇ ತಟ್ಯಾಗ ಮುತ್ತು ಕಟ್ಟಿಸಿಕೊಂಡಾಕಿ ಉಣಬೇಕು. ತಟ್ಟಿ ಸುತ್ತ ನಾವೆಲ್ಲಾರು ಗುಂಡಕ ಕುಂತು ಊಟ ಮಾಡ್ತೀವಿ. ಅಂದಿಗೆ ನಾವು ಬಸವೇರ ಕುಲದಾಗ ಬಿದ್ಹಂಗ.ಇದು ನಮಗ ಬಸವೇರ್ಗೆ ಮುತ್ತು ಕಟ್ಟಿಸಿಕೊಂಡಷ್ಟು ಮಹತ್ವದ ಕಾರ್ಯ. ಇಷ್ಟೆಲ್ಲ ಆಗೋತನಕ ನಾವು ಯಾವ ಗಂಡಸರನ್ನೂ ಕೂಡಂಗಿಲ್ಲ'. ಈ ಆಚರಣೆಯನ್ನು ಬಸವಿ ವ್ಯವಸ್ಥೆಯನ್ನು ಅವಳು ಸಹಜವಾಗಿ ಸ್ವೀಕರಿಸಿದ್ದಳು. ಆದರೆ ಅವಳ ದೃಷ್ಟಿಯಲ್ಲಿ ತಪ್ಪಲ್ಲ. ಅದು ಆಚರಣೆ ಅಷ್ಟೆ.

ಗಂಡನಿದ್ದೂ ಕೆಲವರು ಮುತ್ತು ಕಟ್ಟಿಸಿಕೊಳ್ಳುತ್ತಾರೆ. ಆದರೆ ಅವರು ಬಸವಿಯರಲ್ಲ. ಅವರು ಲೌಕಿಕ ಪಂಥಕ್ಕೆ ಸೇರಿದವರಾಗಿರುತ್ತಾರೆ. ದೇವಿ ಕಾಟದಿಂದ ಮುತ್ತು ಕಟ್ಟಿಸಿಕೊಳ್ಳುತ್ತಾರೆ. ಅದಕ್ಕೆ ಕಾಚಾಮುತ್ತು ಎನ್ನುತ್ತಾರೆ. ಮತ್ತೆ ಕೆಲವರು ಕುಲ ಪರಂಪರೆ ಯಿಂದಾಗಿ ಕಟ್ಟಿಸಿಕೊಳ್ಳುವರು. ಅಂತಹ ಮನೆತನಗಳಲ್ಲಿ ದೇವಿ ಮುತ್ತನ್ನು ಹಿರಿ ಸೊಸೆಯಾದವಳು ಕಟ್ಟಿಕೊಳ್ಳಲೇಬೇಕು. ಅದು ಅವರ ಮನೆತನದಲ್ಲಿ ತಲೆತಲಾಂತರದಿಂದ ಬಂದುದಾಗಿರುತ್ತದೆ. ಆದರೆ ಬಸವಿ ಪರಂಪರೆ ತಲೆಮಾರಿನಿಂದ ತಲೆಮಾರಿಗೆ

ಬಂದುದಾಗಿರುವುದಿಲ್ಲ. ಕಾಚಾಮುತ್ತಾಗಲೀ ತಲೆಮಾರಿನಿಂದ ಬಂದ ಮುತ್ತಾಗಲೀ ಹುಡುಗಿ ಗಂಡಿನೊಂದಿಗೆ ಮದುವೆಯಾದ ನಂತರವೇ ಕಟ್ಟಿಸಿಕೊಳ್ಳಬೇಕು. ಲಗ್ನದ ಪೂರ್ವದಲ್ಲಿ ಕಟ್ಟಿಸಿಕೊಂಡರೆ ಅವಳು ಬಸವಿಯಾಗುತ್ತಾಳೆ. ಬಸವಿಯರಿಗೆ ಕಟ್ಟುವ ಮುತ್ತನ್ನೇ ಅವರಿಗೂ ಕಟ್ಟುತ್ತಾರೆ. ಗಂಡನಿದ್ದವರು ಕಟ್ಟಿಕೊಂಡರೆ ಗರತಿಮುತ್ತಾಗುತ್ತದೆ. ಗಂಡನಿಲ್ಲದವರು ಕಟ್ಟಿಕೊಂಡರೆ ಸೂಳೇಮುತ್ತಾಗುತ್ತದೆ. ಕೆಂಪು-ಬಿಳಿ ಮುತ್ತುಗಳನ್ನು ಮಾತ್ರ ದಾರದಲ್ಲಿ ಪೋಣಿಸಿ ಕಟ್ಟಿಕೊಂಡಿದ್ದರೆ ಸೂಳೇ ಮುತ್ತು. ಕೆಂಪು ಬಿಳಿ ಮುತ್ತುಗಳ ಮಧ್ಯಮಧ್ಯದಲ್ಲಿ ಬೆಳ್ಳಿ ಇಲ್ಲವೇ ಬಂಗಾರದ ದೇವಿ ಪಾದ, ಮುಖ, ನಾಲಿಗಿ, ಮುಳ್ಳು ಮುಂತಾದವು ಗರತಿ ಮುತ್ತಿನಲ್ಲಿರುತ್ತವೆ. ಸೂಳೇ ಮುತ್ತು ಕಟ್ಟಿಸಿಕೊಂಡವರು ಈಗ ಮುತ್ತುಗಳ ಮಧ್ಯದಲ್ಲಿ ಇಂತಹವುಗಳನ್ನು ಹಾಕಿಕೊಳ್ಳುವುದು ಫ್ಯಾಶನ್ ಆಗಿಬಿಟ್ಟಿದೆ. ಇವರು ಕಟ್ಟಿಕೊಳ್ಳುವ ಮುತ್ತಿನಲ್ಲಿ ಎಂಜಲು ಮುತ್ತು, ಮೀಸಲು ಮುತ್ತು ಎಂದು ಎರಡು ಬಗೆಯಲ್ಲಿ ಇರುತ್ತವೆ. ಹೆಚ್ಚಿನವರು ಎಂಜಲು ಮುತ್ತನ್ನು ಕಟ್ಟಿಸಿಕೊಳ್ಳುತ್ತಾರೆ. ಇಂತಹವರು ಮಕ್ಕಳ ಅಥವಾ ಕುಟುಂಬದ ಇನ್ನಿತರ ಸದಸ್ಯರು ಬಿಟ್ಟ ಎಂಜಲನ್ನು ತಿನ್ನಬಹುದು. ಮಡಿವಂತಿಕೆಯನ್ನು ಕಟ್ಟುನಿಟ್ಟಾಗಿ ಅನುಸರಿಸುವಂತಿಲ್ಲ. ಮೀಸಲು ಮುತ್ತು ಕಟ್ಟಿಸಿಕೊಂಡಂತಹವರು ಕಟ್ಟುನಿಟ್ಟಿನಿಂದ ಇರಬೇಕಾಗುತ್ತದೆ.ಮೊದಲಲ್ಲಿ ಬಸವಿಯರು ಮೀಸಲು ಮುತ್ತನ್ನು ಕಟ್ಟಿಸಿಕೊಂಡರೆ, ಗಂಡುಳ್ಳವರು ಎಂಜಲು ಮುತ್ತನ್ನು ಕಟ್ಟಿಸಿಕೊಳ್ಳು ತ್ತಿದ್ದರು. ಬಸವಿಯರ ಅಲೌಕಿಕ ಬದುಕು ತೀರ ಲೌಕಿಕಕ್ಕಿಳಿದಾಗ ಅವರು ಕೂಡ ಎಂಜಲು ಮುತ್ತನ್ನು ಕಟ್ಟಿಕೊಳ್ಳಲು ಆರಂಭಿಸಿದರು. ಸೂಳೇಮುತ್ತು ಕಟ್ಟಿಸಿಕೊಂಡವರು ತಾವು ಮುಖ್ಯ ಜೋಗ ಪಂಥಕ್ಕೆ ಸೇರಿದವರೆಂದು ಹೇಳಿಕೊಳ್ಳುತ್ತಾರೆ.

ಬಸವಿ ಸಂಪ್ರದಾಯಕ್ಕೊಳಪಟ್ಟ ಅನೇಕರು ವೈವಾಹಿಕ ಚೌಕಟ್ಟನ್ನು ವಿರೋಧಿಸುತ್ತಾರೆ. ತಮ್ಮ ಬದುಕಿನ ಕ್ರಮದ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಮರಿಯಮ್ಮನಹಳ್ಳಿಯಲ್ಲಿ ಬಸವ್ವ(ಹೆಸರು ಬದಲಾಯಿಸಿಕೊಂಡಿದೆ) ಹೇಳಿದ ಮಾತುಗಳು ಅವರ ಬದುಕಿನ ಮತ್ತೊಂದು ಬಹುಮುಖ್ಯ ಆಯಾಮವನ್ನು ತೆರೆದು ತೋರಿತು. "ನಮ್ಮವ್ವಗ ನಾವು ಮೂರು ಮಂದಿ ಹೆಣ್ಣಮಕ್ಳ ಇದ್ವಿ. ನಮ್ಮವ್ವ ಗಂಡುಳ್ಯಾಕಿ ನಮ್ಮನ್ನ ಬಾಳs ಪ್ರೀತಿಯಿಂದ ಬೆಳಸಿದ್ಲು. ಆಗಿನ ಕಾಲಕ್ಕ 'ಸಂಬ್ಳ ಸಾಲಿ' ಅಂತ ಇತ್ತು. ಅವ್ರು ಸರ್ಕಾರದ ಮಾಸ್ತರರಲ್ಲ. ನಾವು ತಿಂಗಳಗಿ ಒಂದಿಷ್ಟು ಫೀಸ್ ಕೊಡತಿದ್ವಿ. ಅದs ಅವರಿಗಿ ಸಂಬಳ ಇದ್ದಂಗ. ತಿಂಗಳಗಿ ಒಂದು ರೂಪಾಯಿ, ಎರಡ ರೂಪಾಯಿ ಕೊಟ್ಟದ್ದು ನೆನಪು. ನಮ್ಮ ಗುಡಿಯಾಗ ಪಾಠಾ ಮಾಡತಿದ್ರು. ನಮ್ಮ ಕಾಲಕ್ಕ ಗುಡಿಗಳs ಸಾಲಿಗಳಿದ್ದಂಗ. ನಮಗೆ ಗದುಗಿನ ಭಾರತ, ಜೈಮಿನಿ ಭಾರತ ಓದಲು ಬರುತ್ತಿತ್ತು. ಅವುಗಳಲ್ಲಿಯ ಅನೇಕ ಭಾಗಗಳನ್ನು ಕಂಟಪಾಠದಿಂದಲೇ ಹೇಳುತ್ತಿದ್ದೆವು. ಇದ ನಮ್ಮವ್ವಗ ಬಾಳ ಹಿಗ್ಗ ತರ್ತಿತ್ತು. ಆಗಿನ ಜನಾನೂ ನಾವು ಶಾಲಿಗಿ ಹೋಗೂದು, ಬರೂದು, ಪಾಠ ಹೇಳೂದು ಎಲ್ಲಾನೂ ಬಾಳs

ಬೆರಗಿನಿಂದ ನೋಡ್ತಿದ್ರು. 'ನನ್ನ ಮಕ್ಕಳ್ನ ಏಟ ಪ್ರೀತಿಯಿಂದ ಬೆಳಸಿನಿ. ಅಕ್ಷರ ಕಲಿಸೇನಿ ಅದಕ್ಕ ನಾ ಅವ್ರಿಗಿ ಮದ್ವಿ ಮಾಡ್ಡಾಂಗಿಲ್ಲ ತಗಿ'ಅಂತ ಅಂತಿದ್ಲು. ಆಗಿನ ಕಾಲಕ್ಕ ಮದುವಿ ಮಾಡಿಕೊಂಡುರ ಪರಿಸ್ಥಿತಿನೂ ಹಂಗs ಇತ್ತು. ನಮ್ಮ ಕಾಲಕ್ಕೆ ನಮ್ಮ ಕೆಳಜಾತಿ ಹೆಂಗಸರು ಮದ್ವಿಯಾಗಿದ್ರೂ ಬ್ಯಾರೆ ಗಂಡಸರ ಜೊತಿ ಓಡಿ ಹೋಗ್ತಿದ್ರು. ಓಡಿ ಹೋದ ಹೆಂಗಸರ್ನ ಹೊಡಮಳ್ಳಿ ಮತ್ತಕರಕೊಂಡು ಬಂದು, ಅಂಥವರ ಜೊತಿ ಬಾಳ್ವೆ ಮಾಡ್ತಿದ್ರು. ಅಂಥಾ ಹೆಂಗಸರಿಗಿ ಗಾಲಿ ಹಾಕ್ತಿದ್ರು'. ಎರಡೂ ಮುಂಗಾಲುಗಳಿಗೆ ದಪ್ಪನೆಯ ಗಾಲಿಗಳನ್ನು ಹಾಕಿರುತ್ತಿದ್ದರು. ಅವು ಎಷ್ಟು ಭಾರವಾಗಿರುತಿದ್ವು ಅಂದ್ರ ಒಂದ್ಹೆಜ್ಜಿ ಕಿತ್ತ ಇಡಬೇಕಿದ್ರ ಬಾಳs ತ್ರಾಸ ಮಾಡಕೊತಿದ್ರು. ಆ ಗಾಲಿಗಳಿಗೆ ಕಬ್ಬಿಣದ ಸರಪಳಿ ಜೋಡಿಸಿರ್ತಿದ್ದರು. ಕಟ್ಟಿಗೆಯ ಭಾರದ ಜೊತೆಗೆ ಕಬ್ಬಿಣದ ಒಜ್ಜಿನೂ ಹೊರಬೇಕಾಗಿತ್ತು. ನಡಿಯುವಾಗ ಕಬ್ಬಿಣದ ಸರಪಳೆನ್ನ ಕೈಯಾಗ ಹಿಡಕೊಂಡ ತಿರಗಾಡಬೇಕಾಗ್ತಿತ್ತು. ಯಾವ ಹೆಣ್ಣಿಗಿ ಗಾಲಿ ಹಾಕಿರ್ತಿದ್ದರೊ, ಅವಳು ಓಡಿ ಹೋಗಿ ಬಂದವಳೆಂದೇ ಅರ್ಥ. ಕೂಲಿ ನಚ್ಚಿಕೊಂಡು ಬದುಕುವ ಜೀವಗಳು ನಮ್ಮವು. ಗಾಲಿ ಹಾಕ್ಕೊಂಡ ಮನಿಯಾಗ ಕೂಡಾಗ ಆಗ್ತಿರಲಿಲ್ಲ. ಬಯಲು ಕಡಿಗೆ ಹೋಗಬೇಕಿದ್ರ, ಹೊಲದ ಕೆಲಸಕ್ಕ ಹೋಗಬೇಕಿದ್ರ ಆಕಿ ಬಯಲಿಗಿ ಬರಾಕ ಬೇಕಾಗ್ತಿತ್ತು. ಇವರನ್ನ ನೋಡಾಕ ಓಣೆಯವರೆಲ್ಲ ಬರ್ತಿದ್ರು. ಅವರು ತಗ್ಗಿಸಿದ ಚಂಡ(ತಲೆ) ಎತ್ತಿರಲಿಲ್ಲ. ಇನ್ನೊಮ್ಮಿ ಆಕಿ ಇಂಥಾ ತಪ್ಪಾ ಮಾಡಬಾರ್ದು ಅಂತ ಶಿಕ್ಷಾ ಕೊಡ್ತಿದ್ರು. ಇಷ್ಟಾದ್ರೂ ಅವ್ರು ಮತ್ತ ಮತ್ತ ಓಡಿಹೋಗ್ತಿದ್ರು. ಗಂಡ ಅನಿಸಿಕೊಂಡವ್ರೂ ಅವ್ರಗೆ ಬಾಳs ಹಿಂಸಿ ಕೊಡತಿದ್ರು. ಹೀಂಗಾಗಿ ಗಂಡನ್ನ ಬಿಟ್ಟು ಪ್ರೀತಿ ತೋರಿಸಿದವ್ನ ಹಿಂದ ಓಡಿಹೋಗ್ತಿದ್ರು. ಮ್ಯಾಲಿನ ಚಾಲ್ಯಾಗ ಇಂಥಾವೆಲ್ಲ ಇರ್ಲಿಲ್ಲ. ಅವ್ರ ಹೆಣ್ಣುಮಕ್ಕು ಹೊಸ್ತಿ ದಾಟಿಂದ ನಾ ನೋಡ್ಲಿಲ್ಲ. ನಮ್ಮಂದ್ಯಾಗ ಮಗಳಗಿ ಮದನಿ ಮಾಡೂದು ಅಂತಂದ್ರ, ಆಕಿನ್ನ ಹಗಲಿ ಬಾವಿಗಿ ನೂಕಿದ್ಹಂಗ ಅನ್ನು ಕಲ್ಪನಾ ಇತ್ತು. ಹೀಗಾಂಗಿ ನಮ್ಮವ್ವ ನಮಗ ಮದುವಿ ಮಾಡ್ಲಿಲ್ಲ. ಸುಖವಾಗಿ ಬೆಳೆದ ಮಗಳು ಸುಖವಾಗಿ ತೌರಲ್ಲಿ ಉಳಿಯಾಕ ಇಂದೊಂದ ದಾರಿ ಆಗಿತ್ತು''ಎಂದು ಹೇಳಿ ಗತಕಾಲದ ಸಾಮಾಜಿಕ ಮೌಲ್ಯಗಳ ನೆನಪಿನಾಳಕ್ಕೆ ಇಳಿಯುತ್ತ ಹೋದಂತೆಲ್ಲಾ ಅವಳ ಮನ್ಸು ಕಹಿಗೊಂಡಂತೆ ತೋರಿತು. ಯಾಕೋ ಸುಮ್ಮನೆ ಮೌನವನ್ನು ಅಪ್ಪಿಕೊಂಡಳು. ಮೇಲ್ವರ್ಗದ, ಮೇಲ್ಜಾತಿಯಲ್ಲಿ ಮಾತ್ರ ಹೆಣ್ಣಿನ ಶೀಲದ ಕುರಿತಂತೆ ಶಿಷ್ಟಾಚಾರಗಳು(?) ಕಂಡುಬರುವುದಿಲ್ಲ. ಈ ಸಮಸ್ಯೆ ಜಾತಿಯನ್ನು ಅವಲಂಬಿಸಿ ಬೆಳೆದು ಬಂದುದಲ್ಲ. ಲಿಂಗವನ್ನನ್ನುಸರಿಸಿ ಬೆಳೆದು ಬಂದುದಾಗಿದೆ. ಈ ತರಹದ ಸ್ತ್ರೀ ಸಂಕಥನಗಳು ವ್ಯವಸ್ಥೆಯ ವಿರುದ್ಧ ಬಂಡೆದ್ದ ಯಶೋಗಾಥೆಯನ್ನು ಹೇಳುತ್ತವೆ. ಬಹುಪಾಲು ಬಸವಿಯರು ಮದುವೆಯನ್ನು ಗೇಲಿ ಮಾಡುತ್ತಾರೆ. 'ಗಂಡ ಎನ್ನುವ ಸಾಂಸ್ಕೃತಿಕ ಪರಿಕಲ್ಪನೆಯೇ ಹೆಣ್ಣನ್ನು ನಿಯಂತ್ರಿಸುವುದು, ಆ ಮೂಲಕ ಎಲ್ಲ ಹಕ್ಕುಗಳನ್ನು ಅವಳ ಮೇಲೆ ಚಲಾಯಿಸುವುದಾಗಿದೆ. ಅವರ ಈ

ಬಗೆಯ ನಿರ್ವಚನ ಅವರ ಆತ್ಮಶಕ್ತಿಯ, ವಿವೇಚನೆಯ ಸಾಮರ್ಥ್ಯವನ್ನು ಪ್ರತಿಬಿಂಬಿಸುತ್ತದೆ. ಅನೇಕ ಬಸವಿಯರು ನಿಜವಾದ ಸ್ತ್ರೀವಾದಿಗಳಂತೆ ಕಂಡಿದ್ದಾರೆ. ಆಧೀನತೆಗೆ ಒಳಪಡುವ 'ತಾಳಿ'ಯನ್ನು ತಿರಸ್ಕರಿಸಿ ಮುತ್ತುಕಟ್ಟಿಸಿಕೊಳ್ಳುತ್ತಾರೆ. ಮುದ್ರೆಗಳನ್ನು ಹಾಕಿಸಿಕೊಳ್ಳುತ್ತಾರೆ. ಬೇಕಾದ ಗಂಡಸರನ್ನು ಕೂಡಿಕೊಳ್ಳುತ್ತಾರೆ. ಅದು ಅವರ ದೃಷ್ಟಿಯಲ್ಲಿ ತಪ್ಪಲ್ಲ. ಮಾತೃಮೂಲ ಸಂಸ್ಕೃತಿಯ ಅಸಲಿ ಧೋರಣೆ ಇದಾಗಿದೆ. ಗಂಡು ಹೆಣ್ಣಿನ ಸಮಾಗಮನ ನಿಸರ್ಗ ಸಹಜವಾದುದು. ಅದಕ್ಕೆ ವೈವಾಹಿಕ ಚೌಕಟ್ಟ್ಯಾಕೆ ಎನ್ನುವುದು ಅವರ ಖಚಿತ ನಿಲುವು. ಸ್ತ್ರೀವಾದಿ ಅಧ್ಯಯನಕ್ಕೆ ಈ ತರಹದ ಸಂಗತಿಗಳು ಹೊಸ ಹೊಸ ಆಯಾಮಗಳನ್ನು ಕಟ್ಟಿಕೊಡುತ್ತವೆ. ಬಸವಿಯರ ಈ ನಿಲುವುಗಳನ್ನು ಕಂಡು ನಾವು ಸಂಭ್ರಮಿಸಬೇಕಾಗಿಲ್ಲ. ಬಸವಿಯರು ನಚ್ಚಿಕೊಂಡ ಮೌಲ್ಯಗಳು ಯಥಾವತ್ತಾಗಿ ಸಮಾಜದಲ್ಲಿ ಚಾಲ್ತಿಯಲ್ಲಿಲ್ಲ. ಬದಲಿಗೆ ಮುತ್ತು, ಮುದ್ರೆ ಪುರುಷಶಾಹಿ ಸಂಸ್ಕೃತಿಯಲ್ಲಿ ವಿರೂಪಗೊಂಡು, ಅವಳು ಏನಿದ್ದರೂ ಗಂಡಿನ ಉಪಭೋಗದ ವಸ್ತುವಾಗಿ ನಿರ್ವಚಿಸಲ್ಪಟ್ಟಿದ್ದಾಳೆ.

ಮೇಲು-ಕೀಳು ಮಡಿ ಮೈಲಿಗೆಯ ಪರಿಕಲ್ಪನೆ ಬಸವಿಯರಲ್ಲೂ ಇದೆ. ಊರನಾಯಕ ಬಸವಿಯರು ಮ್ಯಾಸನಾಯಕ ಬಸವರಿಯರಿಗಿಂತಲೂ ಶ್ರೇಷ್ಠವೆಂದು ಭಾವಿಸಿಕೊಳ್ಳುತ್ತಾರೆ. ತಳವಾರ ಬಸವಿಯರು ಹರಿಜನ ಬಸವಿಯರಿಗಿಂತಲೂ ಉನ್ನತವೆಂದುಕೊಳ್ಳುತ್ತಾರೆ. ಬಸವಿಯೊಳಗಿನ ಈ ತಾರತಮ್ಯಗಳು ನನ್ನನ್ನು ಒಂದು ಕ್ಷಣ ದಿಗ್ಭ್ರಂತಳನ್ನಾಗಿಸಿದವು. ಮ್ಯಾಸನಾಯಕರು, ಊರನಾಯಕರು ಹಾಗೂ ಗಂಗಮತದವರು ಲಿಂಗಾಯತ ಮತ್ತು ಬ್ರಾಹ್ಮಣರನ್ನು ಹೊರತುಪಡಿಸಿದಂತೆ ಬೇರಾರೊಂದಿಗೂ ಲೈಂಗಿಕ ಸಂಬಂಧವನ್ನಿಟ್ಟ ಕೊಳ್ಳುವುದಿಲ್ಲ. ನಾಯಕರು ತಮ್ಮ ಜನಾಂಗದವರೊಂದಿಗೆ, ಮೇಲ್ಜಾತಿಯವರೊಂದಿಗೆ ದೇಹಸಂಪರ್ಕವಿಟ್ಟುಕೊಳ್ಳುತ್ತಾರೆ. ಹರಿಜನ ಬಸವಿಯರು, ತಳವಾರ ಬಸವಿಯರೊಂದಿಗೆ ಮೇಲ್ಜಾತಿಯ ಪುರುಷರ ಲೈಂಗಿಕ ಸಂಬಂಧವಿರುವ ಉದಾಹರಣೆಗಳು ಬಹಳ ವಿರಳ. ಅಂತ್ಯಜರಾದ ಈ ಮಹಿಳೆಯರತ್ತ ಅವರ್ಯಾರೂ ಬರುವುದಿಲ್ಲ. ಬಸವಿರಿಯರಲ್ಲಿಯ ಶ್ರೇಷ್ಟ-ಕನಿಷ್ಠತೆಗೆ ಅವರು ಇಟ್ಟುಕೊಂಡಿರುವ ಗಂಡಸರ ಜಾತಿ ಸಂಬಂಧಗಳೇ ಕಾರಣ. ಮೇಲ್ವರ್ಗದವನು, ಮೇಲ್ಜಾತಿಯವನು ತನ್ನನ್ನು ಮೆಚ್ಚುತ್ತಾನೆನ್ನುವುದೇ, ಅವಳ ಪಾಲಿನ ಭಾಗ್ಯವಾಗಿ ಪರಿಣಮಿಸಿದೆ. ಅವರು ಯಾವ ಬಸವಿಯರತ್ತ ಹೋಗುವುದಿಲ್ಲವೋ ಅಂಥವರು ಕನಿಷ್ಠರು ಎಂದುಕೊಳ್ಳುತ್ತಾರೆ. ಅಂತರಾಜಾತಿಯಲ್ಲಿ ಕಂಡುಬರುವ ಬಸವಿಯರು ತಮ್ಮ ಜಾತಿ ಇಲ್ಲವೆ ತಮಗಿಂತ ಶ್ರೇಷ್ಠ ಜಾತಿ ಎನ್ನಿಸಿಕೊಂಡವರೊಂದಿಗೆ ಸಂಬಂಧವಿಟ್ಟುಕೊಳ್ಳಲು ಇಷ್ಟಪಡುತ್ತಾರೆ. ವಿನಹ ತಮಗಿಂತ ಕೆಳಜಾತಿಯವರೊಂದಿಗಲ್ಲ. ಮೇಲ್ವರ್ಗದ, ಮೇಲ್ಜಾತಿಯ ಪುರುಷರು ಮುಟ್ಟುವ ಮೂಲಕವೇ ಧನ್ಯತಾಭಾವವನ್ನು ಹೊಂದುವ ಈ ಮಹಿಳೆಯರು ತಮಗಿಂತ ಕೆಳಗಿನ ಜಾತಿಯವರೊಂದಿಗೆ ಎಷ್ಟರ ಮಟ್ಟಿಗೆ

ಮಡಿ-ಮೈಲಿಗೆಯನ್ನು ಕಾಪಾಡಿಕೊಳ್ಳುತ್ತಾರೆಂದರೆ, ಅವರ ಮನೆಗೆ ಅತಿಥಿಯಾಗಿ ಹೋಗುವುದಿಲ್ಲ, ಅವರ ಮನೆಯಲ್ಲಿಯ ನೀರನ್ನೂ ಸಹ ಮುಟ್ಟುವುದಿಲ್ಲ. ಪ್ರಧಾನ ಧಾರೆಯಲ್ಲಿ ಬರುವ ಪುರುಷರು ಜಾತಿ ಪಾಲಿಟಿಕ್ಸ್ ಮೂಲಕವೇ ತಮ್ಮ ಲೈಂಗಿಕ ಸ್ವೇಚ್ಛಾಚಾರವನ್ನು ಪೂರೈಸಿಕೊಳ್ಳುತ್ತಾರೆ. ಈ ರಾಜಕೀಯದ ಮೂಲಕವೇ ತಾವು ಕಟ್ಟಿಕೊಟ್ಟ ಜಾತಿ ಪರಿಕಲ್ಪನೆ ಸಮಾಜದಲ್ಲಿ ಕ್ರಿಯಾತ್ಮಕವಾಗಿರುವಂತೆ ನೋಡಿಕೊಳ್ಳುತ್ತಾರೆ. ತಮ್ಮತಮ್ಮಲ್ಲಿಯೇ ಮೇಲು-ಕೀಳು ಎಂದು ಕಚ್ಚಾಡುವ ಲೈಂಗಿಕದಾಸಿಯರು ಸಂರಚನೆ ಗೊಂಡು ಪ್ರಧಾನಧಾರೆಯ ವಿರುದ್ಧ ಬಂಡೇಳುವುದಾದರೂ ಹೇಗೆ? ಮೇಲ್ವರ್ಗದ, ಮೇಲ್ಜಾತಿಯ ಪುರುಷರ ಆಶೋತ್ತರಕ್ಕೆ ಪೂರಕವಾಗಿಯೇ ಬಸವಿಯರ ವರ್ತನೆಗಳು ಪ್ರಕಟಗೊಳ್ಳುತ್ತವೆ. ಅದು ಅವರ ತಪ್ಪಲ್ಲ. ಶತಮಾನಗಳಿಂದಲೂ ಇಂತಹ ನಂಬಿಕೆಯನ್ನು ಅವರಲ್ಲಿ ದೃಢಗೊಳಿಸಿ ಶಾಶ್ವತವಾಗಿ, ಬಹಿರಂಗವಾಗಿ ದೈಹಿಕ ಸುಲಿಗೆಯನ್ನು ನಡೆಸಿದ್ದಾರೆ. ಭಾರತದ ಬಹುಪಾಲು ಮಹಿಳೆಯರು ತಮ್ಮ ಮೇಲಿನ ಇಂತಹ ದಬ್ಬಾಳಿಕೆಯನ್ನು ಶೋಷಣೆಯೆಂದು ಅರ್ಥಮಾಡಿಕೊಳ್ಳುವುದಿಲ್ಲ. ಬದಲಾಗಿ ಅದು ತನ್ನ ಪೂರ್ವಜನ್ಮದ ಸುಕೃತವೆಂದು ಭಾವಿಸುತ್ತಾಳೆ. ಹೀಗೆ ನಂಬಿಸಲು ಎಷ್ಟೆಷ್ಟು ಬಗೆಯ ದಾರಿಗಳಿವೆಯೋ ಅಷ್ಟೆಲ್ಲ ರೀತಿಯ ಹಾದಿಗಳನ್ನು ಧರ್ಮಬದ್ಧಗೊಳಿಸಲಾಗಿದೆ. ಕಾನೂನುಬದ್ಧಗೊಳಿಸಲಾಗಿದೆ.

ಮನುಷ್ಯರ ಪ್ರತಿಕ್ರಿಯೆಗಳು ಎರಡು ಹಂತಗಳಲ್ಲಿ ಪ್ರಕಟಗೊಳ್ಳುತ್ತವೆ ೧.ಸಹಜ ಸ್ಥಿತಿ ೨.ಅಸಹಜ ಸ್ಥಿತಿ. ಸಮಾಜ ಹಾಕಿಕೊಟ್ಟ ಮೌಲ್ಯಗಳ ಹಳಿಯಲ್ಲಿಯೇ ನಡೆಯುವುದನ್ನು 'ಸಹಜ ಸ್ಥಿತಿ'ಎಂದು ಹೇಳಲಾಗದಿದ್ದರೂ, ಅಂಥಹದನ್ನೇ ಸಹಜ ಸ್ಥಿತಿ ಎಂದು ಸಮಾಜ ನಿರ್ವಚಿಸಿದೆ. ಸಿಟ್ಟು, ಕೋಪ, ಅಸಹಾಯಕತೆಯಲ್ಲಿದ್ದಾಗ ಮನುಷ್ಯರು ಸಹಜವಾಗಿ ವರ್ತಿಸುತ್ತಾರೆಯಾದರೂ, ಇಂತಹ ವರ್ತನೆಗಳನ್ನು ಅಸಹಜಸ್ಥಿತಿ ಎಂದು ಗುರುತಿಸಿದೆ. ಸಮಾಜ ನಿರ್ವಚಿಸಿದ ಈ ಅರ್ಥಗಳನ್ನಿಟ್ಟುಕೊಂಡೇ ಬಸವಿಯರು ಬಳಸಿದ ಬೈಗುಳಗಳನ್ನು ವಿಶ್ಲೇಷಿಸಿದರೆ, ನಮಗೆ ಬೇರೆ-ಬೇರೆ ಹೊಳಹುಗಳು ದೊರೆಯಬಹುದು. ನಾನು ಸಂದರ್ಶಿಸಿದ ಬಸವಿಯರೆಲ್ಲರೂ ಪುರುಷನಿಷ್ಠ ಸಮಾಜದ ಕುರಿತು ಸಿಟ್ಟನ್ನು, ಅಸಹಾಯಕತೆ ಯನ್ನು, ಪುರುಷನಿಷ್ಠ ಭಾಷೆಯಲ್ಲಿಯೇ ವ್ಯಕ್ತಪಡಿಸಿದರು. ಸೂಳೆಮಕ್ಕಳು, ಮಿಂಡರಿಗ್ಹುಟ್ಟಿದವರು ಎಂದು ಗಂಡಸರ ಮೇಲೆ ತಮ್ಮ ಸಿಟ್ಟನ್ನು ಕಾರಿಕೊಳ್ಳುತ್ತಿದ್ದರು. ಸಹಜ ಸ್ಥಿತಿಯಲ್ಲಿ ಪ್ರಕಟಗೊಳ್ಳುವ ವರ್ತನೆಗಳೆಲ್ಲ ಸಂಸ್ಕೃತೀಕರಣಕ್ಕೆ ಒಳಗಾದವುಗಳು. ನಾನು ಮಾತನಾಡುತ್ತಿರುವುದು ಶಂಬಾಜೋಶಿಯವರ ಸಂಸ್ಕೃತೀಕರಣವನ್ನಲ್ಲ. ಒಂದು ನಿರ್ದಿಷ್ಟ ಸಮಾಜದೊಳಗೆ ಜೀವಿಸುತ್ತಿರುವವರು, ಆ ಸಮಾಜ ರೂಪಿಸಿದ ನೀತಿ-ನಿಯಮಾವಳಿಗಳಲ್ಲಿ ಬದುಕುತ್ತಿರುತ್ತಾರೆ. ಅವು ಒಂದರ್ಥದಲ್ಲಿ ಕಲಿಕೆಯ ಸ್ವರೂಪದಲ್ಲಿರುತ್ತವೆ. ಆದರೂ ಅದನ್ನು ಸಹಜ ಸ್ಥಿತಿಯೆಂದೇ ಸಮಾಜ ಗುರುತಿಸಿದೆ. ತಮ್ಮ ಮೇಲೆ ಏನಾದರೂ ಸಾಮಾಜಿಕ ಹಾಗೂ ಕೌಟುಂಬಿಕ ಅನ್ಯಾಯಗಳಾದಾಗ ಮನುಷ್ಯರು ಅಸಹಜಸ್ಥಿತಿಯಲ್ಲಿ ತಮ್ಮ ಮೂಲಸ್ವರೂಪವನ್ನು ತೋರಿಸುತ್ತಾರೆ. ಅಲ್ಲಿ

ಯಾವುದೇ ರೀತಿಯ ಸಾಮಾಜಿಕ ಮೌಲ್ಯಗಳ ಒತ್ತಡವಿರುವುದಿಲ್ಲ. ವ್ಯಕ್ತಿಗಳ ಸಿಟ್ಟು, ಆಕ್ರೋಶ ಅವರವರ ಸ್ವಂತಿಕೆಯಲ್ಲಿಯೇ ಪ್ರಕಟಗೊಳ್ಳಬೇಕು. ಬಸವಿಯರು ಬಳಸಿದ ಬೈಗುಳಗಳು ಈಬಗೆಯ ಚಿತ್ರಣವನ್ನು ನೀಡುವುದಿಲ್ಲ. ಮಾತೃಮೂಲ ಹಿನ್ನೆಲೆಯುಳ್ಳ ಬಸವಿಯರು ಕೊನೆಯಪಕ್ಷ ಬೈಗುಳಗಳಲ್ಲಿಯಾದರೂ ತಮ್ಮ ಚಹರೆಯನ್ನು ಉಳಿಸಿಕೊಂಡಿದ್ದಾರೇನೊ ಎನ್ನುವುದು ನನ್ನ ಸಹಜ ಕುತೂಹಲವಾಗಿತ್ತು. ಹೀಗಾಗಿ ಅವುಗಳಿಗೆ ವಿಶೇಷ ಒತ್ತುಕೊಟ್ಟು ನೋಡಿದೆ. ಯಾವ ವ್ಯವಸ್ಥೆಯಿಂದ ಅವರಿಗೆ ಅನ್ಯಾಯವಾಗಿದೆಯೋ, ಅದರ ವಿರುದ್ಧ ಆಕ್ರೋಶಕಾರಲು ಅವರದೇ ಆದ ಬೈಗುಳಗಳಿಲ್ಲ. ಪುರುಷರು ಕಟ್ಟಿಕೊಟ್ಟ ಬೈಗುಳಗಳನ್ನೇ ಅವಲಂಬಿಸಿದ್ದಾರೆ. ಪುರುಷ ಪ್ರಧಾನ ವ್ಯವಸ್ಥೆಗೆ ಅದೆಷ್ಟರಮಟ್ಟಿಗೆ ಹೊಂದಿಕೊಂಡಿದ್ದಾರೆಂದರೆ ಮತ್ತು ಅದನ್ನು ಸಮಾಜ ಹೇಗೆ ಅನಿವಾರ್ಯವಾಗಿಸಿದೆಯೆಂದರೆ, ಅವರು ಬಳಸಿದ ಬೈಗುಳು ಅವರಿಗೇ ತಿರುಗುತ್ತವೆ ಎಂಬುದು ಅವರಿಗರ್ಥವಾಗುವುದಿಲ್ಲ.

ಸವದತ್ತಿ, ಚಿಂಚಲಿ, ಕೊಕಟನೂರು ಮೊದಲಾದ ಪ್ರದೇಶಗಳಲ್ಲಿಯ ಬಸವಿಯರು ಸಾಂಗ್ಲಿ, ಪುಣೆ, ಬಾಂಬೆಗೆ ದೇಹಮಾರಿ ದುಡ್ಡುಗಳಿಸಲು ಹೋಗುತ್ತಾರೆ. ಅಥಣಿಯಲ್ಲಿ ನಾನು ಸಂದರ್ಶಿಸಿದ ಬಸವಿಯೊಬ್ಬಳು ಮರಾಠಿ, ಹಿಂದಿ ಶಬ್ದಗಳನ್ನು ಹೆಚ್ಚಾಗಿ ಬಳಸುತ್ತಿದ್ದಳು. ವಿಮೋಚನಾ ಕೇಂದ್ರದವರು ಕೊಟ್ಟ ಸಣ್ಣ ಸೂಚನೆ ನೆನಪಾಯಿತು. ಸ್ಥಳೀಯರಾಗಿಯೇ ಉಳಿದ ಬಸವಿಯರಿಗೆ ಹಿಂದಿ, ಮರಾಠಿ ಬರುವುದಿಲ್ಲ. ಹಿಂದಿ, ಮರಾಠಿ ಶಬ್ದಗಳನ್ನು ಬಳಸಿದರೆ ಖಂಡಿತವಾಗಿಯೂ ಅವರು ಬಾಂಬೆಗೆ ಹೋಗಿಬಂದವರಾಗಿರುತ್ತಾರೆ. ಅವರ ಈ ಮಾತು ನೆನಪಿಗೆ ಬಂದು ತಟ್ಟನೆ ಪ್ರಶ್ನಿಸಿದೆನು. ಮೊದಮೊದಲು ತಿರಸ್ಕರಿಸಿದ ಅವಳು ನಂತರ ಒಪ್ಪಿಕೊಂಡಳು. "ಈಗಾಗಲೇ ನಮ್ಮ ಹಳ್ಳಿಯಿಂದ ಮುತ್ತುಕಟ್ಟಿಸಿಕೊಂಡು ಹೋದವರು ಅಲ್ಲಿರುತ್ತಾರೆ. ಅವರೇ ನಮ್ಮನ್ನು ದೊಡ್ಡವರಾಗುವ ಪೂರ್ವದಲ್ಲಿಯೇ ಗುತ್ತಿಗೆ ಹಿಡಿದಿಡುತ್ತಾರೆ. ದೊಡ್ಡವರಾದ ತಕ್ಷಣ ಬಾಂಬೆಗೋ, ಸಾಂಗ್ಲಿಗೋ ಕರೆದುಕೊಂಡು ಹೋಗುತ್ತಾರೆ. ಹೋಗುವ ಪೂರ್ವದಲ್ಲಿ ನಮ್ಮನೆಯ ಹಿರಿಯರಿಗೆ ಒಂದು ಸಾವಿರದಿಂದ ಐದು ಸಾವಿರದವರೆಗೆ ದುಡ್ಡುಕೊಡುತ್ತಾರೆ. ಅದು ಆ ಹುಡುಗಿಯ ರೂಪದ ಮೇಲೆ ಅವಲಂಬಿಸಿರುತ್ತದೆ. ಸುಂದರವಾಗಿರುವ ಹುಡುಗಿಯರಿಗೆ ಮುತ್ತುಕಟ್ಟಿಸಲು ಇವರೇ ಪ್ರರೇಪಿಸುತ್ತಾರೆ. ಬಡತನದ ಕಾರಣದಿಂದಾಗಿ ಅವರ ತಂದೆ-ತಾಯಿಗಳೂ ಅದನ್ನು ಒಪ್ಪುತ್ತಾರೆ. ನನ್ನನ್ನು ಸಾಂಗ್ಲಿಗೆ ಕಳುಹಿಸಿದರು. ಗಿರಾಕಿಗಳನ್ನು ಹುಡುಕಿಕೊಡುವುದು, ವ್ಯವಹಾರವನ್ನು ಹೊಂದಿಸುವುದು ಮಧ್ಯವರ್ತಿಯಾಗಿರುವುದೇ ಆಗಿರುತ್ತದೆ. ಹುಡುಗಿ ಸ್ವಲ್ಪ ಚಾಲಾಕು ಇದ್ದರೆ ಅವಳೇ ಘರವಾಲಿಯಾಗುತ್ತಾಳೆ. ರಾತ್ರಿ ಈ ಕೆಲಸವಾದರೆ, ಹಗಲಿ ಗಾರೆ ಕೆಲಸಕ್ಕೆ ಹೋಗುತ್ತಿದ್ದೆ. ಏನೋ ರೋಗ ಹತ್ತಿ, ಕೈಯಲ್ಲಿಂದ ಐದು ಸಾವಿರ ಖರ್ಚುಮಾಡಿಕೊಂಡು ಜೀವ ಉಳಿಸಿಕೊಂಡು ಈಗ ಮರ್ಯಾದೆಯಿಂದ ಬದುಕುತ್ತಿದ್ದೇನೆ"ಎಂದಳು. ಮುಖದಲ್ಲಿ

ಆವರಿಸಿದ ವಿಷಾದದ ಛಾಯೆಯನ್ನು ಮರೆಸಲು ಸುಮ್ಮನೆ ನಕ್ಕಳು. ಸಾಂಗ್ಲಿ, ಪುಣಾ, ಬಾಂಬೆ ಮೊದಲಾದವುಗಳು ವ್ಯಾಪಾರ ಪ್ರಧಾನವಾದ ಕೈಗಾರಿಕಾ ಪ್ರಧಾನವಾದ ಪ್ರದೇಶಗಳಾಗಿವೆ. ಇವು ಸಂಪೂರ್ಣ ಜಾಗತೀಕರಣಕ್ಕೆ ಪಕ್ಕಾಗಿವೆ. ಜಾಗತೀಕರಣ ಇಡೀ ಭಾರತವನ್ನು ವ್ಯಾಪಿಸಿಕೊಳ್ಳುತ್ತಿದೆ. ಭೂಮಿ, ಕಲ್ಲು, ಮಣ್ಣು ಹೀಗೆ ಪ್ರತಿಯೊಂದನ್ನು ಮಾರುಕಟ್ಟೆಗೆ ಇಟ್ಟು ಲಾಭ ಪಡೆದುಕೊಳ್ಳುವ ಪ್ರಕ್ರಿಯೆ ಇಂದು ಎಲ್ಲೆಡೆಗೆ ಕಂಡುಬರುತ್ತಿದೆ. ಇವತ್ತಿನ ಸಂದರ್ಭದಲ್ಲಿ ಇವೆಲ್ಲ ವಸ್ತುಗಳ ಜೊತೆಯಲ್ಲಿ ಹೆಣ್ಣಿನ ದೇಹವೂ ಸೇರಿಹೋಗಿದೆ. ಇಂತಹ ಪ್ರವೃತ್ತಿ ಹಿಂದೆ ಇರಲಿಲ್ಲವೆಂತಲ್ಲ. ಹಿಂದೆಂದಿಗಿಂತ ಇಂದು ಹೆಚ್ಚು ಢಾಳಾಗಿ ಕಂಡುಬರುತ್ತಿದೆ. ಉತ್ತರಕರ್ನಾಟಕದಲ್ಲಿಯ ಬಹುಪಾಲು ಬಸವಿಯರು ಗೋವೆಯಲ್ಲಿ, ಗೆ ಮಹಾರಾಷ್ಟ್ರದ ಭಾಗಗಳಿಗೆ ರಫ್ತಾಗಲ್ಪಡುತ್ತಿದ್ದಾರೆ.

ಸರ್ಕಾರ ಇವರಿಗೆ ಕಲ್ಪಿಸಿಕೊಡುವ ಯೋಜನೆಗಳು, ಸಹಾಯಗಳು, ಜಾಗತೀಕರಣ ಸಂದರ್ಭದಲ್ಲಿ ಚಲಾವಣೆಯಲ್ಲಿಲ್ಲದ ನಾಣ್ಯಗಳಂತಾಗಿವೆ. ಬಸವಿಯರು ಹೊಸ ರೀತಿಯ ಆರ್ಥಿಕ ಆವಿಷ್ಕಾರಗಳಿಗೆ ಹೊಂದಿಕೊಳ್ಳಲಾಗದೆ ಮೂಲಸ್ಥಿತಿಯಲ್ಲಿಯೇ ಉಳಿದಿದ್ದಾರೆ. ಇಂದಿನ ಬಂಡವಾಳನಿಷ್ಠ ಮಾರುಕಟ್ಟೆ ಬಸವಿಯರ ಬದುಕಿನ ಮೇಲೆ ಪರಿಣಾಮ ಬೀರಿದೆ. ಬಡತನದ ಕೆಳರೇಖೆಯಲ್ಲಿರುವ ಇವರಿಗೆ ಇವತ್ತಿನ ಉದಾರೀಕರಣದ ಲಾಭ ಕನಸಿನಲ್ಲಿಯೂ ತಟ್ಟುವುದಿಲ್ಲ. ವ್ಯಕ್ತಿಕೇಂದ್ರಿತವಾಗಿ ಬೆಳೆಯುವ ಜಾಗತೀಕರಣ ಸಮಷ್ಟಿ ಅಭಿವೃದ್ಧಿ ಪರಿಕಲ್ಪನೆಯನ್ನು ಸಾರಾಸಗಟಾಗಿ ಜಾಣತನದಿಂದ ಕಂಡೂಕಾಣದಂತೆ ತಳ್ಳಿ ಹಾಕುತ್ತಿದೆ. ಸಮುದಾಯದ ಪರಿಕಲ್ಪನೆಯನ್ನು ಛಿದ್ರಗೊಳಿಸುತ್ತಿವೆ. ಈಗ ತಾನೆ ಎಚ್ಚೆತ್ತು ಸಂಘಟನೆಗೊಳ್ಳುತ್ತಿರುವ ಮಹಿಳಾ ಸಮುದಾಯಗಳು ಮತ್ತೆ ತಮ್ಮ ತಮ್ಮ ಮೂಲ ನೆಲೆಗಳಿಗೆ ಚದುರಿ ಹೋಗುವ ಅಪಾಯವಿದೆ. ಇದು ಮಹಿಳಾ ಸಂಘಟನೆಗಳಿಗೆ ಮಾತ್ರ ಅನ್ವಯಿಸುವುದಿಲ್ಲ. ಅದು ದಲಿತ, ರೈತ, ಕಾರ್ಮಿಕ ಸಂಘಟನೆಗಳಿಗೂ ವಿಸ್ತರಿಸುತ್ತದೆ.

**ಅಡಿಟಿಪ್ಪಣಿಗಳು**

೧. ಹಿರೇಮಠ ಆರ್.ಸಿ.(ಸಂ): ಚನ್ನಬಸವಣ್ಣನವರ ವಚನಗಳು, ವ:೧೧೫, ಪು:೧೫೪, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೫

೨. ಪಾತರದವರು ಮುದ್ರೆ ಹಾಕಿಸಿಕೊಳ್ಳುತ್ತಾರೆ ಎಂದು 'ಪಾತರದವರು ಕೃತಿಯಲ್ಲಿ ಹೇಳಿದ್ದೇನೆ(ಗಮನಿಸಿ: ಪಾತರದವರು, ಶೈಲಜಾ ಹಿರೇಮಠ, ಪು:೨೨, ಕನ್ನಡ ವಿಶ್ವವಿದ್ಯಾಲಯ,ಹಂಪಿ, ೧೯೯೯) ಮುದ್ರೆ ಹಾಕಿಸಿಕೊಂಡ ಪಾತರದವರಾರೂ ಸಿಕ್ಕಿರಲಿಲ್ಲ. ಈಡ್ಗರ್ ಥರ್ಸ್ಟನ್ ಅವರ ಇಂಡಿಯಾನ್ ಕಾಸ್ಟ್ ಆಯಂಡ್ ಟ್ರೈಬ್ಸ್ ಕೃತಿಯಲ್ಲಿ ಮುದ್ರೆ ಕುರಿತಂತೆ ಉಲ್ಲೇಖವಿತ್ತು. ಹೀಗಾಗಿ ಮೊದಲಲ್ಲಿ ಮುದ್ರೆ ಹಾಕಿಸಿಕೊಳ್ಳುವ ಸಂಪ್ರದಾಯ ಅವರಲ್ಲಿರಬೇಕು ಎನ್ನುವ ನಿರ್ಧಾರಕ್ಕೆ ಬಂದೆನು. ಶಂಖ, ಚಕ್ರ, ಪದ್ಮ ಈ ಮುದ್ರಾ ಚಿಹ್ನೆಗಳು ವೈದಿಕ ಪರಂಪರೆಗೆ ಸೇರಿದವುಗಳಾಗಿವೆ.

ಇಂಥವುಗಳನ್ನು ಪಾತರದವರಲ್ಲದೆ ಬೇರಾರೂ ಹಾಕಿಸಿಕೊಳ್ಳುವುದಿಲ್ಲ ಎನಿಸಿತು. 'ಬಸವಿಯರು' ಯೋಜನೆಗೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯಕ್ಕೆ ಇಳಿದಾಗ ನನ್ನ ತಪ್ಪಿನ ಅರಿವಾಯಿತು.

೩. ಬಳ್ಳಾರಿ ಹಾಗೂ ಉತ್ತರ ಕರ್ನಾಟಕದಲ್ಲಿ ಪ್ರಚಲಿತದಲ್ಲಿರುವ ಸಂಸ್ಕೃತಿ ಪ್ರಕಾರ ಗಂಡುಳ್ಳವರು ತವರು ಮನೆ ಮತ್ತು ಗಂಡನ ಮನೆಯಿಂದ ಮಾಡಿಸಿದ ಎರಡು ತಾಳಿಗಳನ್ನು ಕಟ್ಟಿಕೊಳ್ಳುತ್ತಾರೆ.

೪. ಸ್ಯಾಸಕ್ಕಿ ಹೊಯ್ಯುವುದು ಎಂದರೆ ಕರಿಕಂಬಳಿಯ ಮೇಲೆ, ಧಾನ್ಯಗಳನ್ನು ತೆಗೆದುಕೊಂಡು ಬೆರಳುಗಳ ಸಂದಿಯಿಂದ ಬಿಡುತ್ತಾ ರೇಖೆಯನ್ನು ತೆಗೆಯುತ್ತಾರೆ. ಜೋಡು ಗೆರೆಯಾದ ಅದು ಚೌಕಾಕಾರದ ರೂಪದಲ್ಲಿರುತ್ತದೆ. ಸ್ಯಾಸಕ್ಕಿ ಹೊಯ್ಯಲು ಶ್ರೀಮಂತರು ಅಕ್ಕಿಯನ್ನು ಬಳಸಿದರೆ ಕೆಳಜಾತಿಯವರು ಸ್ವಲ್ಪ ಜೋಳ, ನವಣಕ್ಕಿಯನ್ನು ಉಪಯೋಗಿಸುತ್ತಾರೆ. ಚೌಕಾಕಾರದ ಆ ಆಸನಕ್ಕೆ ಜೋಡುಗೆಯ ಅಧಾರ ಚಿಹ್ನೆಯನ್ನು ಹಾಕುವರು. ಚೌಕಿಯ ನ್ಯಾಲ್ಕೂ ಮೂಲೆಗಳಿಗೂ ಅಕ್ಕಿ ಇಲ್ಲವೇ ಜೋಳ, ನವಣಕ್ಕಿಯ ಚಿಕ್ಕ ಚಿಕ್ಕ ಗುಂಪುಗಳನ್ನು ಹಾಕುವರು. ಇದಕ್ಕೆ 'ಹಾಸಕ್ಕಿ ಹಾಕುವುದು'ಎನ್ನುವರು.

೫. ಕೆಟ್ಟ ಶಬ್ದಗಳೆನ್ನುವುದಕ್ಕೆ ಬಾಲಬಾಷಿ ಎನ್ನುವರು.

೬. ಚಪ್ಪಲಿ ಎಂದರ್ಥ.

೭. ಪ್ರಮಾಣ ಎನ್ನುವ ಅರ್ಥದಲ್ಲಿ ಅದನ್ನು ಬಳಸುತ್ತಾರೆ.

೮. ಭಿಕ್ಷೆ ಕೇಳುವುದು ಎಂದರ್ಥ

೯. ದಲಿತ ಮಹಿಳೆಯಲ್ಲಿಯ 'ಗಾಲಿ ಹಾಕುವ ಪದ್ಧತಿಯನ್ನು ಕೇಳಿದಾಗ, ಯುರೋಪಿನ ಚೇಸ್ಟಿಟಿ ಬೆಲ್ಟ್ ನೆನಪಾಗುತ್ತದೆ. ಅಲ್ಲಿನ ಸೈನಿಕರು, ರಾಜರು ಯುದ್ಧಕ್ಕೆ ಹೋದರೆ ಅಷ್ಟು ಬೇಗ್ರನೆ ಹಿಂದಿರುಗುತ್ತಿರಲಿಲ್ಲ. ವ್ಯಾಪಾರಿಗಳದೂ ಇದೇ ಪಾಡಾಗಿತ್ತು. ಹೀಗಾಗಿ ಅರು ತಮ್ಮ ಹೆಂಡಂದಿರಿಗೆ ಯೋನಿ ಬೀಗವನ್ನು ಹಾಕುತ್ತಿದ್ದರು. ಹಿಂದೆ-ಮುಂದೆ ಎರಡೂ ಕಡೆಗೆ ಬಂಧಿಸಿ ಮೂತ್ರಕ್ಕೆ ಮಾತ್ರ ಒಂದು ಸೆಂಟಿಮೀಟರಿನಷ್ಟು ಜಾಗ ಬಿಟ್ಟಿರುತ್ತಿದ್ದರು. ನಿತಂಬಗಳನ್ನು ಸೇರಿಕೊಂಡಂತೆ ಮುಚ್ಚುವ ವಿಸ್ತಾರವಾದ ಬೀಗಗಳವು. ಅಂತಹ ಬೀಗಗಳನ್ನು ಸೊಂಟಕ್ಕೆ ಬಿಗಿಯಾಗಿ ಕಟ್ಟಲಾಗುತ್ತಿತ್ತು ಅತ್ಯಂತ ಸೂಕ್ಷ್ಮವಾದ ಆ ಭಾಗವನ್ನು ಬಂಧಿಸಿದಾಗ ಅನೇಕ ಬಾರಿ ಗಾಯ, ನೋವು, ರಕ್ತಪಾತದ ಯಾತನೆಯಿಂದ ನರಳುತ್ತಿದ್ದರು. ಹಾಕಿದ ಕಬ್ಬಿಣದ ಬೀಗ ತುಕು ಹಿಡಿದು ಬೇರೆ ಬೇರೆ ರೀತಿಯ ಕಾಯಿಲೆಗಳು ಅಂಟಿಕೊಳ್ಳುತ್ತಿದ್ದವು. ಈ ಚಿತ್ರಹಿಂಸೆಯನ್ನು ತಾಳಲಾರದ ಯುರೋಪಿನ ಅನೇಕ ಮಹಿಳೆಯರು 'ಯೋನಿ ಬೀಗವನ್ನು'ಯಾವ

ಮಾಯದಿಂದಲೋ ಕಿತ್ತುಹಾಕಿ ಇಷ್ಟಬಂದವರೊಂದಿಗೆ ಓಡಿ ಹೋಗುತ್ತಿದ್ದರು. ಎಲ್ಲೆಲ್ಲಿ ಪುರುಷ ಪ್ರಧಾನತೆ ಚಾಲ್ತಿಯಲ್ಲಿದೆಯೊ ಅಲ್ಲೆಲ್ಲ ಹೆಣ್ಣಿನ ಶೀಲದ ಕುರಿತಂತೆ ಇಂತಹ ಅಮಾನವೀಯ ಕೃತ್ಯಗಳು ಸಂಸ್ಕೃತಿಯ ಹೆಸರಿನಲ್ಲಿ ಚಾಲ್ತಿಯಲ್ಲಿವೆ.

ಸಂದರ್ಶನ ಕಾರರು

ಅ. ಬಸವ್ವ, ಜಾತಿ:ಗಂಗಮತ, ವಯಸ್ಸು:೫೯ವರ್ಷ, ಶಿಕ್ಷಣ:೪ನೇಯ ಆಸ್ತಿ: ಇಲ್ಲ, ಊರು:ಮರಿಯಮ್ಮನಹಳ್ಳಿ

ಆ. ಭೀಮವ್ವ, ಜಾತಿ: ಹರಿಜನ, ವಯಸ್ಸು:೬೫ವರ್ಷ, ಶಿಕ್ಷಣ: ಇಲ್ಲ, ಆಸ್ತಿ: ಒಂದು ಚಿಕ್ಕಮನೆ, ಊರು: ಮರಿಯಮ್ಮನಹಳ್ಳಿ

ಇ. ಹನುಮವ್ವ, ಜಾತಿ: ಹರಿಜನ, ವಯಸ್ಸು:೩೦ವರ್ಷ, ಶಿಕ್ಷಣ:ಇಲ್ಲ, ಆಸ್ತಿ: ಇಲ್ಲ, ಊರು:ಹುನಗುಂದ

ಈ. ಲಕ್ಷ್ಮೀ, ಜಾತಿ:ಊರನಾಯಕರು, ವಯಸ್ಸು:೩೫, ಶಿಕ್ಷಣ:೨ನೇ, ಆಸ್ತಿ:ಚಿಕ್ಕಗೂಡು, ಊರು:ಮನ್ಮಥಕೇರಿ, ಕಮಲಾಪುರ

# ಮಹಿಳಾ ಚಿಂತನೆಗಳು, ಚಳುವಳಿಗಳು ಹಾಗೂ ಮಹಿಳಾ ಸಮುದಾಯ

ಮಹಿಳಾ ಸಮುದಾಯವು ನಿರಂತರವಾಗಿ ಎದುರಿಸುವ ಸಾಮಾಜಿಕ ಸಮಸ್ಯೆಗಳನ್ನು ಗಂಭೀರವಾಗಿ ಅಧ್ಯಯನ ಮಾಡುವ, ಸಮಸ್ಯೆಯ ಪರಿಹಾರಕ್ಕಾಗಿ ಹೋರಾಡುವ ಉದ್ದೇಶಗಳಲ್ಲಿ ಮಹಿಳಾ ಅಧ್ಯಯನ ಕ್ಷೇತ್ರದ ಶೈಕ್ಷಣಿಕ ವಲಯದವರೂ, ಚಳುವಳಿ ನಿರತರೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಈ ವಿದ್ವಾಂಸರಿಗೂ ಚಳುವಳಿಗಾರರಿಗೂ 'ಮಹಿಳಾ ಸಮುದಾಯ'ವೇ ಪ್ರಧಾನ ಕೇಂದ್ರ. ಹೀಗಿದ್ದರೂ ಕೆಲವೊಮ್ಮೆ ಇಬ್ಬರ ಚಿಂತನಾಕ್ರಮ ಹಾಗೂ ಕಾರ್ಯವಿಧಾನಗಳಲ್ಲಿ ಪರಸ್ಪರ ಸಮನ್ವಯ ಕಾಣುತ್ತದೆಯೇ ಎಂಬ ಅನುಮಾನ ಜನಸಾಮಾನ್ಯರೆದುರು ನಿಲ್ಲುವುದಿದೆ. ಬೌದ್ಧಿಕ ಚಟುವಟಿಕೆಗಳು ಕ್ರಿಯಾಶೀಲವಾಗಿ ಜಾರಿಗೊಳ್ಳದಿದ್ದರೆ, ಚಳುವಳಿಗಳು ಬೌದ್ಧಿಕ ವಲಯವನ್ನು ಸೂಕ್ತವಾಗಿ ಬಳಸಿಕೊಳ್ಳದಿದ್ದರೆ ನಮ್ಮ ಪ್ರಯತ್ನಗಳು ಗಟ್ಟಿಗೊಳ್ಳಲಾರವು ಎಂಬುದನ್ನೇನೂ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಎಷ್ಟೋ ಸಲ ಈ ಬಗೆಯ ಬಿರಿಕುಗಳು ಪಟ್ಟಭದ್ರ ಪುರುಷಕೇಂದ್ರಿತ ಸಮಾಜದಲ್ಲಿ ನಮ್ಮನ್ನು ಗೇಲಿಯೆಬ್ಬಿಸುವ ಪ್ರಕರಣಗಳಾಗಿಯೋ, ನಯವಂಚನೆಯ ಅವರ ತಂತ್ರಗಳಿಗೆ ಸಾಧನಗಳಾಗಿಯೋ ಒದಗಿ ಬಿಡಲೂಬಹುದು. ಹಾಗಾಗಿ, ಪ್ರಸ್ತುತ ನಮ್ಮ ವಾತಾವಾರಣದಲ್ಲಿ ಈ ಎರಡೂ ನೆಲೆಗಳ ಚಟುವಟಿಕೆಗಳು ಪರಸ್ಪರ ಕೊಡುಕೊಳುವ ಮನೋಧರ್ಮವನ್ನು ರೂಢಿಸಿಕೊಂಡಿವೆಯೇ ಎಂಬುದನ್ನು ಸೂಕ್ಷ್ಮವಾಗಿ ವಿವರಿಸಿಕೊಳ್ಳುವುದು ತುಂಬಾ ಅಗತ್ಯ. ಅಂತಹ ಸಮನ್ವಯದ ಒಂದು ವಾತಾವರಣವನ್ನು ರೂಢಿಸಿಕೊಂಡಿವೆಯೇ ಎಂಬುದನ್ನು ಸೂಕ್ಷ್ಮವಾಗಿ ವಿವರಿಸಿಕೊಳ್ಳಬೇಕಾಗುತ್ತದೆ. ಇದರಲ್ಲಿ ಜನಸಾಮಾನ್ಯ ಮಹಿಳೆಯರನ್ನೂ ಆಪ್ತವಾಗಿ ಸಮಲೋಚನೆಯೊಳಗೆ ತರುವುದೂ ಸಾಧ್ಯವಾಗಬೇಕು. ಏಕೆಂದರೆ ಈ ಪ್ರಶ್ನೆಗೆ ಸಂಬಂಧಿಸಿದಂತೆಯಂತೂ ಪ್ರತ್ಯೇಕ ಪ್ರತ್ಯೇಕವಾಗಿ ಸಮಾನಾಂತರ ನೆಲೆಗಳಲ್ಲಿ ನಡೆಯುವ ಯಾವುದೇ ಬಗೆಯ ಬೌದ್ಧಿಕ ಅಥವಾ ಕ್ರಿಯಾ ಚಟುವಟಿಕೆಗಳು ಅನಾಥವಾಗಿ ನಿಂತುಬಿಡುವ ಸಂದರ್ಭಗಳೇ ಹೆಚ್ಚು. 'ಮಹಿಳಾ ಸಮುದಾಯ'ವನ್ನು ಇಡಿಯಾಗಿಯೂ, ಪ್ರತ್ಯೇಕ ವೈಶಿಷ್ಟ್ಯಗಳಲ್ಲಿಯೂ ಗುರುತಿಸುವಲ್ಲಿ ಚಿಂತನೆಗಳೂ, ಹೋರಾಟಗಳು ಪರಸ್ಪರ ಬೆಂಬಲವಾಗಿ ನಿಲ್ಲುವಂತಾದರೆ ಮಾತ್ರ ಮುಖ್ಯ ಗುರಿಯ ಸಾಧನೆಯಾಗುತ್ತದೆ. ಈ ಭಿನ್ನ ವಲಯಗಳಲ್ಲಿ ತೊಡಗಿಕೊಂಡಿರುವ ಜಯಮಾಲಾ, ಗುಲಾಬಿ ಬಿಳಿಮಲೆ ಹಾಗೂ ಸಾರಾ ಅಬೂಬಕರ್ ಅವರು ತಮ್ಮ ಅನುಭವದ ಹಿನ್ನೆಲೆಯಲ್ಲಿ ಈ ಕುರಿತ ಚರ್ಚೆಗಳನ್ನು ಇಲ್ಲಿ ಮಂಡಿಸಿದ್ದಾರೆ.

(ಸಂ)

# ಮಹಿಳಾ ಸಮಸ್ಯೆಗಳನ್ನು ಗುರುತಿಸುವ ನೆಲೆಗಳು

*ಜಯಮಾಲಾ*

ಅಭಿವೃದ್ಧಿಪರ ರಾಷ್ಟ್ರಗಳಲ್ಲಿ, ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ, ಅಭಿವೃದ್ಧಿ ಹೊಂದದ ರಾಷ್ಟ್ರಗಳಲ್ಲಿ- ಎಲ್ಲೆಡೆಗಳಲ್ಲಿ 'ಮಹಿಳೆ' ಸಮಸ್ಯೆಗಳ ಮಡುವಿನಲ್ಲಿದ್ದಾಳೆ. ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳು ವೈವಿಧ್ಯಮಯ, ಅಸಂಖ್ಯಾತ. ದೇಶದಿಂದ ದೇಶಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಈ ಸಮಸ್ಯೆಗಳ 'ಸಾಂದ್ರತೆ'ಯಲ್ಲಿ ವ್ಯತ್ಯಾಸವಿರಬಹುದು; ಗ್ರಹಿಕೆಯಲ್ಲಿ ಅಸಮತೋಲನವಿರಬಹುದು, ಅಷ್ಟೆ. ಹೆಣ್ಣು, ಮಗು-ಕನ್ಯೆ-ಮಡದಿ-ತಾಯಿ-ಸೊಸೆ-ಅತ್ತೆ-ಅಜ್ಜಿ ಮುಂತಾದ ಸಂಸಾರ ಸಂಬಂಧೀ ಸಮಸ್ಯೆಗಳೇ ಅಲ್ಲ, ವ್ಯವಹಾರ ಸಂಬಂಧೀ ಸಮಸ್ಯೆಗಳಿಂದಲೂ ಸಾಕಷ್ಟು ಕಷ್ಟ-ನಷ್ಟಗಳನ್ನು ಅನುಭವಿಸುತ್ತಿದ್ದಾಳೆ.

ಸಾಮಾನ್ಯವಾಗಿ ಬುದ್ಧಿಜೀವಿ ಮಹಿಳೆಯು ಕಂಡುಕೊಂಡ ಮಹಿಳಾ ಸಮಸ್ಯೆಗಳು ಮತ್ತು ಮಹಿಳಾ ಸಂಘಟನೆಗಳು ಗುರುತಿಸಿರುವ ಸ್ತ್ರೀಸಂಬಂಧಿ ಕಷ್ಟಗಳು ಒಂದೇ ಸರಳರೇಖೆಗಳಲ್ಲವೆನ್ನಬಹುದು. ಇವೆರಡೂ ಸ್ತ್ರೀ ಶಿಕ್ಷಣ-ಉದ್ಯೋಗ-ಸ್ಥಾನಮಾನ-ಅವಕಾಶ-ಸ್ಥಿತಿಗತಿ-ಕಾನೂನು-ಕುಟುಂಬ ವ್ಯವಸ್ಥೆ- ಆರೋಗ್ಯ-ಕಲ್ಯಾಣ-ಆರ್ಥಿಕತೆ ಇವುಗಳ ಬಗ್ಗೆ ಮಹಿಳೆ ಯಾವಯಾವ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ ಮತ್ತು ಅದರಿಂದ ಪಾರಾಗಲು ಅವಳು ಯಾವ ಧೋರಣೆ ತಾಳಬೇಕು ಹಾಗೂ ಅದಕ್ಕಾಗಿ ತನ್ನ ಕುಟುಂಬ, ಸಮಾಜ, ಸರಕಾರ, ಸಂಘಟನೆ ಇತ್ಯಾದಿಯಾಗಿ ಬೇರೆ ಬೇರೆ ವ್ಯವಸ್ಥೆಗಳು ಯಾವ ಮಟ್ಟದಾಗಿರಬೇಕು ಎಂಬುದರ ಬಗ್ಗೆ ತಮ್ಮದೇ ಆದ ನಿಲುವು ಪರಿಹಾರಗಳನ್ನು ಹೊಂದಿವೆ-ಸೂಚಿಸಿವೆ. ಬುದ್ಧಿಜೀವಿ ಮಹಿಳೆಯರ ಪ್ರಯತ್ನದ ಫಲವಾಗಿ ಇಂದು ನಮ್ಮ ದೇಶದಲ್ಲಿ ಸ್ತ್ರೀಯರ ಸ್ಥಿತಿಗತಿಗಳ ಕುರಿತು ವಿಪುಲವಾಗಿ, ಸಮಗ್ರವಾಗಿ ಚರ್ಚೆಗಳಾಗುತ್ತಿವೆ; ತಮ್ಮ ಸಾಮರ್ಥ್ಯಕ್ಕೆ ಸಿಗಬೇಕಾದ ಮನ್ನಣೆ, ತಮ್ಮನ್ನು ಗುರುತಿಸಬೇಕಾದ ರೀತಿ, ಇವುಗಳಿಂದ ಸಮಸ್ಯೆಗಳ ನಿರ್ನಾಮ ಅಥವಾ ತಕ್ಕ ಪರಿಹಾರ-ಮುಂತಾದವುಗಳ ಬಗ್ಗೆ ದನಿಯೆತ್ತಿ ಮಾತನಾಡಬಲ್ಲ ಕೆಚ್ಚನ್ನು ಕೆಲವರಾದರೂ ಮಹಿಳೆಯರು ಪ್ರದರ್ಶಿಸುತ್ತಿದ್ದಾರೆ; ಅನ್ಯಾಯಗಳ ವಿರುದ್ಧ ಪ್ರತಿಭಟಿಸುವ ದಿಟ್ಟತನವನ್ನು ಮಹಿಳೆಯರು ಊರ್ಜಿತಗೊಳಿಸುತ್ತಿದ್ದಾರೆ. ಈ ನಿಟ್ಟಿನಲ್ಲಿ ಇಂತಹ ಬುದ್ಧಿಜೀವಿ ಮಹಿಳೆಗೆ ಸಂಘಟನೆಗಳು ಬೆನ್ನೆಲುಬಾಗಿ ನಿಂತು ಅವಳು ಗ್ರಹಿಸಿದ ಸಮಸ್ಯೆಗಳನ್ನು ಕೈಗೆತ್ತಿಕೊಂಡು, ಹಲವನ್ನು ತುಲನಾತ್ಮಕವಾಗಿ ತೂಗಿ, ಆದ್ಯತೆಯ ರೂಪದಲ್ಲಿ ಪರಿಹಾರೋಪಾಯಗಳನ್ನು ಸೂಚಿಸಿದುದೇ

ಅಲ್ಲದೆ ಕಾರ್ಯೋನ್ಮುಖವಾಗಿವೆ. ಅಲ್ಲದೆ ಆ ಮಹಿಳೆ, ಸಾಧನೆಯ ಶಿಖರದ ಮೇಲೆ ನಿಂತಿರಲಿ ಅಥವಾ ಹತಾಶೆಯಿಂದ ಕುಸಿದು ಕೂತಿರಲಿ, ಪ್ರತಿ ಹೆಜ್ಜೆಯಲ್ಲೂ ಅವಳಲ್ಲಿ ಧೈರ್ಯವನ್ನು ತುಂಬಿದೆ.

ನಮ್ಮ ಮಹಿಳೆಯರಲ್ಲಿ ಹೆಚ್ಚಿನವರು ನಮ್ಮ ದೇಶದ ಆರ್ಥವ್ಯವಸ್ಥೆಯಲ್ಲಿ ಸ್ವಾವಲಂಬಿಗಳಾಗಿರದೆ ಉತ್ಪಾದಕ ಕ್ರಿಯೆಯಲ್ಲಿ ಕೇವಲ ಪುರುಷರ ಸಹಭಾಗಿಗಳಾಗಿ ಮಾತ್ರ ದುಡಿಯುತ್ತಿದ್ದಾರೆ; ಮಹಿಳೆಯರ ಸಾಂಪ್ರದಾಯಿಕವಾದ ಅನೇಕ ಉದ್ಯೋಗಗಳು ಇಂದು ಇಲ್ಲದಂತಾಗಿದೆ; ಸಾಕ್ಷರತೆ ಮತ್ತು ವೃತ್ತಿಪರ ತರಬೇತಿಗಳ ಅಭಾವವೂ ಇವರನ್ನು ಆಧುನಿಕ ಅರ್ಥವ್ಯವಸ್ಥೆಯಿಂದ ಹೊರಗಿಟ್ಟಿದೆ- ಮುಂತಾದ ಅಂಶಗಳನ್ನು ಸಮಾಜಕ್ಕೆ ಮನದಟ್ಟು ಮಾಡುವ ಕೆಲಸಗಳನ್ನು ಈ ಎರಡೂ ನೆಲೆಗಳು ಮಾಡುತ್ತಿವೆಯೆನ್ನಬಹುದು. ಇವುಗಳಲ್ಲಿ ಪರಿಹಾರ ಸೂಚಿಯನ್ನು ನಿರ್ದೇಶಿಸುತ್ತವೆ. ಉದಾಹರಣೆಗೆ- ಅವಲಂಬನೆ ಹಾಗೂ ಅಸಮಾನತೆಗಳಿಂದ ಮಹಿಳೆಯರನ್ನು ವಿಮುಕ್ತಗೊಳಿಸುವ ಉದ್ದೇಶದಿಂದ ಅವರಿಗೆ ಹೆಚ್ಚಿನ ಶಿಕ್ಷಣ ಹಾಗೂ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡುವುದು; ಗೃಹಿಣಿಯ ಕೆಲಸವನ್ನು ರಾಷ್ಟ್ರದ ಪ್ರಗತಿ ಹಾಗೂ ಅಭಿವೃದ್ಧಿಗೆ ಪೂರಕವೆನ್ನುವ ಕಾರಣದಿಂದ ಆರ್ಥಿಕವಾಗಿ ಗುರುತಿಸುವುದು; ವಿವಾಹ ಹಾಗೂ ತಾಯ್ತನಗಳು ಮಹಿಳೆಯ ಮುನ್ನಡೆಗೆ ತೊಡಕಾಗದಂತೆ ಸಂಬಂಧಪಟ್ಟ ಎಲ್ಲರೂ ಜವಾಬ್ದಾರಿಗಳನ್ನು ಒಪ್ಪಿಕೊಂಡು ನಿರ್ವಹಿಸುವುದು; ಸಾಮಾಜಿಕ ವ್ಯವಸ್ಥೆಯಲ್ಲಿರುವ ದಮನಕಾರಿ ಅಂಶಗಳ ನಿರ್ಮೂಲನಕ್ಕಾಗಿ ಸಮಗ್ರ ಆಂದೋಳನವನ್ನು ಕೈಗೊಳ್ಳುವುದು ಹಾಗೂ ಸಂವಿಧಾನ ವಿಧಿಸಿದ ಸಮಾನತೆಯನ್ನು ವಾಸ್ತವಕ್ಕೆ ತರುವುದೇ ಮುಂತಾದ ಸುಧಾರಣೆಗಳನ್ನು ಇವು ಪ್ರೋತ್ಸಾಹಿಸುತ್ತವೆ. ಹೀಗಿದ್ದು, ಮೇಲ್ನೋಟಕ್ಕೆ ಈ ಎರಡು ನೆಲೆಗಳಲ್ಲಿ ತೀವ್ರವಾದ ಬಿರುಕುಗಳಿವೆಯೆಂದನ್ನಿಸುವುದಿಲ್ಲ.

ಸಾಮಾನ್ಯ ಮಹಿಳೆಯ ದೃಷ್ಟಿಗೆ ಈ ಮೇಲಿನ ಸಮಸ್ಯೆಗಳು ಅಷ್ಟೊಂದು ಗೋಚರಿಸುವುದಿಲ್ಲ. ಬದಲಾಗಿ ಅವಳ ಸಮಸ್ಯೆಗಳ ರೂಪವೇ ಬೇರೆ ತೆರನಾದುದು. ಆದ್ದರಿಂದ ಅವಳ ನೆಲೆಯಲ್ಲಿ ನಿಂತು ನೋಡಿದಾಗ ಉಳಿದೆರಡು ನೆಲೆಗಳಲ್ಲಿ ಕಾಣಬರುವ ಸಮಾನ ಅಂಶಗಳು ಅಸ್ಪಷ್ಟವಾಗುತ್ತವೆ. ಅಂದರೆ ಈ ಮೂರು ನೆಲೆಗಳಲ್ಲಿನ ಸಮಾನ ಅಂಶಗಳನ್ನು ಗುರುತಿಸುವ ಪ್ರಯತ್ನ ಇಲ್ಲಿ ಸಾಕಾರಗೊಳ್ಳುವುದಿಲ್ಲ. ಆದರೆ ಇವುಗಳ ಮಧ್ಯೆ ಬೇರುಬಿಟ್ಟ ಬಿರುಕುಗಳು ಧಾರಳವಾಗಿ ಕಾಣಿಸುತ್ತವೆಯನ್ನಬಹುದು.

ಸಾಮಾನ್ಯ ಹೆಣ್ಣು ಚಿಕ್ಕಂದಿನಿಂದಲೇ ಹಲವಾರು ನಿರ್ಬಂಧಗಳ ನಡುವೆಯೇ ಬೆಳೆಯಬೇಕಾದ ಪ್ರತಿಕೂಲ ಪರಿಸ್ಥಿತಿ ನಮ್ಮ ಸಮಾಜದಲ್ಲಿ ಇನ್ನೂ ಇದೆ. ಮನೆಯ ಆರ್ಥಿಕ ವ್ಯವಸ್ಥೆಯಲ್ಲಿ ಹೆಣ್ಣುಮಕ್ಕಳು ಹೆಗಲು ಕೊಡಬೇಕಾಗಿ ಬರುವ ನಿಮ್ನ ವರ್ಗದ ವರಲ್ಲಿ ಹೆಣ್ಣುಮಕ್ಕಳು ಎಷ್ಟೋ ಸಂದರ್ಭಗಳಲ್ಲಿ ಶಾಲೆಬಿಟ್ಟು ಬಿಡುವ ಪ್ರಸಂಗಗಳು

ಸಾಕಷ್ಟಿವೆ. ಅಲ್ಲದೆ, ಕೂಲಿ ವರ್ಗದ ಹೆಂಗಸರ ಹೆಚ್ಚಿನ ಸಮಯ ಪರಿಶ್ರಮದ ದುಡಿಮೆಗಾಗಿಯೇ ವ್ಯಯವಾಗುವುದರಿಂದ ತಮ್ಮ ಅಥವಾ ಕುಟುಂಬದ ಇನ್ನಿತರ ಬೇಡಿಕೆಗಳಿಗೆ ಹೆಚ್ಚಿನ ಗಮನಹರಿಸಲು ಸಾಧ್ಯವಾಗುವುದಿಲ್ಲ, ಇಂತಹ ಪರಿಸ್ಥಿತಿಗಳಲ್ಲಿ ಅವರು ಅಸಹಾಯಕರಾಗಿರುತ್ತಾರೆ. ಎಷ್ಟೋ ಸಲ ಈ ರೀತಿಯ ಅನ್ಯಾಯ-ಅಸಮಾನತೆ ಗಳಿಂದಾಗಿ .ಅನಿವಾರ್ಯವಾಗಿ ಅನುಭವಿಸಲೇಬೇಕಾಗಿ ಬರುವ ಕಷ್ಟಗಳಿಂದ ಕಂಗೆಡುವ ಮಹಿಳೆಯರು ಆತ್ಮವಿಶ್ವಾಸವನ್ನೇ ಕಳೆದುಕೊಂಡು ಹಲವಾರು ಸಮಾಜ-ವಿರೋಧಿ ಚಟುವಟಿಕೆಗಳಲ್ಲೂ ಭಾಗವಹಿಸಿ, ಎಲ್ಲೂ ಸಲ್ಲದೆ ಆತ್ಮಹತ್ಯೆ ಮಾಡಿಕೊಳ್ಳುವುದೂ ಇದೆ. ಇಂತಹ ಮಹಿಳೆಯರ ಸಂಖ್ಯೆ ಏರುತ್ತಿದೆ ಎಂದು ಅಂಕಿ-ಅಂಶಗಳು ಕೂಡ ತಿಳಿಸುತ್ತವೆ. ಈ ನಿಟ್ಟಿನಲ್ಲಿ ಬುದ್ಧಿಜೀವಿ ಮಹಿಳೆ ಮತ್ತು ಮಹಿಳಾ ಸಂಘಟನೆಗಳು ಹಾಗೂ ಸಾಮಾನ್ಯ ಮಹಿಳೆಯ ಮಧ್ಯೆ ಉಳಿದುಕೊಂಡಿರುವ ದೊಡ್ಡಗಾತ್ರದ ಬಿರುಕನ್ನು ಸರಿಪಡಿಸಬೇಕಾಗಿದೆ. ಇಲ್ಲದಿದ್ದಲ್ಲಿ, ಮಹಿಳೆಯರ ಸಮಸ್ಯೆಗೆ ಪರಿಹಾರ ಸೂಚಿಸುತ್ತೇವೆ-ಕಾರ್ಯೋನ್ಮುಖರಾಗುತ್ತೇವೆ ಎನ್ನುವ ಸುಧಾರಿತ ಮಹಿಳೆಯರು ಅಥವಾ ಸಂಘಸಂಸ್ಥೆಗಳ ಕಾರ್ಯಚಟುವಟಿಕೆಗಳು ಹಾಸ್ಯಾಸ್ಪದವೆನಿಸುತ್ತದೆ.

ಮಹಿಳೆಯರ ನಿಜವಾದ ಸಮಸ್ಯೆಗಳ ಬಗ್ಗೆ ಆಳವಾಗಿ ವಿಚಾರ ಮಾಡುವ ಗೋಜಿಗೆ ಹೋಗದೆ ಮೇಲ್ನೋಟಕ್ಕಷ್ಟೆ ಚಟುವಟಿಕೆಗಳನ್ನು ನಡೆಸುತ್ತಿರುವುದು, ವಿಚಾರಗೋಷ್ಠಿ, ಸಮಾವೇಶ, ತಿಂಡಿ-ತಯಾರಿಕೆ ಇತ್ಯಾದಿ ಕಾರ್ಯಕ್ರಮಗಳು ಮಹಿಳೆಯರ ಸಮಸ್ಯೆಗಳನ್ನು ಸ್ವಲ್ಪಮಟ್ಟಿಗೆ ಪರಿಹರಿಸಬಲ್ಲುವಾದರೂ ಅವುಗಳೇ ಕೊನೆ ಅಲ್ಲ. ಯಾವುದೇ ಈ ರೀತಿಯ ಕಾರ್ಯಚಟುವಟಿಕೆಗಳು ಪರಿಸರದ ಮಹಿಳೆಯರ ಆರ್ಥಿಕ ಹಾಗೂ ಸಾಮಾಜಿ ಸ್ಥಿತಿ-ಗತಿ, ಮಹಿಳೆಯರ ಶೋಷಣೆಗಳು, ಉದ್ಯೋಗಾವಕಾಶವಿಲ್ಲದಿರುವಿಕೆ, ವರದಕ್ಷಿಣೆ, ಅನಕ್ಷರತೆ, ಅಜ್ಞಾನ, ದೌರ್ಜನ್ಯ, ಅಸಮಾನತೆ ಇತ್ಯಾದಿಗಳ ಕಡೆಗೆ ಗಮನಹರಿಸಬೇಕಾಗುತ್ತದೆ. ಇದಕ್ಕಾಗಿ ಪ್ರಾಮಾಣಿಕ ಪ್ರಯತ್ನ ಅಗತ್ಯ. ಮಹಿಳೆಯರೊಂದಿಗೆ ಕುಳಿತು, ಅವರ ಕಷ್ಟ ಸುಖಗಳಲ್ಲಿ ಭಾಗಿಯಾಗಿ ಅವರ ಸಮಸ್ಯೆಗಳಿಗೆ ಸ್ಪಂದಿಸಿ, ಅವರಲ್ಲಿ ಸ್ವಕಲ್ಪನೆಯನ್ನು ವೃದ್ಧಿಸಿ, ಅವರಲ್ಲಿ ಮುಂದಾಳುತನ ತರುವಂಥ ಚಟುವಟಿಕೆಗಳನ್ನು ನಡೆಸಲು ನಿಜವಾದ ಅನುಕಂಪ ಹಾಗೂ ಶ್ರದ್ಧೆ ಬೇಕಾಗುತ್ತದೆ. ಈ ನಿಟ್ಟಿನಲ್ಲಿ ಬುದ್ಧಿಜೀವಿ ಮಹಿಳೆ, ಮಹಿಳಾ ಸಂಘಟನೆಯ ಮಹಿಳಾ ವಿಮೋಚನಕಾರರು ಯೋಚಿಸಿರುವರೆ? ಯೋಜಿಸಿರುವರೆ? ಕಾರ್ಯೋನ್ಮುಖರಾಗಿರುವರೆ? ಹೌದೆಂದಾದಲ್ಲಿ ಅವೆಷ್ಟು ವಾಸ್ತವವಾಗಿ ಸತ್ಯವಾಗಿವೆ ಎಂಬುದನ್ನು ನೋಡುವುದು ಅಗತ್ಯ. ಇಲ್ಲಿ ಒಂದು ವಿಚಾರ ಮುಖ್ಯವಾಗಿ ಗಮನಿಸಬೇಕಾಗಿದೆ. ಮಹಿಳೆಯರ ಸಮಸ್ಯೆಗಳ ಪರಿಹಾರ ಅಥವಾ ಮಹಿಳಾ ವಿಮೋಚನೆ ಇನ್ನೊಬ್ಬರು ಮಾಡಬೇಕಾದ ವಿಚಾರವಲ್ಲ. ಯಾಕೆಂದರೆ ಯಾರನ್ನು ಯಾರೂ ವಿಮೋಚನೆ ಮಾಡುವುದು ಅಸಾಧ್ಯದ ವಿಚಾರ. ಮಹಿಳೆಯರು ತಮ್ಮ ಬಗ್ಗೆ ಅರಿವನ್ನು ಹೊಂದಿದಾಗ

ಮಾತ್ರ, ಜಾಗೃತರಾದಾಗ ಮಾತ್ರ, ತಮ್ಮ ಸಮಸ್ಯೆಗಳನ್ನು ತಾವು ಗುರುತಿಸಿಕೊಂಡು ಪರಿಹಾರ ಮಾರ್ಗ ಅನುಸರಿಸಿದಾಗ ಮಾತ್ರ ತಮ್ಮ ವಿಮೋಚನೆ ಮಾಡಿಕೊಳ್ಳಬಲ್ಲರು; ಕಷ್ಟದಿಂದ-ಸಮಸ್ಯೆಯಿಂದ ದೂರಾಗಬಲ್ಲರು. ಆದ್ದರಿಂದ ಈ ಸಾಮಾನ್ಯ ಮಹಿಳೆಯರಲ್ಲಿ ಮುಂದಾಳುತನ ಮೂಡಿಸಬೇಕು; ಅವರೂ ಸಂಘಟಿತರಾಗುವಂತೆ ಮಾಡಬೇಕು. ಈ ನಿಟ್ಟಿನಲ್ಲಿ ಈಗ ಸರಕಾರವೇ ಅಲ್ಲದೆ ಸ್ವಯಂ ಸೇವಾ ಸಂಸ್ಥೆಗಳೂ ರೂಪಿಸಿರುವ ಮಹಿಳೆಯರ ಸ್ವಸಹಾಯ ಸಂಘ ಒಂದು ಯುಕ್ತ ಹಾಗೂ ದಿಷ್ಟ ಹೆಜ್ಜೆಯಾಗಿದೆ. ಈ ಕಾರ್ಯದಲ್ಲಿ ಬುದ್ಧಿಜೀವಿ ಮಹಿಳೆ ಹಾಗೂ ಇನ್ನಿತರ ಎಲ್ಲಾ ರೀತಿಯ ಮಹಿಳಾ ಜಾಗೃತಿ ಸಂಘಗಳು ಕೈಜೋಡಿಸಿದಾಗ ಎಲ್ಲಾ ಬಿರುಕುಗಳು ಅಳಿಸಿಹೋಗಲು ಸಾಧ್ಯ.

# ಮಹಿಳಾ ಚಳುವಳಿಗೆ ಕಸುವು ಒದಗಿಸಿದ ಎನ್.ಜಿ.ಒ.ಗಳು

*ಗುಲಾಬಿ ಬಿಳಿಮಲೆ*

ಎನ್.ಜಿ.ಒ.ಗಳೇ...ಅವುಗಳು ದುಡ್ಡು ತಿನ್ನಲಿಕ್ಕೇ ಇರುವಂಥವು

ಎನ್.ಜಿ.ಒ.ಗಳು...ಮಹಾ ತಲೆಹರಟೆಗಳು... ಎಲ್ಲಾದಕ್ಕು ಅಡ್ಡಗಾಲಿಡುತ್ತವೆ..

ಎನ್.ಜಿ.ಒ.ಗಳು...ಪಾಪ! ಯಾರ್ಯಾರಿಗಾಗಿಯೋ ಕಷ್ಟಪಡುತ್ತವೆ.

ಹೀಗೆ ಎನ್ .ಜಿ.ಒ(ಸರಕಾರೇತರ ಸಂಘಟನೆಗಳು)ಗಳ ಬಗ್ಗೆ ನಮ್ಮಲ್ಲಿ ಸಾಕಷ್ಟು ಮಿಶ್ರ ಅಭಿಪ್ರಾಯಗಳಿವೆ, ಗೊಂದಲಗಳಿವೆ. ಇದಕ್ಕೆ ಬಹುಶಃ ಬಹುಮುಖ್ಯ ಕಾರಣ-ಎನ್.ಜಿ.ಒ.ಗಳ ಹುಟ್ಟು, ಬೆಳವಣಿಗೆ, ಕಾರ್ಯವೈಖರಿ, ಕಾರ್ಯೋದ್ದೇಶಗಳ ಪರಿಚಯ ನಿಕಟವಾಗಿ ನಮಗಿಲ್ಲದಿರುವುದು. ಇತಿಹಾಸವನ್ನು ಕೆದಕಿ, ವರ್ತಮಾನವನ್ನು ಬೆದಕಿ, ಎನ್ .ಜಿ.ಒಗಳ ಕಡೆಗೆ ಕಣ್ಣು ಹಾಯಿಸಿದರೆ, ನಮ್ಮಲ್ಲಿನ ಈ ಬಗೆಗಿನ ಅನೇಕ ಗುಮಾನಿಗಳು ಪರಿಹಾರವಾಗ ಬಹುದು. ಅಂತಹ ಒಂದು ಸಣ್ಣ ಪ್ರಯತ್ನ ಇಲ್ಲಿದೆ.

ರಾಷ್ಟ್ರೀಯವಾದಿ ಚಳುವಳಿಯ ಬೆಳವಣಿಗೆಯನ್ನು ಕಂಡ ೨೦ನೇ ಶತಮಾನದ ಪೂರ್ವಾರ್ಧ, ರಾಷ್ಟ್ರೀಯವಾದಿ ದೃಷ್ಟಿಕೋನದಿಂದ ಮಹಿಳಾ ಚಳುವಳಿಗೆ ನಾಂದಿ ಹಾಡಿತ್ತು. ಸ್ವಾತಂತ್ರ್ಯಾನಂತರ, ಸಮುದಾಯ ಅಭಿವೃದ್ಧಿಗೆ ಹೆಚ್ಚಿನ ಒತ್ತು ನೀಡುವ ಆದ್ಯತೆಯ ಮೇರೆಗೆ ಕೇಂದ್ರೀಯ ಹಾಗೂ ರಾಜ್ಯ ಸಮಾಜ ಕಲ್ಯಾಣ ಮಂಡಳಿಗಳು ರಚಿತವಾದವು. ಇದರಿಂದಾಗಿ ದೊಡ್ಡ ಸಂಖ್ಯೆಯಲ್ಲಿ ಎನ್ .ಜಿ.ಒಗಳು ಆರಂಭವಾಗಿ ಮಹಿಳಾ ಸಂಬಂಧಿ ವಿಷಯಗಳನ್ನು ಕೈಗೆತ್ತಿಕೊಂಡವು. ಈ ಅವಧಿಯಲ್ಲಿ ಅಸಂಖ್ಯ ಮಹಿಳಾ ಮಂಡಲಗಳು, ಮಹಿಳಾ ಸಮಾಜಗಳು ಸೃಷ್ಟಿಯಾದವು. ೬೦ರ ದಶಕದ ಉತ್ತರಾರ್ಧದಲ್ಲಿ ಹಾಗೂ ೭೦ರ ದಶಕದಲ್ಲಿ, ಬಡವರ ಮತ್ತು ಶ್ರೀಮಂತರ ನಡುವಿನ ಅಂತರ ವಿಪರೀತವಾಗಿ 'ಅಭಿವೃದ್ಧಿ ಪ್ರಕ್ರಿಯೆ'ಯ ಬಗ್ಗೆಯೇ ಹುಬ್ಬೇರಿಸುವಂತಾಯ್ತು. ಈ ಸಂದರ್ಭದಲ್ಲಿ ಅನೇಕ ಎನ್.ಜಿ.ಒ. ಗಳು ತಮ್ಮ ದೃಷ್ಟಿಯನ್ನು ಬಡವರ ಅಭಿವೃದ್ಧಿಯತ್ತ ಹೊರಳಿಸಿದವು. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ನಿರತವಾಗಿದ್ದ ಅನೇಕ ಅಂತಾರಾಷ್ಟ್ರೀಯ ನೆರವು ಏಜೆನ್ಸಿಗಳು ಈ ಎನ್.ಜಿ.ಒ.ಗಳಿಗೆ ನಿಧಿ ದೇಣಿಗೆ ನೀಡ ತೊಡಗಿದವು. ಸಾಕಷ್ಟು ಮೊತ್ತ ಲಭ್ಯವಾದ ಕಾರಣ ಮಹಿಳೆಯರ ಆರೋಗ್ಯ ಮತ್ತು

ಶಿಕ್ಷಣದತ್ತ ಅವು ತಮ್ಮ ಗಮನವನ್ನು ಕೇಂದ್ರೀಕರಿಸಿದವು. ಆಂರ ದಶಕದಲ್ಲಿ ಮುಖ್ಯವಾಹಿನಿಯ ಆರ್ಥಿಕ ಅಭಿವೃದ್ಧಿ ಮಾದರಿಗಳು ತೀವ್ರ ಟೀಕೆಗೆ ಒಳಗಾದವು. ಉದಾರೀಕರಣ, ಖಾಸಗೀಕರಣ ಪ್ರಕ್ರಿಯೆಗಳು ಹಾಗೂ ರಾಚನಿಕ ಹೊಂದಾಣಿಕೆಯ ಕಾರ್ಯಕ್ರಮಗಳು ಬಡವರ ಮತ್ತು ಮಹಿಳೆಯರ ಮೇಲೆ ಪ್ರತಿಕೂಲ ಪರಿಣಾಮ ಬೀರಿದ್ದಕ್ಕಾಗಿ ಖಂಡಿಸಲ್ಪಟ್ಟಿವೆ. ಈ ಟೀಕೆ ಟಿಪ್ಪಣಿಗಳು, ಖಂಡನೆಗಳು ಅಭಿವೃದ್ಧಿಯ ಮಾದರಿಗಳನ್ನು ಎದುರಿಸಲು ಬಹುತೇಕ ಎನ್.ಜಿ.ಒ.ಗಳಗೆ ಸ್ಫೂರ್ತಿ ನೀಡಿದವು. ಹಾಗಾಗಿಯೇ ಇಂದು ಕಾರ್ಯಾಚರಣೆ ಕೇಂದ್ರಿತ ಎನ್.ಜಿ.ಒಗಳು ಸದ್ಯದ ಅಭಿವೃದ್ಧಿ ಮಾದರಿಯ ವಿರುದ್ಧ ಜನರಲ್ಲಿ ಅರಿವು ಮೂಡಿಸುವಲ್ಲಿ, ಮಹಿಳೆಯರ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಅವರನ್ನು ಒಗ್ಗೂಡಿಸುವಲ್ಲಿ ನಿರತವಾಗಿವೆ.

ವಿಭಿನ್ನ ಸಿದ್ಧಾಂತಗಳೊಂದಿಗೆ ವಿವಿಧ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವ ಎನ್.ಜಿ.ಒಗಳನ್ನು ವರ್ಗೀಕರಿಸಿ ವಿಶ್ಲೇಷಿಸುವುದು ತುಂಬ ಕಷ್ಟದ ಕೆಲಸ. ಮಹಿಳಾ ಸಮಸ್ಯೆಗಳನ್ನು ಆದ್ಯತೆಯ ವಿಷಯವಾಗಿ ಆರಿಸಿಕೊಂಡಿರುವ ಗುಂಪುಗಳ ಎರಡು ಮೂಲ ಮಾದರಿಗಳನ್ನು ಹೀಗೆ ಗುರುತಿಸಬಹುದು. ಒಂದನೆಯದು, ಸಂಪೂರ್ಣವಾಗಿ ಮಹಿಳೆಯರ ಸಮಸ್ಯೆಗಳ ಬಗ್ಗೆಯೇ ದುಡಿಯುವಂಥವು. ಎರಡನೆಯದು, ಮಹಿಳೆಯರು ಹಾಗೂ ಪುರುಷರು ಇಬ್ಬರ ಬಗ್ಗೆಯೂ ಕೆಲಸ ಮಾಡುವಂಥವು. ಈ ಮಾದರಿಯನ್ನೇ ಆಧರಿಸಿ ಮಹಿಳಾ ಸಮಸ್ಯೆಗಳನ್ನು ಗಮನಿಸಿಕೊಂಡು ದುಡಿಯುವ ಎನ್ .ಜಿ.ಒಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು.

ಕಲ್ಯಾಣದ ಚಟುವಟಿಕಾ ಕೇಂದ್ರಿತ ಎನ್.ಜಿ.ಒಗಳು: ಇವುಗಳ ಮುಖ್ಯ ಕಾಳಜಿಯೆಂದರೆ ತಾಯಂದಿರಾಗಿ, ಹೆಂಡತಿಯರಾಗಿ, ಮನೆರೂಪಿಸುವವರಾಗಿ ಮಹಿಳೆಯರ ಸ್ಥಾನಮಾನವನ್ನು ಗೌರವಿಸುವುದು. ಲಿಂಗತ್ವದ ಪರಿಕಲ್ಪನೆಯ ಬಗ್ಗೆಯಾಗಲೀ, ಅಧಿಕಾರ ಸಂಬಂಧಗಳ ಬಗ್ಗೆಯಾಗಲೀ ಇವು ಚಿಂತಿತವಾಗಿಲ್ಲ. ಉದಾ: ಮಹಿಳಾ ಮಂಡಲಗಳು, ಕೇಂದ್ರ ಮತ್ತು ರಾಜ್ಯ ಸಮಾಜ ಕಲ್ಯಾಣ ಮಂಡಳಿಗಳು ಇತ್ಯಾದಿ.

ಸಿದ್ಧಾಂತಾಧರಿತ ಮಹಿಳಾ ಸಂಘಟನೆಗಳು: ಸಾಮಾನ್ಯವಾಗಿ ಇವು ರಾಜಕೀಯ ಪಕ್ಷಗಳೊಂದಿಗೆ ಸಂಬಂಧ ಹೊಂದಿರುತ್ತವೆ. ಇವುಗಳು ಮಹಿಳೆಯರ ಸಮಸ್ಯೆಗಳನ್ನು ಪುರುಷ ಪ್ರಧಾನ ಸಮಾಜದ ಮತ್ತು ವರ್ಗ ಹಾಗೂ ಜಾತಿ ಆಧಾರಿತ ಸಮಾಜದ ಶೋಷಣೆಯಾಗಿ ಪರಿಗಣಿಸುತ್ತವೆ.

ಸಮಸ್ಯಾಧರಿತ ಸಂಘಟನೆಗಳು ಮತ್ತು ಬೆಂಬಲ ಗುಂಪುಗಳು: ಮಹಿಳಾ ಶಿಕ್ಷಣ, ಅರಿವು ಮೂಡಿಸುವುದು, ಪ್ರಜ್ಞೆ ಹೆಚ್ಚಿಸುವುದು ಗುಂಪುಗಳನ್ನು ಬಲಪಡಿಸುವುದು, ಪ್ರತಿಪಾದನೆ(Advocacy) ಇತ್ಯಾದಿಗಳನ್ನು ಇವುಗಳು ಕೈಗೆತ್ತಿಕೊಳ್ಳುತ್ತವೆ. ಲಿಂಗತ್ವ ಸಮಾನತೆಯ ಮೇಲೆ ಅಚಲ ನಂಬಿಕೆ ಇರಿಸಿ ಅನಿಟ್ಟಿನಲ್ಲಿ ಮುತುವರ್ಜಿವಹಿಸುತ್ತವೆ.

## ಎನ್.ಜಿ.ಒಗಳ ಸಹಭಾಗಿತ್ವ ಮತ್ತು ಜನಸಾಮಾನ್ಯ ಮಹಿಳೆಯರು

ವಿಭಿನ್ನ ಸೈದ್ಧಾಂತಿಕ ಚಿಂತನೆಗಳು ಹಾಗೂ ಕಾರ್ಯತಂತ್ರಗಳೊಂದಿಗೆ ಮಹಿಳಾ ಚಳುವಳಿ ತಳಕುಹಾಕಿಕೊಂಡಿದ್ದರೂ, ಎನ್ .ಜಿ.ಒಗಳ ನೇರ ಸಹಭಾಗಿತ್ವವು ಅಲ್ಲಿ ಸಾಕಷ್ಟು ಪರಿಣಾಮ ಬೀರಿದೆ. ಇವುಗಳ ವ್ಯಾಪಕತೆ ಆಗಾಧವಾಗಿರುವುದರಿಂದ ಮತ್ತು ಮೂಲಭೂತವಾಗಿ ಬುಡಮಟ್ಟದಲ್ಲಿ (Grassroot level) ಕೆಲಸ ಮಾಡುವುದರಿಂದ ಮಹಿಳಾ ಹಕ್ಕುಗಳು ಲಿಂಗತ್ವ ಸಮಾನತೆ, ಅನ್ಯಾಯ, ಹಿಂಸೆ ಮುಂತಾದವುಗಳ ಬಗ್ಗೆ ಅರಿವು ಮೂಡಿಸುವಲ್ಲಿ ಅವು ಬಹುತೇಕ ಯಶಸ್ವಿಯಾಗಿವೆ. ಸಂಘಟನೆಯೊಂದನ್ನು ಆರಂಭಿಸುವ ಉದ್ದೇಶ ಯಾವುದೇ ಇರಲಿ, ತೆರೆಯಮರೆಯ ಅಜೆಂಡಾ ಏನೇ ಇರಲಿ, ಸಂಘಟನೆಯೊಳಗಡೆ ಮಹಿಳೆಯರು Educate ಅಗುತ್ತಾ ಹೋದಂತೆ ಸಂಘಟನೆಯ ದಿಕ್ಕನ್ನು ಹೇಗೆ ಅವರೇ ನಿರ್ಧರಿಸುತ್ತಾರೆ ಎನ್ನುವುದಕ್ಕೆ ಕೆಲವು ಉದಾಹರಣೆಗಳು ಇಲ್ಲಿವೆ.

'ಮಹಿಳಾ ಸಮಖ್ಯ' ಸರಕಾರದ ಮಹಿಳಾಭಿವೃದ್ಧಿ ಮತ್ತು ಸಶಕ್ತೀಕರಣದ ಕಾರ್ಯಕ್ರಮವಾಗಿತ್ತು. ಸ್ತ್ರೀವಾದಿಗಳು, ಶಿಕ್ಷಣ ತಜ್ಞರು, ಎನ್.ಜಿ.ಒಗಳು ಮೊದಲಾದವರೊಂದಿಗೆ ಸಾಕಷ್ಟು ಚರ್ಚೆ ನಡೆಸಿ ಅದನ್ನು ವಿನ್ಯಾಸಗೊಳಿಸಲಾಗಿತ್ತು. ಆದರೆ, ಒಂದು ಬಾರಿ ಸಂಘಟನೆ ಬಲಗೊಂಡು ಅದರ ಸದಸ್ಯೆಯರು ವಿವೇಚನಾ ಶಕ್ತಿ ಪಡೆದುಕೊಂಡದ್ದೇ ತಡ ಅವರು ಅರ್ಥಹೀನ ಸರಕಾರಿ ಕಾರ್ಯಕ್ರಮಗಳನ್ನೇ ಪ್ರಶ್ನಿಸ ತೊಡಗಿದರು. ಸಮಖ್ಯದ ಅಡಿಯಲ್ಲಿ ಸಂಘಟಿತರಾದ ಮಹಿಳೆಯರು ಅಪರ್ಯಾಪ್ತ ತಯಾರಿಯನ್ನು ನೆಪಮಾಡಿ ಅನೇಕ ಸಂದರ್ಭಗಳಲ್ಲಿ DWCRA ವನ್ನು ನಿರಾಕರಿಸಿದರು. NABARDನ ವಿಷಯದಲ್ಲಿ, ಮಹಿಳೆಯರು ಈಗಾಗಲೇ ಪರಿಣತರಾಗಿರುವ ಚಟುವಟಿಕೆಗಳಿಗೆ ಸಾಲ ನೀಡಬೇಕೇ ಹೊರತು ಪೂರ್ವನಿಗದಿತ ಆರ್ಥಿಕ ಚಟುವಟಿಕೆಗಳಿಗೆ ಅಲ್ಲ ಎಂದು ಒತ್ತಾಯಿಸಿದರು. ಕುಟುಂಬಯೋಜನೆಗೆ ಸಂಬಂಧಿಸಿದಂತೆ ಕೆಲವು ಗುರಿಗಳನ್ನು ಮುಟ್ಟಬೇಕೆಂದು ತಳಮಟ್ಟದ ಕಾರ್ಯಕರ್ತೆಯರಿಗೆ ಒತ್ತಡ ತಂದಾಗ ಅವರು ಅದನ್ನು ನಿರಾಕರಿಸಿ ಸರಕಾರಕ್ಕೆ ಇರಿಸುಮುರಿಸು ಉಂಟುಮಾಡಿದರು. ಸಮಖ್ಯದಿಂದ ಹೊರನಿಂತು ಗಮನಿಸುವುದಾದರೆ, ಸ್ವ-ಸಹಾಯ ಗುಂಪುಗಳು ಮಹಿಳಾ ಸಮಸ್ಯೆಗಳತ್ತ ತಮ್ಮ ಗಮನವನ್ನೇ ಕೇಂದ್ರೀಕರಿಸಲು ಎನ್.ಜಿ.ಒಗಳು ನೀಡಿದ ತರಬೇತಿಗಳು ಕಾರಣವಾಗಿವೆ. ಸದ್ದಿಲ್ಲದೆ ಕೆಲಸ ಮಾಡುವ ಅನೇಕ ಎನ್.ಜಿ.ಒಗಳು ದಕ್ಷಿಣ ಕನ್ನಡದಲ್ಲೇ ಇರುವುದನ್ನು ನಾನು ಗಮನಿಸುತ್ತಿರುತ್ತೇನೆ. ಒಂದು ಉದಾಹರಣೆಯೆಂದರೆ-ಇದೀಗ ವಿನಾಶದ ಅಂಚಿಗೆ ಸರಿಯುತ್ತಿರುವ ಬೀಡಿ ಉದ್ಯಮ ಬೀಡಿ ಕಾರ್ಮಿಕ ಮಹಿಳೆಯರಿಗೆ ಪ್ರತಿಕೂಲವಾಗಿ ಪರಿಣಮಿಸಲಿದೆ. ಹಾಗಾಗಿ ಇಲ್ಲಿ ಪರ್ಯಾಯ ವ್ಯವಸ್ಥೆ ತೀರಾ ಅನಿವಾರ್ಯ. ಈ ನಿಟ್ಟಿನಲ್ಲಿ ಒಂದಷ್ಟು ಎನ್.ಜಿ.ಒಗಳು ಭಾಷಣ ಘೋಷಣೆಗಳಿಲ್ಲದೆ ಕೆಲಸ ಮಾಡುತ್ತಿವೆ. ಸಾಮಾಜಿಕ ಅನ್ಯಾಯ ಶೋಷಣೆಗಳ ವಿರುದ್ಧ ಹೋರಾಡ ಬಯಸುವವರಿಗೆ ಎನ್.ಜಿ.ಒಗಳು ಬೆಂಬಲಕೊಟ್ಟು ಯಶ ಸಾಧಿಸಿರುವುದೂ

ನಮ್ಮ ಮುಂದಿದೆ. ಮೀರತ್ ನಲ್ಲಿ ಬೇಡಿಯಾ ಸಮುದಾಯವು ವೇಶ್ಯಾವೃತ್ತಿಯನ್ನು ಜೀವನೋಪಾಯಕ್ಕೆ ಬಳಸಿಕೊಂಡಿತ್ತು. ರಾಮ್ ಸನೇಹಿ ಎಂಬವರು ಇದರ ವಿರುದ್ಧ ಕೆಲಸ ಮಾಡ ಬಯಸಿದರು. ಸರಕಾರದಿಂದಾಗಲೀ, ಇತರರಿಂದಾಗಲೀ ಬೆಂಬಲ ದೊರೆಯಲಿಲ್ಲ. ಆಗ 'ಅಖಿಲ ಭಾರತೀಯ ಸಾಮಾಜಿಕ ಸ್ವಸ್ಥ ಸಂಘ'ಎಂಬ ಸಂಘಟನೆಯು ಅವರ ಬೆಂಬಲಕ್ಕೆ ಬಂತು. ಇಡೀ ಸಮುದಾಯವನ್ನೇ ಅವರ ವೇಶ್ಯಾವಾಟಿಕೆಯಿಂದ ಪಾರು ಮಾಡಿದರು. ಎನ್ .ಜಿ.ಒ ಬೆಂಬಲದಿಂದ ಪಂಚಾಯತಿಗೆ ಆರಿಸಿಬಂದ ಮಹಿಳೆಯರು ಅತ್ಯದ್ಭುತ ಆಡಳಿತ ನಡೆಸಿರುವುದಕ್ಕೆ ಸಾಕಷ್ಟು ಪುರಾವೆಗಳಿವೆ. ನರ್ಮದಾ ಬಚಾವ್ ಆಂದೋಲನದ ಹಿಂದೆ ಅದೆಷ್ಟೋ ಎನ್.ಜಿ.ಒಗಳ ಸಹಾಯ ಹಸ್ತವಿದೆ. ಇಂತಹ ಎಲ್ಲಾ ಕಾರಣಗಳಿಗಾಗಿ ಎನ್.ಜಿ.ಒಗಳನ್ನು ಮಹಿಳಾ ಚಳುವಳಿಯ ಒಂದು ಭಾಗವೆಂದು ಪರಿಗಣಿಸಬಹುದು.

ಗುಣಾತ್ಮಕ ಪರಿಣಾಮಗಳ ಹೊರತಾಗಿಯೂ ಎನ್.ಜಿ.ಒಗಳ ಸಹಭಾಗಿತ್ವದಲ್ಲಿ ಎಲ್ಲವೂ ಸರಿಯಾಗಿದೆ ಎನ್ನುವಂತಿಲ್ಲ. ಊರಿದ್ದಲ್ಲಿ ಕೊಳೆಗೇರಿ ಇದ್ದೇ ಇರುತ್ತದೆ ಎಂಬಂತೆ ಇಲ್ಲೂ ಇದೆ. ಕೇವಲ ನಿಧಿ ದೇಣಿಗೆ ಪಡೆಯಲಷ್ಟೇ ಮಹಿಳಾ ಸಮಸ್ಯೆಗಳನ್ನು ಎತ್ತಿಕೊಂಡಿರುವುದು, ತಮ್ಮ ಸಂಘಟನೆಯ ಒಳಗಡೆಯೇ ಲಿಂಗತ್ವ ಸಮಾನತೆ ಇರದಿರುವುದು, ಮಹಿಳಾ ಸಮಸ್ಯೆಗಳನ್ನು ಏಕರೂಪವಾಗಿ ಗುರುತಿಸಲು ಶಕ್ಯರಾಗದ್ದು ಇವೆಲ್ಲವೂ ಬೆಟ್ಟುಮಾಡಿ ತೋರಿಸುವಂತಹ ಋಣಾತ್ಮಕ ಅಂಶಗಳು ಎನ್ನಬಹುದು. ಎನ್.ಜಿ.ಓ.ಗಳ ಸಂಪರ್ಕಜಾಲದಲ್ಲಿ ಸಮನ್ವಯದ ಕೊರತೆ ಎದ್ದು ಕಾಣುವಂತಿದ್ದು ಇವುಗಳ ಸಾಮಾಜಿಕ ಕಳಕಳಿಯ ಬಗ್ಗೆ ಒಮ್ಮೊಮ್ಮೆ ಸಂಶಯ ಮೂಡಿಸುತ್ತವೆ. ಮುಖ್ಯವಾಹಿನಿಯಲ್ಲಿ ಕೆಲಸ ಮಾಡುವವರು ತಮ್ಮ ಎಲ್ಲಾ ಕಾರ್ಯಕ್ರಮಗಳಲ್ಲೂ ಲಿಂಗತ್ವದ ವಿಷಯಗಳನ್ನು ಅಳವಡಿಸಿಕೊಳ್ಳಬೇಕೆನ್ನುವ ಪರಿಜ್ಞಾನ ಹೊಂದಿಲ್ಲದಿರುವುದು ಅವರ ಅಪಕ್ವ ಚಿಂತನೆಗಳಿಗೆ ಮಾದರಿಯಾಗುತ್ತದೆ. ಇಂತಹ ಹಿನ್ನೆಲೆಯ ಸಂಘಟನೆಗಳಲ್ಲಿ ಯಾವುದೇ ಬದ್ಧತೆ ಇಲ್ಲದೆ ಅವಕಾಶವಾದಿತನವು ಆಕ್ರಮಿಸಿ ಬಿಡುವ ಅಪಾಯವಿದೆ.

ಎನ್ ಜಿ ಒ.ಗಳಲ್ಲಿ ದೇಶೀ ದೇಣಿಗೆ ಪಡೆಯುವವರು ಕೆಲವರಾದರೆ ವಿದೇಶೀ ದೇಣಿಗೆ ಪಡೆಯುವವರು ಇನ್ನು ಕೆಲವರು. ಇಲ್ಲಿ,ವಿದೇಶೀ ದೇಣಿಗೆ ಪಡೆಯುವ ಸಂಘ ಸಂಸ್ಥೆಗಳ ಕೊಡುಗೆಯನ್ನು ಸ್ವಲ್ಪ ಎಚ್ಚರದಿಂದ ಗಮನಿಸಬೇಕಾಗುತ್ತದೆ. ಯಾಕೆಂದರೆ ನಿಧಿ ದೇಣಿಗೆ ಒದಗಿಸುವ ಏಜೆನ್ಸಿಗಳ ಆದ್ಯತೆಗಳು ಬದಲಾಗುತ್ತಾ ಹೋದಂತೆ ದೇಣಿಗೆ ಪಡೆಯುವ ಎನ್ .ಜಿ.ಒ.ಗಳ ಆದ್ಯತೆಗಳು ಬದಲಾಗಬೇಕಾಗುತ್ತವೆ. ಮೂಲಭೂತವಾದಿ ಧಾರ್ಮಿಕ ಗುಂಪುಗಳಿಂದ ಹಣ ಪಡೆಯುವ ಸಂಘಟನೆಗಳು ಮಹಿಳಾ ಚಳುವಳಿಯ ಸಿದ್ಧಾಂತದೊಂದಿಗೆ ಕೆಲಸ ನಿರ್ವಹಿಸಲಾರವು! ಇಂತಹಾ ಸಂದರ್ಭಗಳಲ್ಲಿ ಸಾಕಷ್ಟು ಸಂಘರ್ಷ ತಲೆದೋರಬಹುದು.

ಇವೆಲ್ಲವುಗಳನ್ನು ಮೀರಿದ ಅಪಾಯವೊಂದನ್ನು ಇಲ್ಲಿ ಉಲ್ಲೇಖಿಸಬೇಕಾಗಿದೆ. ವಿದೇಶೀ ದೇಣಿಗೆಯನ್ನು ವ್ಯಾಪಕವಾಗಿ ದುರುಪಯೋಗಪಡಿಸಿಕೊಂಡ ಎನ್.ಜಿ.ಒ.ಗಳು ಹಿಂದೆಯೂ ನಮ್ಮಲ್ಲಿದ್ದವು, ಈಗಲೂ ನಮ್ಮಲ್ಲಿವೆ. ಮಹಾನಗರ ಕೇಂದ್ರಗಳಲ್ಲಿ ಕಚೇರಿ ಹೊಂದಿದ್ದು ಐಷಾರಾಮದ ಎಲ್ಲಾ ಸೌಲಭ್ಯಗಳನ್ನು ಹೊಂದಿ, ಚಿಕ್ಕಾಸಿನ ಬದ್ಧತೆಯನ್ನೂ ಇಟ್ಟುಕೊಳ್ಳದೆ ಅತ್ಯದ್ಭುತ ಯೋಜನಾ ವರದಿಗಳನ್ನು ಕುಳಿತಲ್ಲೇ ಸಿದ್ಧಪಡಿಸಿ ಕೇವಲ ಐಷಾರಾಮದ ಜೀವನ ನಿರ್ವಹಣೆಗೆ ನಿಧಿಯನ್ನು ಬಳಸಿಕೊಳ್ಳುವ 'Elite' ಎನ್.ಜಿ.ಒ.ಗಳಿರುವುದು ಗುಟ್ಟಿನ ಸಂಗತಿಯೇನಲ್ಲ. ವಿಪರ್ಯಾಸವೆಂದರೆ, ಹಳ್ಳಿಗಾಡಿನ ಬಗ್ಗೆ ಅಧ್ಯಯನ ಮಾಡುವ, ಅನಕ್ಷರಸ್ಥ ಮಹಿಳೆಯರೊಂದಿಗೆ ಕೆಲಸ ಮಾಡುವ ಘನ ಉದ್ದೇಶದ ಪ್ರಾಜೆಕ್ಟ್ ಹೊಂದಿರುವ ಈ ಮಂದಿಗೆ ಇಂಗ್ಲಿಶ್ ಬಿಟ್ಟರೆ ಬೇರೆ ಭಾಷೆ ಬರುವುದಿಲ್ಲ; (ಕಲಿಯುವ ಪ್ರಯತ್ನವನ್ನೂ ಮಾಡುವುದಿಲ್ಲ) ಸ್ಥಳೀಯ ಸಂಸ್ಕೃತಿಯ ಪರಿಚಯವಿರುವುದಿಲ್ಲ; ಭಾಷೆಯ ಹಿಡಿತವಿರುವುದಿಲ್ಲ; ಮಹಿಳೆಯರ ಸಂಪರ್ಕವಿರುವುದಿಲ್ಲ. ಆದರೂ, ಕೆಲಸ ಮಾಡಿದ ಬಗ್ಗೆ ವರದಿ ಒಪ್ಪಿಸುವ ಕರಾಮತ್ತು ಅವರಲ್ಲಿರುವುದರಿಂದ, ಹಣಕಾಸು ದೇಣಿಗೆ ಅವರಿಗೆ ಹರಿದು ಬರುತ್ತಲೇ ಇರುತ್ತದೆ. ಬಡ ಮಹಿಳೆಯರಿಗಾಗಿ ಭವ್ಯ ಹೋಟೇಲುಗಳಲ್ಲಿ ದೊಡ್ಡ ದೊಡ್ಡ ಸೆಮಿನಾರುಗಳನ್ನು ಅವರು ನಡೆಸುತ್ತಲೇ ಇರುತ್ತಾರೆ! ದೊಡ್ಡ ದೊಡ್ಡ ಪುಸ್ತಕಗಳನ್ನು ಬರೆಯುತ್ತಲೇ ಇರುತ್ತಾರೆ! ಈ ಎಲ್ಲ ಅವಕಾಶವಾದಿಗಳ ನಡುವೆಯೇ, ಒಳ್ಳೆಯ ಎನ್ .ಜಿ.ಒ.ಗಳನ್ನು ಮತ್ತು ಎನ್ .ಜಿ.ಒ.ಗಳು ಮಾಡಿದ ಒಳ್ಳೆಯ ಕೆಲಸಗಳನ್ನು ಗುರುತಿಸಬೇಕಾಗುತ್ತದೆ.

ಒಟ್ಟಿನಲ್ಲಿ, ಸಮಸ್ಯೆ ಯಾವುದೇ ಇರಬಹುದು ಆ ಬಗ್ಗೆ ಪ್ರಬಲ ಜನಾಭಿಪ್ರಾಯ ಮೂಡಿದಾಗ ಸರಕಾರಗಳು ನಡುಗಬೇಕಾಗುತ್ತವೆ, ಪ್ರತಿಗಾಮಿ ಶಕ್ತಿಗಳೂ ಹೆದರಲೇಬೇಕಾಗುತ್ತವೆ. ಇಂತಹ ಜನಾಭಿಪ್ರಾಯ ಮೂಡಿಸಲು ಸಂಘಟನೆಗಳು ಬಹಳ ಮುಖ್ಯವಾಗುತ್ತವೆ. ಪ್ರಬಲವಾದ ಎನ್ .ಜಿ.ಒ.ಗಳು ನಮ್ಮಲ್ಲಿ ಇದೆಯಾದರೆ, ಅವನ್ನು ಸಮರ್ಥವಾಗಿ ಬಳಸಿಕೊಂಡು ಗುರಿಮುಟ್ಟುವುದು ನಮ್ಮ ಜವಾಬ್ದಾರಿಯಾಗಿದೆ.

(ಈ ಲೇಖನದಲ್ಲಿ ರಾಮೇಶ್ವರಿವರ್ಮಾರವರ Women's Issue-Involvement of NGOs ಎಂಬ ಲೇಖನದ ಕೆಲವು ಅಂಶಗಳನ್ನು ಬಳಸಿಕೊಳ್ಳಲಾಗಿದೆ)

# ಮುಸ್ಲಿಂ ಸಮಾಜದ ಮಹಿಳೆಯರ ಕೆಲವು ಸಮಸ್ಯೆಗಳು

*ಸಾರಾ ಅಬೂಬಕ್ಕರ್*

ಮುಸ್ಲಿಂ ಸಮಾಜದಲ್ಲಿ ಮುಸ್ಲಿಂ ಮಹಿಳೆಯರ ಸ್ವಾತಂತ್ರ್ಯ ಮತ್ತು ಸಮಾನತೆಗಾಗಿ ಹಾಗೂ ಇವರ ಶೋಷಣೆಯ ವಿರುದ್ಧ ಹೋರಾಡುವ ಸ್ತ್ರೀವಾದೀ ದೃಷ್ಟಿಕೋನದಿಂದ ಕಾರ್ಯವೆಸಗುವ ಮಹಿಳಾ ಸಂಘಟನೆಗಳೇನಾದರೂ ಇವೆಯೇ, ಹಾಗೆ ಇದ್ದರೆ ಅವುಗಳ ಕಾರ್ಯ ವೈಖರಿ ಏನು, ವಿದ್ಯಾವಂತರೂ, ಆರ್ಥಿಕಾನುಕೂಲವುಳ್ಳವರೂ ಆದ ಮಹಿಳೆಯರು ಆರ್ಥಿಕವಾಗಿ ಹಿಂದುಳಿದ ಮಹಿಳೆಯರ ಶೋಷಣೆಗೆ ಯಾವ ರೀತಿ ಸ್ಪಂದಿಸಿದ್ದಾರೆ ಮುಂತಾದ ವಿಷಯಗಳ ಕುರಿತು ಚಿಂತಿಸಿದಾಗ ತೀರಾ ನಿರಾಶದಾಯಕವಾದ ಉತ್ತರವೇ ದೊರೆಯುತ್ತದೆ. ಈ ಸ್ಪಂದನದ ಕುರಿತು ಬರೆಯುವ ಮೊದಲು ಮುಸ್ಲಿಂ ಮಹಿಳೆಯರ ಶೋಷಣೆಯ ಒಂದು ಉದಾಹರಣೆ ಕೊಡಬೇಕಾಗಿದೆ.

ಪದವೀಧರೆಯಾದ ಹೆಣ್ಣು ಮಗಳೋರ್ವಳು ಮದುವೆಯಾಗಿ ಇಬ್ಬರು ಗಂಡು ಮಕ್ಕಳ ತಾಯಿಯೂ ಆದಳು. ಆಕೆಯ ಹೆಸರಿನಲ್ಲಿ ಆಕೆಯ ಪಾಲಿಗೆ ಬಂದ ಮೂರು ಮನೆಗಳೂ ಇದ್ದವು. ಮಕ್ಕಳಿಗೀಗ ಎಂಟು ಮತ್ತು ಹನ್ನೆರಡು ವರ್ಷ ಪ್ರಾಯವಾಗಿದೆ. ಕಳೆದ ಒಂದೆರಡು ವರ್ಷಗಳಿಂದ ಆತನು ಆಕೆಯೊಡನೆ ಆ ಮನೆಗಳನ್ನು ತನ್ನ ಹೆಸರಿಗೆ ನೋಂದಣಿ ಮಾಡಬೇಕೆಂದು ಒತ್ತಾಯಿಸ ತೊಡಗಿದನು. ಆಕೆ ಬಗ್ಗದಿದ್ದಾಗ, "ನಿನಗೆ ಮನೆ ಬೇಕೇ ನಾನು ಬೇಕೇ?" ಎಂದು ಬೆದರಿಸ ತೊಡಗಿದನು. ಮನೆಗಳನ್ನು ಆತನ ಹೆಸರಿಗೆ ನೋಂದಾಯಿಸದಿದ್ದರೆ ಆತನು ತನ್ನನ್ನು ಬಿಟ್ಟು ಹೋದಾನೆಂಬ ಭಯದಿಂದ ಆಕೆ ಮೂರು ಮನೆಗಳನ್ನೂ ಆತನ ಹೆಸರಿಗೆ ಬರೆದು ಕೊಟ್ಟಳು. ಮನೆಗಳು ಕೈಗೆ ಬಂದೊಡನೆ ಆತನು ಅವುಗಳೆಲ್ಲವನ್ನೂ ಕೆಲವು ಲಕ್ಷ ರೂಪಾಯಿಗಳಿಗೆ ಮಾರಾಟ ಮಾಡಿ ಇನ್ನೊಂದೂರಿಗೆ ಹೋಗಿ ಇನ್ನೋರ್ವಳನ್ನು ಮದುವೆಯಾದನು. ಒಮ್ಮೆ ಕೊಲ್ಲಿ ರಾಷ್ಟ್ರಕ್ಕೂ ಹೋಗಿ ಬಂದನು. ಇದೇ ಹಣದಲ್ಲಿ ಕಾರು ಕೊಂಡುಕೊಂಡು ಎರಡನೇ ಹೆಂಡತಿಯೊಡನೆ ಸುತ್ತಾಡ ತೊಡಗಿದನು. ರಾಜಿ ಮಾತುಕತೆಗೆ ಹೋದವರೊಡನೆ "ನೀವು ತಲಾಖ್ ಬೇಕೆಂದು ಕೇಳಿಕೆ ಮುಂದಿಡಿ. ನಾನು ತಲಾಖ್ ಕೊಡುತ್ತೇನೆ(ಹುಡುಗಿಯ ಕಡೆಯವರು ತಲಾಖ್ ಕೇಳಿ ಪಡೆದರೆ ಮೆಹರ್ ನೀಡಬೇಕಾಗಿಲ್ಲ). ನೀವು ಕೋರ್ಟಿಗೆ ಹೋಗಬಾರದು" ಎಂದನು. ಆಕೆಯದೆಲ್ಲವನ್ನೂ ಕಸಿದುಕೊಂಡು, ಆಕೆಯ ಕತ್ತಿಗೆ ಇಬ್ಬರು ಮಕ್ಕಳನ್ನು ಕಟ್ಟಿ, ಆಕೆಯ

ಮುಂದಿನ ಬದುಕಿಗೆ ಏನೂ ಹಾದಿ ಮಾಡದೆ ತಾನು ಹೊಸ ಹೆಂಡತಿಯ ಗಂಡನಾಗಿ ಸುಖಿಸುತ್ತಿದ್ದಾನೆ! 'ಆತ ನನಗೇನೂ ಕೊಡುವುದು ಬೇಡ; ನನ್ನ ಮಕ್ಕಳ ತಂದೆಯಾಗಿ ಮನೆಗೆ ಬಂದು ಹೋಗುತ್ತಿರಲಿ ನನಗೊಬ್ಬ ಗಂಡನಿದ್ದಾನೆಂದು ಊರವರು ಗುರುತಿಸಿದರೆ ಸಾಕು' ಎನ್ನುವ ಆಕೆಗೆ ಆತನು ಮೇಲಿನಂತೆ ಉತ್ತರಿಸಿದನು.

ಈ ರೀತಿ ಮದುವೆಯಾಗಿ ಹೆಂಡತಿಯ ಮೈಮೇಲಿರುವ ಚೂರುಪಾರು ಒಡವೆಗಳನ್ನು ಮಾರಿ, ಯೌವನ ಮಾಸುವವರೆಗೆ ಆಕೆಯೊಡನೆ ಸುಖಿಸಿ ಎರಡು, ಮೂರು ಅಥವಾ ಐದಾರು ಜನ ಮಕ್ಕಳನ್ನು ಹುಟ್ಟಿಸಿ ಆಕೆಯ ಕತ್ತಿಗೆ ಕಟ್ಟಿ ಜಾಗ ಖಾಲಿ ಮಾಡಿ ಇನ್ನೋರ್ವಳನ್ನು ಮದುವೆಯಾಗುವ ಗಂಡಂದಿರು ಬಡ ಮುಸ್ಲಿಂ ಕುಟುಂಬಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಇವರ ಮೇಲೆ ಯಾರಿಗೂ ಯಾವ ನಿಯಂತ್ರಣವೂ ಇಲ್ಲ. ಧರ್ಮಗುರುಗಳ ಬಳಿಗೆ ಹೋಗಿ ದೂರು ನೀಡಿದರೆ, 'ನಾಲ್ಕು ಜನ ಹೆಂಡತಿಯರನ್ನಿಟ್ಟುಕೊಳ್ಳಬಹುದೆಂಬುದು ನಮ್ಮ ಧಾರ್ಮಿಕ ನಿಯಮ. ಇದನ್ನು ಪ್ರಶ್ನಿಸುವಂತಿಲ್ಲ. ಮಕ್ಕಳಿಗೆ ಮಾಸಾಶನ ಕೊಡಬೇಕು. ಅದು ಕೊಡದಿದ್ದರೆ ನೀವು ನ್ಯಾಯಾಲಯಕ್ಕೆ ಹೋಗಿ' ಎಂದಷ್ಟೇ ಹೇಳುತ್ತಾರಲ್ಲದೆ ಬೇರೆ ಯಾವ ರೀತಿಯ ಪರಿಹಾರವನ್ನೂ ಸೂಚಿಸುವುದಿಲ್ಲ. ನ್ಯಾಯಾಲಯಕ್ಕೆ ಹೋಗಲು ಬೇಕಾದ ಆರ್ಥಿಕ ಅನುಕೂಲವೂ ಇವರಿಗಿಲ್ಲ; ಆ ಹಾದಿಯೂ ತಿಳಿಯದು. ಹಾಗೆ ಹೋಗಲು ಬೇಕಾದ ಮಾರ್ಗದರ್ಶನ ನೀಡಿ ಸಹಕರಿಸುವ, ಮುಸ್ಲಿಂ ಮಹಿಳೆಯರದ್ದೇ ಆದ ಸಂಘಟನೆಗಳಂತೂ ಇಲ್ಲವೇ ಇಲ್ಲ. ಮಂಗಳೂರಿನ ಆಸುಪಾಸಿನ ಕೆಲವು ಮುಸ್ಲಿಂ ಮಹಿಳೆಯರು ಹಿಲ್ಡಾ ರೋಯಪ್ಪನ್ ಅವರು ಸ್ಥಾಪಿಸಿದ 'ಪ್ರಜ್ಞಾ' ಎಂಬ ಕೌನ್ಸಿಲಿಂಗ್ ಕೇಂದ್ರಕ್ಕೆ ಹೋಗಿ ಮಾರ್ಗದರ್ಶನ ಪಡೆಯುತ್ತಾರೆ. ಅವರಿಂದಲೂ ಹೆಚ್ಚಿನ ನೆರವು ನೀಡಲು ಸಾಧ್ಯವಾಗುವುದಿಲ್ಲ. ಮುಸ್ಲಿಂ ವ್ಯಕ್ತಿ ನಿಯಮದಲ್ಲೇ ಇರುವ ಕೆಲವು ತೊಡಕುಗಳ ನಿವಾರಣೆಯಾಗಬೇಕು. ವ್ಯಕ್ತಿ ನಿಯಮದಲ್ಲೇ ಬದಲಾವಣೆಯಾಗಬೇಕು. ಆದರೆ ಮುಸ್ಲಿಂ ಮಹಿಳೆಯರಿಗಾಗಿ ಇಂತಹ ಒಂದು ಬೇಡಿಕೆಯನ್ನು ಈ ಕ್ರೈಸ್ತ ಸಂಘಟನೆ ಮುಂದಿಡುವುದು ಸಾಧ್ಯವಿಲ್ಲ. ಮುಸ್ಲಿಂ ಮಹಿಳೆಯರ ಶೋಷಣೆಯ ವಿರುದ್ಧ ಮುಸ್ಲಿಂ ಮಹಿಳೆಯರೇ ಧ್ವನಿ ಎತ್ತಬೇಕಷ್ಟೆ. ನಿರಕ್ಷರತೆ ಹಾಗೂ ಬಡತನದಿಂದ ಮುರುಟಿ ಹೋದ ಈ ಹೆಣ್ಣು ಮಕ್ಕಳ ಧ್ವನಿ ಹೊರಗೆ ಕೇಳಿಸುವ ಸಾಧ್ಯತೆಯಾದರೂ ಎಲ್ಲಿದೆ?

ಇಂದು ಹೊಸ ಎಚ್ಚರದ ಹಲವು ಧಾರ್ಮಿಕ ಸಂಘಟನೆಗಳು ಮಹಿಳಾ ಶೋಷಣೆಯ ಕುರಿತು ಮಾತನಾಡುತ್ತಾನೆ. ವರದಕ್ಷಿಣೆಯನ್ನು ಮಾತ್ರ ಇವರು ಮಹಿಳಾ ಶೋಷಣೆ ಎಂದು ಗುರುತಿಸುತ್ತಾರೆಯೇ ಹೊರತು ಮುಸ್ಲಿಂ ಮಹಿಳೆಯರ ನಿಜವಾದ ಶೋಷಣೆಯಾದ ಬಹುಪತ್ನಿತ್ವ ಮತ್ತು ತಲಾಖ್ ನ ಕುರಿತು ಇವರು ಚಕಾರವೆತ್ತುವುದಿಲ್ಲ. ಇವೆಲ್ಲವೂ ಧಾರ್ಮಿಕ ನಿಯಮಗಳೆಂದು ಚಿತ್ರಿಸಲ್ಪಟ್ಟು ಶರಿಯತ್ತಿನ ನೆರಳಿನಲ್ಲಿ ಹುಲುಸಾಗಿ ಬೆಳೆಯುತ್ತವೆ. ಮಗಳ ಮದುವೆಯ ಸಂದರ್ಭದಲ್ಲಿ ವರದಕ್ಷಿಣೆ ನೀಡಿ ನಷ್ಟ

ಅನುಭವಿಸುವುದು ತಂದೆಯಾದುದರಿಂದ, ಈ ಹೊರೆ ತಮ್ಮ ಮೇಲೆ ಬೀಳುತ್ತದೆಂದಾದಾಗ ಗಂಡಸರು ಅದರ ವಿರುದ್ಧ ಧ್ವನಿ ಎತ್ತಿದ್ದಾರಷ್ಟೇ ಆದರೆ ಈ ಶೋಷಣೆಯ ವಿರುದ್ಧ ಮಹಿಳೆಯರೇ ಧ್ವನಿ ಎತ್ತುವಂತಹ ಒಂದು ಸೌಲಭ್ಯವೇ ಈ ಸಮಾಜದಲ್ಲಿಲ್ಲ. ಇಷ್ಟಕ್ಕೂ ವರದಕ್ಷಿಣೆ ಒಂದು ಶೋಷಣೆ ಎನ್ನುವಂತೆಯೂ ಇಲ್ಲ. ಆಸ್ತಿಯಲ್ಲಿ ಪಾಲು ನೀಡಬೇಕೆಂಬ ಧಾರ್ಮಿಕ ನಿಯಮವಿದ್ದರೂ ಹೆಣ್ಣುಮಕ್ಕಳಿಗೆ ಮದುವೆಯಾದ ಬಳಿಕ ತವರಿನಿಂದ ದೊರೆಯುವುದು ಅಷ್ಟಕ್ಕಷ್ಟೆ. ಅಲ್ಲದೆ ವರದಕ್ಷಿಣೆಯ ಹಣವನ್ನು ಸಮನಾಗಿ ವಿನಿಯೋಗಿಸಿ ತಮ್ಮ ಮುಂದಿನ ಬದುಕಿಗೆ ಹಾದಿ ಕಂಡುಕೊಂಡವರೂ ಎಷ್ಟೋ ಜನರಿದ್ದಾರೆ. ತಮಗೆ ತವರಿನಿಂದ ಅಷ್ಟಾದರೂ ಬರಲಿ ಎನ್ನುವ ಹೆಣ್ಣು ಮಕ್ಕಳೂ ಎಷ್ಟೋ ಜನರಿದ್ದಾರೆ.

ಹಾಗೆಯೇ ಇನ್ನೊಂದು ಸಮಸ್ಯೆಯಲ್ಲದ ವಿಷಯವನ್ನೂ ಸಮಸ್ಯೆಯೆಂಬಂತೆ ಚಿತ್ರಿಸಿ ಅದಕ್ಕಾಗಿ ಹೋರಾಟ ನಡೆಸಿದೆವೆಂದು ಪತ್ರಿಕಾ ಪ್ರಚಾರ ಗಿಟ್ಟಿಸಿಕೊಳ್ಳುತ್ತಾ ಸಮಾಜವನ್ನು ದಾರಿ ತಪ್ಪಿಸುವ ಕೆಲಸವೂ ಮಹಿಳೆಯರ ಮಸೀದಿ ಪ್ರವೇಶದ ಕುರಿತು ಸಾಗುತ್ತಿದೆ.

ಮುಸ್ಲಿಂ ಮಹಿಳೆಯರು ಮಸೀದಿಗೆ ಹೋಗಬಹುದೇ ಬಾರದೇ ಎಂಬುದು ಒಂದು ಸಮಸ್ಯೆಯೇ ಅಲ್ಲ. ಮಸೀದಿ ಎಂಬುದು ಒಂದು ಸಮಾಜ ಭವನದಂತಿರುವುದೇ ಹೊರತು ಅಲ್ಲಿ ವಿಗ್ರಹಗಳೇನೂ ಇರುವುದಿಲ್ಲ. ವಾರಕ್ಕೊಮ್ಮೆ ಎಲ್ಲರೂ ಒಂದೆಡೆ ಸೇರಿ ನಮಾಜು ಮಾಡುವುದು ಭ್ರಾತೃತ್ವ ಕಲ್ಪನೆ ಗಟ್ಟಿಗೊಳ್ಳಲು, ಹಾಗೂ ಸಮಾನತೆ ಕಾಯ್ದುಕೊಳ್ಳಲು ಇರುವ ಒಂದು ಧಾರ್ಮಿಕ ಸಂಪ್ರದಾಯ. ನಮಾಜ್ ಮಸೀದಿಯಲ್ಲೇ ಮಾಡಬೇಕೆಂಬ ಕಡ್ಡಾಯವೂ ಇಲ್ಲ. ದಿನದಲ್ಲಿ ರಾತ್ರಿ, ಬೆಳಿಗ್ಗೆ ಮತ್ತು ಹಗಲು ಹೊತ್ತಿನಲ್ಲಿ ನಮಾಜ್ ಮಾಡುವುದು ಕಡ್ಡಾಯವೇ ಹೊರತು ಎಲ್ಲಿ ಮಾಡಬೇಕೆಂಬುದು ಮುಖ್ಯವಲ್ಲ. ಆದರೂ ಈ ಹೋರಾಟ ಮಾಡಿದವರೂ ಗಂಡಸರೇ ಆಗಿದ್ದು ಇಂದು ಕೇರಳದಾದ್ಯಂತ ಹಲವಾರು ಮಸೀದಿಗಳಲ್ಲಿ ಶುಕ್ರವಾರ ಹಾಗೂ ಹಬ್ಬದ ದಿನಗಳಲ್ಲಿ ಮಹಿಳೆಯರು ಮಸೀದಿಗೆ ಹೋಗಲಾರಂಬಿಸಿದ್ದಾರೆ. ಇದನ್ನು ಎಡ ಬಲವುಳ್ಳ ಕನ್ನಡ ಮಹಿಳಾ ಪತ್ರಿಕೆಯೊಂದು,"ಮುಸ್ಲಿಂ ಮಹಿಳೆಯರಿಗೆ ಮಸೀದಿಯ ಬಾಗಿಲು ತೆರೆದಿಟ್ಟದ್ದು ಆತ್ಮವಿಶ್ವಾಸದ ಬಾಗಿಲು ತೆರೆದಂತಾಯಿತು."ಎಂದು ವರ್ಣಿಸಿತು. ಇಂತಹ ಅನಗತ್ಯ ಹೋರಾಟಗಳು ಹೇಗೆ ಮುಸ್ಲಿಮೇತರರನ್ನೂ ಕೂಡಾ ಹಾದಿ ತಪ್ಪಿಸುತ್ತವೆ ಎಂಬುದು ಇದರಿಂದ ಸಾಬೀತಾಯಿತು. ಕೇರಳದಲ್ಲಿ ಈ ಹೋರಾಟ ನಡೆಸಿದ ಸಂಘಟನೆ ಬಹುಪತ್ನಿತ್ವವನ್ನು ವೈಭವೀಕರಿಸಿ ಲೇಖನ ಪ್ರಕಟಿಸುತ್ತಿದೆ. 'ಒಬ್ಬಳ ಸುಖದಲ್ಲಿ ಇನ್ನೊಬ್ಬಳು ಪಾಲು ಪಡೆಯುವುದು' ಎಂದೋ 'ವೇಶ್ಯಾವೃತ್ತಿಗಿಂತ ಓರ್ವನ ಹೆಂಡತಿಯಾಗಿ ಬಾಳುವುದು ಉತ್ತಮ' ಎಂದೋ ಇವರು ತಮ್ಮ ವಾದವನ್ನು ಸಮರ್ಥಿಸಿಕೊಳ್ಳುತ್ತಾರೆ!

ಇಂತಹ ನಿರಾಶಾದಾಯಕ ವಾತಾವರಣದಲ್ಲಿಯೂ ಕೆಲವೊಮ್ಮೆ ಹೊಸ ಬೆಳಕೊಂದು ಹುಟ್ಟಿಕೊಳ್ಳುವುದೂ ಇದೆ. ಪೂನಾದ ಸೈಯದ್ ಭಾಯಿ ಎಂಬುವರು ೧೯೮೭ರಲ್ಲಿ ಕೊಲ್ಹಾಪುರದಲ್ಲಿ ಸಭೆ ಕರೆದು ಮುಸ್ಲಿಂ ಮಹಿಳೆಯರ ಮಾತ್ರವಲ್ಲ ಇಡೀ ಮುಸ್ಲಿಂ

ಸಮಾಜದ ಉದ್ಧಾರಕ್ಕಾಗಿ 'ಆಲ್ ಇಂಡಿಯಾ ಪ್ರೊಗ್ರೆಸ್ಸಿವ್ ಮುಸ್ಲಿಂ ಕಾನ್ಫರೆನ್ಸ್ ' ಎಂಬ ಸಂಘಟನೆಯನ್ನಾರಂಭಿಸಿದರು. ಈ ಸಮಾಜದ ಪಿಡುಗಾಗಿರುವ ಬಹುಪತ್ನಿತ್ವ, ಸುಲಭದ ವಿವಾಹ ವಿಚ್ಛೇದನ ಪದ್ಧತಿ ಮಾತ್ರವಲ್ಲದೆ ಅನಕ್ಷರತೆ, ಬಡತನ ಮುಂತಾಗಿ ಸಾಮಾಜಿಕ ಹಿಂದುಳಿದಿರುವಿಕೆಯ ಕುರಿತು ಮುಸ್ಲಿಂರಲ್ಲಿ ಜಾಗೃತಿ ಮೂಡಿಸುವುದು ಈ ಸಂಘಟನೆಯ ಉದ್ದೇಶವಾಗಿತ್ತು. ಕರ್ನಾಟಕ, ಮಹಾರಾಷ್ಟ್ರ, ಗೋವಾ, ದೆಹಲಿ ಮುಂತಾದೆಡೆಗಳಿಂದಲೂ ಹಲವಾರು ಸ್ತ್ರೀಪುರುಷರು ಈ ಸಭೆಯಲ್ಲಿ ಭಾಗವಹಿಸಲು ಆಗಮಿಸಿದ್ದರು. ಗೋವಾದಿಂದ ಬಂದಿದ್ದ ರಷೀದ್ ಎಂಬ ಮಹಿಳೆ, ಗೋವಾದ ವ್ಯಕ್ತಿ ನಿಯಮದ ಕುರಿತು ಹೇಳುತ್ತಾ, ಅಲ್ಲಿ ಪೋರ್ಚುಗೀಸರು ಜಾರಿಗೆ ತಂದಿದ್ದ ವ್ಯಕ್ತಿ ನಿಯಮವೇ ಈಗಲೂ ಜಾರಿಯಲ್ಲಿದ್ದು ಈ ನಿಯಮದಂತೆ ಎಲ್ಲಾ ವಿವಾಹಗಳು ನೋಂದಣಿಯಾಗಬೇಕಿದ್ದು, ಅಲ್ಲಿರುವ ಮುಸ್ಲಿಂರು ಈ ನಿಯಮವನ್ನು ಅನುಸರಿಸುತ್ತಿದ್ದಾರೆಂದರು. ಹೀಗಾಗಿ ಅಲ್ಲಿನ ಮುಸ್ಲಿಂರಲ್ಲಿ ಬಹುಪತ್ನಿತ್ವ ಮತ್ತು ಸುಲಭದ ತಲಾಖ್ ಪದ್ಧತಿ ಇರಲಿಲ್ಲವೆಂದರು. ಮುಸ್ಲಿಂ ವ್ಯಕ್ತಿ ನಿಯಮದಲ್ಲಿ ತಿದ್ದುಪಡಿಯಾಗಿ ಬಾಯಿಮಾತಿನ ತಲಾಖ್ ಪದ್ಧತಿ ರದ್ದಾಗಬೇಕೆಂಬ ನಿರ್ಣಯವನ್ನು ಈ ಸಭೆಯಲ್ಲಿ ಅಂಗೀಕರಿಸಲಾಯಿತು. ಇಡೀ ದೇಶದಲ್ಲಿ ಮುಸ್ಲಿಂ ಮಹಿಳೆಯರಿಗೆ ವೇದಿಕೆಗೆ ಬಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಲು ಈ ಸಂಘಟನೆ ಮಾತ್ರ ಅವಕಾಶ ಒದಗಿಸಿದೆ.

ಇಂತಹ ಸಂಘಟನೆಯೊಂದನ್ನು ಕರ್ನಾಟಕದಲ್ಲಿ ಪ್ರಾರಂಭಿಸುವ ಸಲುವಾಗಿ ಕೆಲವು ಪ್ರಗತಿಪರ ಮುಸ್ಲಿಂರಿಂದ ಮಂಗಳೂರಿನಲ್ಲಿ ಇದರ ಶಾಖೆಯೊಂದನ್ನು ಆರಂಭಿಸಲಾಯಿತು. ಆದರೆ ಮಂಗಳೂರಿನ ಮೂಲಭೂತವಾದಿ ಮುಸ್ಲಿಂರಿಂದಾಗಿ ಇದರ ಉದ್ಘಾಟನೆ ಮತ್ತು ಅಧ್ಯಕ್ಷತೆಗೆ ಒಪ್ಪಿಕೊಂಡ ವಿದ್ಯಾವಂತ ಮುಸ್ಲಿಂ ಪುರುಷರು ಇದರಲ್ಲಿ ಭಾಗವಹಿಸಲಿಲ್ಲ. ಇಲ್ಲಿಯೂ ಬಂದ ಮಹಿಳೆಯರು ಮಾತ್ರ ಬೆರಳೆಣಿಕೆಯಷ್ಟು. ಇದರ ಶಾಖೆಯೊಂದು ಬೆಂಗಳೂರಿನಲ್ಲಿ ರೆಹಮಾನ್ ಖಾನ್ ಎಂಬುವರಿಂದ ಪ್ರಾರಂಭಗೊಂಡಾಗ ಅಲ್ಲಿಯೂ ಮೂಲಭೂತವಾದಿಗಳ ಕಿರುಕುಳವಿತ್ತು. ಆದರೆ ಲೇಖಕರಾದ ಹಸ್ಸನ್ ಮನ್ಸೂರ್ ಮತ್ತು ಬಷೀರ್ ಅಹ್ಮದ್ ಮುಂತಾದವರು ಈ ಸಭೆಯಲ್ಲಿ ಪಾಲ್ಗೊಂಡರು. ಎಲ್ಲೆಡೆಗೂ ಸೈಯಿದ್ ಭಾಯಿಯವರು ಬಂದು ಮಾರ್ಗದರ್ಶನ ನೀಡಿದರು. ಆದರೆ ಬೆಂಗಳೂರಿನಲ್ಲಿ ಎಷ್ಟೋ ಜನ ವಿದ್ಯಾವಂತ ಮುಸ್ಲಿಂ ಮಹಿಳೆಯರಿದ್ದರು. ಈ ಸಭೆಗೆ ಬಂದು ಭಾಗವಹಿಸಲು ಹಿಂಜರಿದರು. ತಮ್ಮ ಸಮಾಜದ ದುರವಸ್ಥೆಯ ಕುರಿತು ಈ ಮಹಿಳೆಯರಲ್ಲಿ ಸಮನಾದ ತಿಳುವಳಿಕೆಯಿದೆ. ಬಹುಪತ್ನಿತ್ವ ಮತ್ತು ಸುಲಭದ ವಿಚ್ಛೇದನ ಪದ್ಧತಿಯ ಬಿಸಿ ತಟ್ಟಿದ ಎಷ್ಟೋ ಕುಟುಂಬಗಳು ಇಲ್ಲಿವೆ. ವೈಯಕ್ತಿಕವಾಗಿ ಇವರು ಈ ಕುರಿತು ಚಿಂತಿಸುತ್ತಾರೆ. ಆದರೆ ಮುಸ್ಲಿಂ ಮಹಿಳೆಯರದ್ದೇ ಆದ ಒಂದು ಸಂಘಟನೆ ರಚಿಸಿಕೊಂಡು ಈ ಶೋಷಿತ ಮಹಿಳೆಯರ ಪರವಾಗಿ ಹೋರಾಡುವಂತಹ ಧೈರ್ಯ ಪ್ರದರ್ಶಿಸಿದವರು ಯಾರೂ ಇಲ್ಲ. ಹಾಗಾಗಿ ಸಯ್ಯದ್ ಭಾಯಿಯವರ ಶ್ರಮವೆಲ್ಲವೂ

ವ್ಯರ್ಥವಾಯಿತು. ಈ ಸಂಘಟನೆಗೆ ಶ್ರಮಿಸಿದ ರೆಹಮಾನ್ ಖಾನ್ ಅಪಘಾತದಿಂದ ಮೃತಪಟ್ಟ ಬಳಿಕ ಕರ್ನಾಟಕದ ಈ ಸಂಘಟನೆ ಕಣ್ಮರೆಯಾಯಿತು.

ಕರ್ನಾಟಕದಲ್ಲಿ ಯಶಸ್ವಿಯಾಗದ ಸಂಘಟನೆ ತಮಿಳುನಾಡಿನಲ್ಲಿ ಕೊಂಚ ಮಟ್ಟಿಗೆ ಯಶಸ್ವಿಯಾಗಿದೆ. ತಮಿಳುನಾಡಿನ ಮಧುರೈಯಲ್ಲಿ ಪ್ರಾಧ್ಯಾಪಕಿ ನಾಜ್ ನೀನ್ ಎಂಬವರ ಪ್ರಯತ್ನದಿಂದ ಈ ಸಂಘಟನೆಯ ಶಾಖೆ ಆರಂಭವಾಗಿ ಈಗಲೂ ಕಾರ್ಯನಿರ್ವಹಿಸುತ್ತಿದೆ. ಇವರು ತಲಾಖ್ ಪೀಡಿತರಾದ ಹಲವಾರು ಮಹಿಳೆಯರೊಡನೆ ಜಿಲ್ಲಾಧಿಕಾರಿಗಳ ಕಛೇರಿ ಎದುರು ಧರಣಿ ಕುಳಿತು ಅವರಿಗೆ ಆ ಗಂಡಂದಿರು ಜೀವನಾಂಶ ನೀಡುವಂತೆ ನಿಯಮಗಳ ಬದಲಾವಣೆಯಾಗಬೇಕೆಂಬ ಬೇಡಿಕೆ ಮುಂದಿಟ್ಟಿದ್ದರು. ಅವರೂ ಕೂಡ ಮೂಲಭೂತ ವಾದಿಗಳ ಕಿರುಕುಳವನ್ನು ಅನುಭವಿಸುತ್ತಲೇ ಇದ್ದಾರೆ. ಸ್ಥಳೀಯ ಪತ್ರಿಕೆಯೊಂದು ಇವರನ್ನು ನಿಂದಿಸಿ ಲೇಖನ ಪ್ರಕಟಿಸುವುದಕ್ಕಾಗಿಯೇ ಒಂದು ಅಂಕಣವನ್ನು ಆರಂಭಿಸಿತು ಎನ್ನಲಾಗಿದೆ. ಈ ಸಂಘಟನೆಯ ಉದ್ಘಾಟನೆಯ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಮಾತನಾಡಿದ ಹಫೀಜಾ ಎಂಬ ಮಹಿಳೆ ನ್ಯಾಯವಾದಿಯೊಬ್ಬರು ೧೯೮೬ರ 'ವಿಚ್ಛೇದಿತ ಮುಸ್ಲಿಂ ಮಹಿಳೆಯರ ಹಕ್ಕು ರಕ್ಷಣಾ ಮಸೂದೆ' ಎಂಬ ಮುಸ್ಲಿಂ ಮಹಿಳೆಯರಿಗೆ ತೀರ ಅನ್ಯಾಯ ಮಾಡುವಂತಹ ಮಸೂದೆಯನ್ನು ಪೂರ್ತಿಯಾಗಿ ಹಿಂತೆಗೆದುಕೊಳ್ಳಬೇಕೆಂದು ಸರಕಾರಕ್ಕೆ ಕರೆ ಕೊಟ್ಟಿದ್ದಾರೆ. ಆದರೆ ಆ ಬಳಿಕ ಇವರ ಧ್ವನಿ ಕೇಳಿಸಲಿಲ್ಲ.

೧೯೮೨ರಲ್ಲಿ ಎ.ಐ.ಡಿ.ಎಂ.ಕೆ ಪಕ್ಷದ ರಾಜ್ಯಸಭಾ ಸದಸ್ಯೆಯಾಗಿದ್ದ ನೂರ್ ಜಹಾನ್ ರಜಾಕ್ ಎಂಬ ಮಹಿಳೆ ರಾಜ್ಯಸಭೆಯಲ್ಲಿ ಮುಸ್ಲಿಂ ಮಹಿಳೆಯರ ವಿಷಯವನ್ನು ಎತ್ತಿ ಮುಸ್ಲಿಂರ ಬಹುಪತ್ನಿತ್ವ ಮತ್ತು ಬಾಯಿಮಾತಿನ ತಲಾಖ್ ಎಂಬ ಈ ಎರಡೂ ನಿಯಮಗಳನ್ನು ಬದಲಾಯಿಸಿ ಭಾರತದ ಎಲ್ಲಾ ಮಹಿಳೆಯರಿಗೂ ಅನ್ವಯವಾಗುವಂತಹ ಸಮಾನ ನಾಗರೀಕ ಕಾನೂನನ್ನು ಜಾರಿಗೊಳಿಸಬೇಕೆಂದು ವಾದ ಮಂಡಿಸಿದರು. ಇವರು ಕೂಡಾ ಚೆನ್ನೈನಲ್ಲಿ ವಕೀಲಿ ವೃತ್ತಿಯಲ್ಲಿದ್ದವರು. ಆ ಬಳಿಕ ಇವರ ಧ್ವನಿಯೂ ಕೇಳಿ ಬರಲಿಲ್ಲ. ೧೯೯೩ರಲ್ಲಿ ಉತ್ತರ ಪ್ರದೇಶದ ಒಂದು ಮುಸ್ಲಿಂ ಸಂಘಟನೆ ಒಂದು ಫತ್ವಾ (ಧಾರ್ಮಿಕ ಆಜ್ಞೆ) ಹೊರಡಿಸಿ ಒಂದೇ ಬಾರಿ ಮೂರು ತಲಾಖ್ ಹೇಳಿದರೂ ಅದು ಒಂದೇ ತಲಾಖ್ ಎಂದು ಪರಿಗಣಿಸಬೇಕೆಂದೂ, ಮೂರು ತಿಂಗಳಲ್ಲಿ ಪ್ರತ್ಯೇಕವಾಗಿ ಮೂರು ತಲಾಖ್ ಹೇಳಿದಾಗ ಮಾತ್ರ ಪೂರ್ತಿ ವಿಚ್ಛೇದನವೆಂದು ಪರಿಗಣಿಸಬೇಕೆಂದೂ ಆಜ್ಞೆ ಹೊರಡಿಸಿತು. ದೆಹಲಿಯ ಅಖಿಲ ಭಾರತ ಮುಸ್ಲಿಂ ಮಹಿಳಾ ಸಂಘಟನೆ ಶ್ರೀಮತಿ ಹುಸ್ನಾ ಸುಭಾನಿ ಎಂಬುವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಪತ್ರಿಕಾಗೋಷ್ಠಿ ಕರೆದು ಈ ಫತ್ವಾವನ್ನು ಸ್ವಾಗತಿಸುತ್ತಾ, ಮುಸ್ಲಿಂ ಪರ್ಸನಲ್ ಲಾ ಬೋರ್ಡ್ ಈ ಫತ್ವಾವನ್ನು ಜಾರಿಗೊಳಿಸದಿದ್ದಲ್ಲಿ ಇಡೀ ದೇಶದಲ್ಲಿ ಪ್ರಭಲವಾದ ಚಳುವಳಿ ನಡೆಸುವ ಬೆದರಿಕೆ ಹಾಕಿತು. ಮುಸ್ಲಿಂ ಮಹಿಳೆಯರಲ್ಲೂ ಜಾಗೃತಿ ಮೂಡುತ್ತಿದೆ, ತಮ್ಮ ಹಕ್ಕುಗಳಿಗಾಗಿ ಹೋರಾಡಲಾರಂಭಿಸಿದ್ದಾರೆ ಎಂದುಕೊಂಡರೂ ಈ ಒಂದು ಪತ್ರಿಕಾಗೋಷ್ಠಿಗೆ ಈ ಸಂಘಟನೆ ಮುಕ್ತಾಯವಾಯಿತು.

ಆ ಬಳಿಕ ಇವರ ಧ್ವನಿ ಎಲ್ಲೂ ಕೇಳಿ ಬರಲಿಲ್ಲ. ಈಗ ಏಳು ವರ್ಷಗಳ ಬಳಿಕವೂ ಮುಸ್ಲಿಂ ಪರ್ಸನಲ್ ಲಾ ಬೋರ್ಡ್ ತನ್ನ ನಿಯಮಗಳಲ್ಲಿ ಯಾವ ಮಾರ್ಪಾಟನ್ನೂ ಮಾಡಿಲ್ಲ. ಇಡೀ ಭಾರತಾದ್ಯಂತ ಮುಸ್ಲಿಂ ಮಹಿಳೆಯರು ಪುರುಷ ಪ್ರಧಾನ ಸಮಾಜದಲ್ಲಿ ಧ್ವನಿ ಕಳೆದುಕೊಂಡವರಾಗಿ ಎಲ್ಲಾ ರೀತಿಯ ಶೋಷಣೆಗಳಿಗೂ ತುತ್ತಾಗುತ್ತಿದ್ದಾರೆ. ಆರ್ಥಿಕ ಸ್ವಾವಲಂಬನೆಯನ್ನಂತೂ ಇವರು ಕನಸಿನಲ್ಲೂ ಊಹಿಸುವುದು ಸಾಧ್ಯವಿಲ್ಲ.

ಶಹಾಬಾನು ಪ್ರಕರಣದಲ್ಲಿ ಶ್ರೇಷ್ಠ ನ್ಯಾಯಾಲಯದ ತೀರ್ಪನ್ನು ಸ್ವಾಗತಿಸಿ ಮುಸ್ಲಿಂ ಮಹಿಳೆಯರ ಪರವಾಗಿ ನಿಂತ ಯುವ ರಾಜಕಾರಣಿ ಅರೀಫ್ ಮಹಮ್ಮದ್ ಖಾನ್ ಆ ಬಳಿಕ ರಾಜಕೀಯವಾಗಿ ಮೇಲೇರಲು ಸಾಧ್ಯವಾಗಲಿಲ್ಲ. ಹಲವಾರು ವರ್ಷಗಳಿಂದ ರಾಜ್ಯಸಭಾ ಸದಸ್ಯೆಯಾಗಿ, ರಾಜ್ಯಸಭಾ ಉಪಾಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ನಜ್ಮಾ ಹೆಪ್ತುಲ್ಲಾ ಈವರೆಗೆ ಮುಸ್ಲಿಂ ಮಹಿಳೆಯರ ಶೋಷಣೆಗಳ ವಿರುದ್ಧ ಒಂದೇ ಒಂದು ಮಾತನ್ನು ಆಡಿಲ್ಲ! ಸಂಸತ್ ಸದಸ್ಯರಾಗಿದ್ದ ಶ್ರೀಮತಿ ಅಬೀದಾ ಅಹಮ್ಮದ್ ಕೂಡಾ ಈ ಕುರಿತು ಬಾಯಿ ತೆರೆಯಲೇ ಇಲ್ಲ. ವೃತ್ತಿನಿರತರೂ ಮತ್ತು ಕುರ್ಚಿಗೆ ಅಂಟಿಕೊಂಡವರು ಯಾವಾಗಲೂ ತಮ್ಮ ತಳಭದ್ರ ಮಾಡಿಕೊಳ್ಳುವತ್ತಲೇ ತಮ್ಮ ಗಮನವನ್ನು ಕೇಂದ್ರೀಕರಿಸಿಕೊಳ್ಳುತ್ತಾರೆಯೇ ಹೊರತು ಅನರಕ್ಷಸ್ಥ ಬಡಜನರ ಹಿತಾಸಕ್ತಿ ಕಾಪಾಡುವುದು ಇವರಿಗೆ ಮುಖ್ಯವೆನಿಸುವುದಿಲ್ಲ.

ಸ್ತ್ರೀವಾದ, ಸಮಾನತೆ, ಮಹಿಳಾ ಸ್ವಾತಂತ್ರ್ಯ ಮುಂತಾದ ಶಬ್ದಗಳು ಬಡ ಮುಸ್ಲಿಂ ಮಹಿಳೆಯರ ಶಬ್ದಕೋಶದಲ್ಲಿ ಇಲ್ಲದ ಪದಗಳು. ಓರ್ವ ಮಹಿಳೆಯು ಈ ಕುರಿತು ಧ್ವನಿ ಎತ್ತುತ್ತಾಳೆ, ಮಹಿಳೆಯರಲ್ಲಿ ಜಾಗೃತಿ ಮೂಡಿಸಬಹುದು; ಸಂಘಟನೆಯೊಂದು ರೂಪು ತಳೆಯಬಹುದು ಎಂಬ ಸೂಚನೆ ದೊರೆತೊಡನೆ ಈ ಸಮಾಜದ ಪುರುಷರು ಆಕೆಯ ಧ್ವನಿ ಅಡಗಿಸಲು ಬೇಕಾದ ಎಲ್ಲಾ ರೀತಿಯ ಅಪಪ್ರಚಾರಗಳನ್ನು ತಮ್ಮ ಪತ್ರಿಕೆಗಳ ಮೂಲಕ ಕೈಗೊಳ್ಳುತ್ತಾರೆ. "ಆಕೆ ಮುಸ್ಲಿಂಳೇ ಅಲ್ಲ; ಆಕೆ ಮತಾಂತರಗೊಂಡವಳು ಅಥವಾ ನಾಮಧಾರಿ ಮುಸ್ಲಿಂ" ಎಂಬುದು ಇವರ ಪ್ರಚಾರದ ಒಂದು ಮಾದರಿ. ಧರ್ಮಾಂಧತೆ ಮತ್ತು ಮೂಢನಂಬಿಕೆಯಲ್ಲಿ ಮುಳುಗಿದ ಅನರಕ್ಷರಸ್ಥ ಮುಸ್ಲಿಂರಿಗೆ ಅಷ್ಟೇ ಸಾಕು. ಬಳಿಕ ಆಕೆಯಲ್ಲಿ ಈ ಜನರಿಗೆ ವಿಶ್ವಾಸ ಮೂಡದು. ಅಂತಹ ಮಹಿಳೆಯೋರ್ವಳನ್ನು ಮೆಟ್ಟಿ ತುಳಿಯಲು ಇನ್ನೋರ್ವ ಮಹಿಳೆಯನ್ನು ಉಪಯೋಗಿಸುವ ಕುತಂತ್ರವೂ ಇವರಲ್ಲಿದೆ ಅಥವಾ ಮಹಿಳೆಯರ ಶಕ್ತಿ ಮುರಿಯಲು ಮಹಿಳೆಯರನ್ನೇ ಉಪಯೋಗಿಸುವುದು ಇದೆ. ಕೇರಳದ ಪ್ರಖ್ಯಾತ ಕವಿಯತ್ರಿ, ಲೇಖಕಿ ಸುಗತಾ ಕುಮಾರಿಯವರು ಕೋಝಿಕೋಡಿನಲ್ಲಿ ಮುಸ್ಲಿಂ ಮಹಿಳೆಯರ ಶೋಷಣೆ ಕುರಿತು ಮಾತನಾಡತೊಡಗಿದಾಗ ಅದನ್ನು ವಿರೋಧಿಸಿ ಪ್ರತಿಭಟನೆ ಮಾಡಿ ಅವರು ಭಾಷಣ ಮಾಡದಂತೆ ತಡೆದವರು ಮುಸ್ಲಿಂ ಮಹಿಳೆಯರೇ ಆಗಿದ್ದಾರೆ.

ಕಡುಕಪ್ಪು ಕತ್ತಲಿನ ಮೂಲೆಗೆ ಒಂದಷ್ಟು ಬೆಳಕು ಬೀರುವುದನ್ನು ಈ ಜನರು ಸಹಿಸಲಾರರು. "ನಮ್ಮ ಮಹಿಳೆಯರು ನಾಲ್ಕು ಗೋಡೆಗಳೊಳಗೆ ಸುಖವಾಗಿದ್ದಾರೆ ಅವರಿಗೆ ಬೇಕಾದಷ್ಟು ಸ್ವಾತಂತ್ರ್ಯ ನೀಡಿದ್ದೇವೆ" ಎಂದು ನಂಬಿಸುತ್ತಾ ಅವರನ್ನು ಹಗಲಿರುಳು ತಮ್ಮ ಮುಷ್ಠಿಯಲ್ಲಿ ಬಂಧಿಸಿಡುವುದೇ ಇವರ ಗುರಿಯಾಗಿದೆ. ಎಚ್ಚರ ಮೂಡಿದ ಮಹಿಳೆ ನಿಯಮಗಳನ್ನು ಪ್ರಶ್ನಿಸದಿರಲಾರಳು ಎಂಬುದು ಇವರಿಗೆ ಮನವರಿಕೆಯಾಗಿದೆ. ಅಂತಹ ಎಚ್ಚರ ಮೂಡದಂತೆ ಜಾಗ್ರತೆ ವಹಿಸುವುದೇ ಈ ಸಮಾಜದ ಪುರುಷರ ಉದ್ದೇಶವಾಗಿದೆ.

ಭಾರತದ ಸಂವಿಧಾನ ಸರ್ವರಿಗೂ ಸಮಾನತೆ ನೀಡುತ್ತಿದೆ. ಜಾತಿ, ಧರ್ಮ, ಹಾಗೂ ಲಿಂಗದ ಆಧಾರದಲ್ಲಿ ತಾರತಮ್ಯ ಮಾಡುವುದನ್ನು ಸಂವಿಧಾನ ನಿಷೇಧಿಸಿದೆ. ಭಾರತದ ಸಂವಿಧಾನ ಮತ್ತು ಪ್ರಜಾಸತ್ತೆಗೆ ಜಾಗತಿಕ ಮನ್ನಣೆ ಇದೆ. ಆದರೆ ಅದೇ ಸಂವಿಧಾನವು ಪ್ರತಿಯೊಬ್ಬರ ಧಾರ್ಮಿಕ ಸ್ವಾತಂತ್ರ್ಯವನ್ನೂ ಎತ್ತಿ ಹಿಡಿಯುತ್ತದೆ. ಧಾರ್ಮಿಕ ಸ್ವಾತಂತ್ರ್ಯದ ಈ ಅವಕಾಶದಿಂದಾಗಿ ಮಹಿಳೆಯರಿಗೆ ಸಂವಿಧಾನ ನೀಡಿದ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಸಮಾಜವು ಧರ್ಮದ ಹೆಸರಿನಲ್ಲಿ ಕಿತ್ತುಕೊಳ್ಳುತ್ತದೆ. ಮಹಿಳಾ ಸ್ವಾತಂತ್ರ್ಯ, ಸಮಾನತೆ, ಸ್ತ್ರೀವಾದ ಮುಂತಾದ ಪದಗಳೆಲ್ಲವೂ ಧಾರ್ಮಿಕ ಸ್ವಾತಂತ್ರ್ಯ ಹಾಗೂ ಪ್ರತ್ಯೇಕ ವ್ಯಕ್ತಿನಿಯಮದ ಅಡಿಯಲ್ಲಿ ಹೂತುಹೋಗುತ್ತವೆ.

ತಮ್ಮ ಮನೆಗಳಲ್ಲೇ ಮಗಳ ವಿಚ್ಛೇದನವಾದಾಗ ಅಥವಾ ಅಳಿಯ ಬೇರೊಬ್ಬಳನ್ನು ಮದುವೆಯಾಗಿ ಮಗಳು ಮತ್ತು ಮೊಮ್ಮಕ್ಕಳ ಭಾರ ತಮ್ಮ ಕುತ್ತಿಗೆಗೆ ಬಿದ್ದಾಗ ಅಂತಹವರು ನಮ್ಮ ಬಳಿ ಬಂದು ತಮ್ಮ ಸಂಕಷ್ಟ ತಿಳಿಸಿ ಪರಿಹಾರಕ್ಕೆ ಸಲಹೆ ಕೇಳಿದ್ದಿದೆ. ಕೆಲವು ಜನ ಮೌಲವಿಗಳೂ ತಮ್ಮ ಮನೆಗಳಲ್ಲಿ ಇಂತಹ ಘಟನೆಗಳು ನಡೆದಾಗ ಈ ಕುರಿತು ನನ್ನ ಸಲಹೆ ಕೇಳಿದ್ದಾರೆ. " ಎಲ್ಲಾ ಮದುವೆಗಳನ್ನು ನೋಂದಣಿ ಮಾಡಿಸಿ" ಎಂಬ ಸಲಹೆಯನ್ನು ನಾನು ಈವರೆಗೆ ನೀಡುತ್ತಾ ಬಂದಿದ್ದೇನೆ. ವೈಯಕ್ತಿಕವಾಗಿ ನನ್ನ ಹೋರಾಟ, ವಿಚಾರಧಾರೆ ಎಲ್ಲರಿಗೂ ಮೆಚ್ಚಿಕೆಯೇ. "ಬರಹದ ಮೂಲಕ ನಿಮ್ಮ ಹೋರಾಟವನ್ನು ಮುಂದುವರಿಸಿ" ಎಂಬ ಸಲಹೆಯನ್ನು ನನಗೂ ನೀಡುತ್ತಾರೆ. ಆದರೆ ಸಾಮೂಹಿಕವಾಗಿ ನಮ್ಮ ಪುರುಷರು ಮಹಿಳೆಯರ ಪ್ರಗತಿಯನ್ನು, ಮುಖ್ಯವಾಗಿ ಆರ್ಥಿಕ ಸ್ವಾವಲಂಬನೆಯನ್ನು ಒಪ್ಪಿಕೊಳ್ಳುವ ಮನಸ್ಥಿತಿಯಲ್ಲಿಲ್ಲ. ಹಾಗಾಗಿಯೇ ಇಂದು ಸುಶಿಕ್ಷಿತ ಮುಸ್ಲಿಂ ಮಹಿಳೆಯರು ತಮ್ಮದೇ ಆದ ಸಂಘಟನೆ ಕಟ್ಟಿಕೊಂಡು ಸ್ತ್ರೀಯರ ಸಾಂವಿಧಾನಿಕ ಹಕ್ಕುಗಳಿಗಾಗಿ ಹೋರಾಟ ನಡೆಸುವ, ಪ್ರವಾಹ ವಿರುದ್ಧ ಈಜುವ ಸ್ಥೈರ್ಯ ತೋರಬೇಕಾಗಿದೆ.

# ಮಹಿಳಾ,'ಸೃಜನಶೀಲತೆ'ಯ ಅಧ್ಯಯನ : 'ದ ಸಿಂಗರ್ ಅಂಡ್ ದ ಸಾಂಗ್'

*ಎಚ್.ಎಸ್.ಶ್ರೀಮತಿ*

ಕಳೆದ ಮೂರು ದಶಕಗಳಿಗಿಂತಲೂ ಮಿಗಿಲಾಗಿ ಮಹಿಳಾ ಅಧ್ಯಯನ ಕ್ಷೇತ್ರದ ಸಂಶೋಧನೆಗಳಲ್ಲಿ ನಿರತರಾಗಿರುವ ಸಿ. ಎಸ್. ಲಕ್ಷ್ಮಿಯವರ 'ದ ಸಿಂಗರ್ ಅಂಡ್ ದ ಸಾಂಗ್ ' ಎಂಬ ಒಂದುಕೃತಿಯನ್ನು ಇತ್ತೀಚೆಗೆ ಕಾಲಿ ಫಾರ್ ವಿಮೆನ್ ಪ್ರಕಟಿಸಿದೆ. ಮಹಿಳಾ ಅಧ್ಯಯನ ಕ್ಷೇತ್ರದಲ್ಲಿ ನಾವು ಎದುರಿಸುತ್ತಿರುವ ಸವಾಲುಗಳ ಚರ್ಚೆಗೆ ಪೂರಕವಾಗಿ ಈ ಕೃತಿಯ ಚರ್ಚೆಗೆ ತೊಡಗಲು ಬಯಸುತ್ತೇನೆ.

ಮಹಿಳಾ ಅಧ್ಯಯನ ಕ್ಷೇತ್ರವು ಸಂಶೋಧನಾ ವಿಧಿವಿಧಾನಗಳನ್ನು ರೂಪಿಸಿಕೊಳ್ಳುವಲ್ಲಿ ಇನ್ನೂವರೆಗೂ ಪ್ರಯೋಗಾವಸ್ಥೆಯಲ್ಲೇ ಇರುವಂತಿದೆ. ಆದರೂ ಈವರೆಗೆ ಹಲವು ಅನಿವಾರ್ಯ ಕಾರಣಗಳಲ್ಲಿ ಸಿಲುಕಿ ಪುರುಷ ಚಿಂತನೆಯ ಮಾದರಿಗಳನ್ನೇ ಅಳವಡಿಸಿಕೊಂಡು ಅಧ್ಯಯನಗಳಲ್ಲಿ ತೊಡಗುತ್ತಿದ್ದುದರ ಪರಿಣಾಮಗಳ ಅರಿವು ಕ್ರಮೇಣವಾಗಿ ಬರುತ್ತಿದೆ. ಮಹಿಳಾ ಅಧ್ಯಯನದಲ್ಲಿ ತೊಡಗಿರುವವರು ಹೊಸದಾಗಿಯೇ ಪರ್ಯಾಯ ಸಂಶೋಧನಾ ವಿಧಾನಗಳನ್ನು ರೂಪಿಸಿಕೊಳ್ಳಬೇಕಾದ ಅಗತ್ಯವನ್ನು ಮನಗಾಣತೊಡಗಿದ್ದಾರೆ. ಇದರ ಒಂದು ಪ್ರಮುಖ ಹೆಜ್ಜೆಯಾಗಿ ಈವರೆಗೆ ಪುರುಷ ಚಿಂತನೆಯು ನೀಡುತ್ತಾ ಬಂದಿರುವ ನಿರ್ವಚನ ನಿರ್ದೇಶನಗಳನ್ನು ನಿರಾಕರಿಸಿ, ಆ ಚಿಂತನೆಯು ನಿರ್ಮಿಸಿ ನಿಲ್ಲಿಸಿರುವ ಮಾದರಿಗಳನ್ನು ಪುನರವಲೋಕನಕ್ಕೆ ಒಳಗು ಮಾಡುತ್ತಿದ್ದಾರೆ. ಹಾಗೆಯೇ ಮಾನವ ಚರಿತ್ರೆ ಎಂಬ ಹೆಸರಿನಲ್ಲಿ ಬರೆಯುತ್ತಾ ಬಂದಿರುವ ಹಸಿಸುಳ್ಳುಗಳನ್ನು ಅನಾವರಣಗೊಳಿಸುವ, ಆ ಚರಿತ್ರೆಗಳಲ್ಲಿ ಮಹಿಳೆಯರ ಕಾಲಗಣನೆಯೇ ಮಾಯವಾಗಿರುವುದರ ಕಾರಣಗಳನ್ನುಶೋಧಿಸುವ ಸಂಶೋಧನೆಗಳಲ್ಲೂ ತೊಡಗಿದ್ದಾರೆ. ಇಂತಹ ಸಂಶೋಧನೆಗಳ ಆಧಾರದ ಮೇಲೆ 'ಮಹಿಳೆಯರ ಚರಿತ್ರೆ'ಗಳನ್ನು ಪುನಾರಚಿಸುವ ಅಗತ್ಯ ಇಂದು ಬಹಳವಾಗಿದೆ. ಏಕೆಂದರೆ ಈವರೆಗಿನ 'ಚರಿತ್ರೆಯ ಬರವಣಿಗೆಗಳು' ಕೂಡ ಪುರುಷ ಪ್ರಧಾನ ಸಮಾಜದ ಒಂದು ಶಕ್ತಿಯುತ ಅಸ್ತ್ರವಾಗಿ ಕಾರ್ಯ ನಿರ್ವಹಿಸುತ್ತಾ ಮಹಿಳೆಯರ ಬದುಕಿನ ಸಕಾರಾತ್ಮಕ ಗುಣ ಸಾಮರ್ಥ್ಯಗಳ ದಾಖಲೆಗಳನ್ನೆಲ್ಲಾ ಆಳದಲ್ಲಿ ಹುಗಿದು, ಮಹಿಳೆಯರು ಎಂದೆಂದೂ ಸಮಾಜದಲ್ಲಿ ಪುರುಷ ಅವಲಂಬನೆಯಲ್ಲಿ ಮಾತ್ರವೇ ಬದುಕುವ ದುರ್ಬಲರು ಎಂದು ನಂಬಿಸಲು ಸತತವಾಗಿ ಪ್ರಯತ್ನಸಿವೆ. ಆದರೆ ಒಮ್ಮೆ

ಎಚ್ಚೆತ್ತುಕೊಳ್ಳತೊಡಗಿದ ಮಹಿಳೆಗೆ ಈ ಹುನ್ನಾರವನ್ನು ಎದುರಿಸುವ ಪ್ರತಿ ಹುನ್ನಾರಗಳೂ ಹೊಳೆಯಲಾರಂಭಿಸಿವೆ. ತನ್ನ ಅಸ್ಮಿತೆಯನ್ನು ಶೋಧಿಸುವ ಮೂಲಕವೇ ಅವಳೀಗ ಕಳೆದುಹೋದ ಆತ್ಮವಿಶ್ವಾಸವನ್ನು ಬೆಳೆಸಿಕೊಳ್ಳುವುದು ಸಾಧ್ಯ. ನಮ್ಮ ಹಿಂದಿನ ತಲೆಮಾರುಗಳಲ್ಲೂ ಮಹಿಳೆಯರ ಸಾಧನೆ, ಸಾಮರ್ಥ್ಯಗಳಿಗೆ ಕೊರತೆಯೇನಿರಲಿಲ್ಲ. ಪುರುಷ ಪ್ರಧಾನ ಸಮಾಜದಲ್ಲಿ ಅವುಗಳ ಅಭಿವ್ಯಕ್ತಿಗಳಿಗೆ ತಡೆಗಳಿದ್ದುವಷ್ಟೇ ಎಂಬ ಸತ್ಯ ಈಗಿನ ಅನುಭವಕ್ಕೂ ಸಲ್ಲುವಂತಹುದೇ ಆಗಿದೆಯಲ್ಲ. ಅಂದೂ, ಇಂದೂ ಮಹಿಳೆ ತನ್ನ ಸಾಮರ್ಥ್ಯದ ಅಭಿವ್ಯಕ್ತಿಗಾಗಿ ಹೋರಾಡುವುದು ತಪ್ಪಿಲ್ಲ. ಕಾಲ, ದೇಶ, ಸಂದರ್ಭಗಳಲ್ಲಿ ಈ ಹೋರಾಟದ ಸ್ವರೂಪ, ಪ್ರಮಾಣಗಳಲ್ಲಿ ವ್ಯತ್ಯಾಸಗಳಿರಬಹುದು. ವರ್ತಮಾನದ ಮಹಿಳೆ ಈ ಮಾತನ್ನು ಸರಿಯಾದ ಅರ್ಥದಲ್ಲಿ ಗ್ರಹಿಸಿಕೊಂಡರೆ, ತನ್ನ ಇದುರಿನ ಸವಾಲುಗಳನ್ನು ಬಿಡಿಸಿಕೊಳ್ಳುವ ತಂತ್ರಗಳನ್ನೂ ಸರಿಯಾಗಿ ರೂಪಿಸಿಕೊಳ್ಳಬಹುದು. ಈವರೆಗಿನ ಚರಿತ್ರೆಯ ಬರಹಗಳಲ್ಲಿ ಮಹಿಳೆಯರ ಸಾಮರ್ಥ್ಯಗಳ ದಾಖಲೆಗಳನ್ನು ಹುಗಿದು ಹಾಕಿರಬಹುದಾದರೂ, ಅವನ್ನೆಲ್ಲಾ ನಮ್ಮ ಅಗತ್ಯಗಳಿಗಾಗಿ ಒದಗಿಸಿಕೊಳ್ಳಲೇಬೇಕೆಂದರೆ ಉತ್ಖನನದ ಸಾಹಸಗಳಿಗೆ ತೊಡಗುವುದೂ ಅಗತ್ಯವೇ. ಪ್ರಯತ್ನಪೂರ್ವಕವಾಗಿ ಎಂಬಂತೆ ಮಾಯಕಗೊಳಿಸಿರುವ ದಾಖಲೆಗಳನ್ನು ಶೋಧಿಸಿ 'ಮಹಿಳಾ ಚರಿತ್ರೆ'ಯನ್ನು ಪುನಾರಚಿಸುವ ಪ್ರಯತ್ನಗಳಲ್ಲಿ ಇಂದು ವಿದ್ವಾಂಸರು ತೊಡಗಿದ್ದಾರೆ. ಇವರೆದುರು ನಿಲ್ಲುವ ಬಹುಮುಖ್ಯ ಸವಾಲೆಂದರೆ ಇವರ ಗಮ್ಯಸ್ಥಾನಕ್ಕೆ ಸಿದ್ಧ ಹಾದಿಗಳಿಲ್ಲ. ತಮಗೆ ದೊರೆತ ಶಿಕ್ಷಣ ತರಬೇತಿಗಳೂ ಪುರುಷ ಚಿಂತನೆಯ ಮಾದರಿಗಳನ್ನೇ ನೀಡಿವೆ. ವಸ್ತುಸ್ಥಿತಿಯ ಗ್ರಹಿಕೆಯು ಇವೆಲ್ಲವನ್ನೂ ದಾಟಿ ಹೋಗಿಯೇ ಹೊಸಹಾದಿಯನ್ನು ನಿರ್ಮಿಸುವ ಅಗತ್ಯವನ್ನು ಮನಗಾಣಿಸುತ್ತಿದೆ. ಈ ಪ್ರಯತ್ನದಲ್ಲಿ ಉಪಯುಕ್ತವಾಗಿ ಕಾಣುತ್ತಿರುವ ಒಂದು ನೆರವು ಮೌಖಿಕ ಪರಂಪರೆ. ಮಹಿಳಾ ಸಂಬಂಧಿ ಚಾರಿತ್ರಿಕ ದಾಖಲೆಗಳನ್ನು ಅಕ್ಷರ ಸಂಸ್ಕೃತಿಯು ಮರವೆಗೆ ಜಾರಿಸಿರಬಹುದಾದರೂ ಅದೃಶ್ಯದಲ್ಲಿ ಮೌಖಿಕ ಪರಂಪರೆಯು ಆ ದಾಖಲೆಗಳನ್ನು ಸುರಕ್ಷಿತವಾಗಿರಿಸಿದೆ. ಅದೃಶ್ಯವನ್ನು ಸಾಕಾರಗೊಳಿಸಿಕೊಳ್ಳುವ ಸಾಹಸದಲ್ಲೀಗ ಮಹಿಳೆಯರು ತೊಡಗಿಕೊಂಡಿದ್ದಾರೆ. ಮಹಿಳಾ ಸಾಹಿತ್ಯ ಚರಿತ್ರೆಯ ಶೋಧಗಳಲ್ಲಿ ತೊಡಗಿದ ಸೂಸಿಥಾರೂ ಮತ್ತು ಲಲಿತ, (೧೯೯೧, Women Writing in India). ಆಧುನಿಕ ಭಾರತದಲ್ಲಿ ಮಹಿಳೆಯರ ಸ್ಥಿತಿಗತಿಗಳನ್ನು ಅರಿಯಲು ವಸಾಹತು ಆಡಳಿತದ ಚರಿತ್ರೆಯನ್ನು ಶೋಧಿಸಿದ ಜೆರಾಲ್ಡಿನ್ ಫೋರ್ಬ್ಸ್‌ರಂತಹ (೧೯೯೮, Women Writing in India) ವಿದ್ವಾಂಸರು ಇಂತಹ ಮೌಖಿಕ ಪರಂಪರೆಯ ಮಹತ್ವವನ್ನೂ ಅವರ ಶೋಧನೆಗಳಲ್ಲಿ ಈ ಹಾದಿಯ ನೆರವು ಎಷ್ಟೆಂಬುದನ್ನೂ ವಿವರಗಳಲ್ಲಿ ಹೇಳಿದ್ದಾರೆ.

ಕರ್ನಾಟಕದ ಸಂದರ್ಭದಲ್ಲಿ ಸ್ತ್ರೀವಾದಿ ಚಿಂತನೆಯು ಆರಂಭಗೊಂಡಿದ್ದು ಚಳುವಳಿಯ ಹಂತದಿಂದಲೇ. ನಂತರದಲ್ಲಷ್ಟೇ ಅಧ್ಯಯನ ಶಿಸ್ತಿನ ಚೌಕಟ್ಟಿನಲ್ಲಿ ಅದು ಅಳವಡಿಕೆಯಾಗು

ತ್ತಿರುವುದು. ಕಾಕತಾಳೀಯವೆಂಬಂತೆ ಈ ಚಳುವಳಿಗಳಲ್ಲಿ ಬಹುಪಾಲು ಸಾಹಿತ್ಯಾಸಕ್ತರು ಇದ್ದರು. ಸಮಸ್ಯೆಗಳ ವಿಶ್ಲೇಷಣೆ, ವಿವರಣೆ, ನಿದರ್ಶನಗಳಿಗೆ ಇವರು ಸಾಹಿತ್ಯದ ಆಕರಗಳನ್ನು ಹೆಚ್ಚಾಗಿ ಅವಲಂಬಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ. ಅನೇಕ ಉಪಯುಕ್ತ ಅಧ್ಯಯನಗಳು 'ಸಾಹಿತ್ಯಲೋಕ'ವನ್ನು ನಿಯಂತ್ರಿಸಿದ್ದ ಪುರುಷ ಚಿಂತನೆಯ ಅವತಾರಗಳನ್ನು ತೆರೆದು ತೋರಿದವು. ಸಾಹಿತ್ಯ ನಿರ್ಮಾಣ, ಅಧ್ಯಯನಗಳಲ್ಲಿ ಪುರುಷ ಸಾಮರ್ಥ್ಯವನ್ನು ಮಹಿಳಾ ಸಾಮರ್ಥ್ಯ ಸರಿಗಟ್ಟಲಾರದೆಂಬ ಒಂದು 'ಗ್ರಹಿಕೆ'ಯನ್ನು ಬಲಪಡಿಸಿದ್ದ ಚಿಂತನೆಗಳ ಹುಸಿತನವನ್ನೂ ಇವು ಬಯಲು ಮಾಡಿದವು. ಆದರೂ ವಾಸ್ತವ ರಂಗದಲ್ಲಿ ಈ ವಾಗ್ವಾದ ಇನ್ನೂ ಬಗೆಹರಿಯಲು ಸಾಧ್ಯವಾಗಿಲ್ಲ ಎಂಬುದು ಗಮನಾರ್ಹ. ಲೇಖಕಿಯರು ಪುರುಷ ಚಿಂತನೆಯು ನಿರ್ಮಿಸಿದ ಮಾನದಂಡಗಳಿಗೆ ವಿನಾಕಾರಣ ತಮ್ಮನ್ನು ಒಪ್ಪಿಸಿಕೊಳ್ಳುತ್ತಾ ಹೆಣಗುವ ಬದಲು ತಮ್ಮ ಸಾಹಿತ್ಯವನ್ನೇ ಅವುಗಳಿಗೆ ಸವಾಲುಗಳಾಗಿ ನಿಲ್ಲಿಸುವ ತಂತ್ರಗಳನ್ನು ಕಲ್ಪಿಸಬೇಕು ಎಂಬುದು ಮಹಿಳೆಯರ ಒಂದು ಚಿಂತನೆ. ಹಾಗೆಯೇ ಸಾಹಿತ್ಯದ ಅಭಿವ್ಯಕ್ತಿ ಮಾಧ್ಯಮವಾದ ಭಾಷೆಯು ಪುರುಷ ನಿರ್ಮಿತ ಹಾಗೂ ನಿಯಂತ್ರಿತ ಎಂಬುದರ ಸಮಸ್ಯೆಯನ್ನು ಬಿಡಿಸಿಕೊಳ್ಳುವ ದಾರಿಯನ್ನು ಶೋಧಿಸಬೇಕೆಂಬ ಚಿಂತನೆಗಳೂ ಬಂದವು. ಒಂದು ಪ್ರಯತ್ನವಾಗಿ 'ಸಾಹಿತ್ಯದ ಭಾಷೆ'ಯೊಂದಿರುತ್ತದೆ ಎಂಬ ಈಗಿನ ಪ್ರಚಲಿತ ಪರಿಕಲ್ಪನೆಯನ್ನೇ ನಿರಾಕರಿಸಿ, ಮಹಿಳೆಯರು ತಮ್ಮ ಖಾಸಗಿ ಬದುಕಿನಲ್ಲಿ ಬಳಸುತ್ತಾ ಬಂದಿರುವ 'ಮಹಿಳಾ ಭಾಷೆ'ಯನ್ನೇ ಸಾಹಿತ್ಯದ ಅಭಿವ್ಯಕ್ತಿಗೂ ಬಳಸಬಹುದು, ಅಥವಾ ಈ ಭಾಷಾ ಮಾಧ್ಯಮಕ್ಕೆ ಪರ್ಯಾಯವಾದ ಅಭಿವ್ಯಕ್ತಿ ಮಾಧ್ಯಮಗಳನ್ನು ಶೋಧಿಸಿಕೊಳ್ಳಬೇಕು ಎಂದು ಹಿಂದೆ ನಾನೇ ಒಮ್ಮೆ ಹೇಳಿದ್ದು ಉಂಟು(ಚಹರೆ,೧೯೯೯). ಈ ಲೇಖನಕ್ಕೆ ಪ್ರತಿಕ್ರಿಯೆಯಾಗಿ ಡಾ.ವಿವೇಕ ರೈ ಯವರು 'ಪರ್ಯಾಯ ಮಾಧ್ಯಮ ಯಾವುದೆಂಬುದನ್ನು ಇಲ್ಲಿ ಸೂಚಿಸದಿರುವುದರಿಂದ ಸೂಚನೆ ಕೇವಲ ಸೂಚನೆಯಾಗಿಯೇ ಉಳಿಯುತ್ತದೆ(ಚಹರೆ, ಮುನ್ನುಡಿ, ೧೯೯೯) ಎಂದು ಸರಿಯಾಗಿಯೇ ಹೇಳಿದರು. ನನಗೂ ಕೂಡ ಇಂಥಾ ಒಂದು ಸೂಚನೆ ಹೊಳೆದಿತ್ತೇ ಹೊರತು, ಹಾದಿಯೇನೂ ಅಲ್ಲ. ಇಂದಿಗೂ ಅಂಥಾ ಗೊಂದಲದಿಂದ ಹೊರಬರಲಾಗಿಲ್ಲ ಎಂಬುದಕ್ಕೆ ನಾವೆಲ್ಲರೂ ಮತ್ತೆ ಮತ್ತೆ ಸಮಸ್ಯಾತ್ಮಕವಾದುದೆಂದು ತಿಳಿದಿದ್ದೂ ಅದೇ ಭಾಷಾ ಮಾಧ್ಯಮವನ್ನೇ ಬಳಸಬೇಕಾಗಿದೆ ಎಂಬುದೇ ಸಾಕ್ಷಿ.

ಸಾಹಿತ್ಯದ ಹಿನ್ನೆಲೆ, ತರಬೇತಿಗಳನ್ನು ಪಡೆದ ನಮ್ಮಂತಹವರು ಸಾಹಿತ್ಯದ ಮೂಲಕ ಮಹಿಳೆಯ ಅಭಿವ್ಯಕ್ತಿ, ಹಾಗೂ ಅಲ್ಲಿನ ಅವಳ ಸಾಧನೆಯ ಬಗೆಗೆ 'ಸಾಹಿತ್ಯಲೋಕ'ವು ನೀಡುವ ಮುನ್ನಣೆ ಗೌರವ ಅಥವಾ ನಿರ್ಲಕ್ಷ್ಯ ತಾತ್ಸಾರಗಳ ಹಿನ್ನೆಲೆಗಿರುವ ರಾಜಕಾರಣಗಳ ಸಮಸ್ಯೆಗಳನ್ನು ಕುರಿತು ಮಾತನಾಡುತ್ತೇವೆ. 'ಸ್ತ್ರೀವಾದಿ ಸಾಹಿತ್ಯ ವಿಮರ್ಶೆ' ಎಂಬ ಒಂದು ಪರಿಕಲ್ಪನೆಯನ್ನು ಬಳಸುತ್ತಿದ್ದೇವೆ. ಈ ಸಂದರ್ಭದಲ್ಲೇ 'ಪರ್ಯಾಯ ಅಭಿವ್ಯಕ್ತಿ

ಮಾರ್ಗ'ಗಳಾದರೆ ಹೇಗೆ ಎನಿಸಿರಬಹುದು. ಆದರೆ ಇತರೆ ಹಲವಾರು ಕ್ಷೇತ್ರಗಳಲ್ಲಿ ಮಹಿಳೆಯರು ತೋರುತ್ತಾ ಬಂದಿರುವ ಸಾಧನೆ ಸಾಮರ್ಥ್ಯಗಳ ಕತೆಗಳಲ್ಲೂ ಈ ರಾಜಕಾರಣವೇ ಪ್ರಬಲ ನಿಯಂತ್ರಣವಾಗಿ ಯಜಮಾನಿಕೆ ನಡೆಸಿದೆ ಎಂಬುದು ಗಮನಿಸಬೇಕಾದ ಒಂದು ವಾಸ್ತವ. ದುಡಿಮೆ, ಗಳಿಕೆ, ಬುದ್ಧಿ, ಚಾತುರ್ಯ, ಧೈರ್ಯ, ಸಾಹಸಗಳಲ್ಲಿ ಮಹಿಳೆ ಪಾಲುಗೊಳ್ಳುವ ಸಾಧ್ಯತೆಗಳನ್ನೇ ಈ ರಾಜಕಾರಣ ಅಲ್ಲಗಳೆಯುತ್ತಾ ತಾಳ್ಮೆ, ಸಹನೆ, ತ್ಯಾಗ, ಸೇವೆಗಳಂತಹವನ್ನು ಬಲವಂತವಾಗಿ ಆರೋಪಿಸುತ್ತಾ ಮಹಿಳೆಯ ವ್ಯಕ್ತಿತ್ವದ ಸ್ವರೂಪವನ್ನು ನಿರ್ಣಯಿಸಿಬಿಡುತ್ತದೆ. ಆದರೆ ಈ ಎಲ್ಲ ಬಿಕ್ಕಟ್ಟುಗಳ ನಡುವೆಯೇ ಅವಳ ಭಾವಜಗತ್ತು ಅಭಿವ್ಯಕ್ತಿಯ ದಾರಿಗಳನ್ನು ಶೋಧಿಸುತ್ತಲೇ ಹೋಗುತ್ತದೆ. ಪುರುಷ ಪ್ರಪಂಚ ಈ ಅಭಿವ್ಯಕ್ತಿಯೂ ತನ್ನ ಸುಖ ಸಂತೋಷಗಳಿಗೇ ಬಳಕೆಗೊಳ್ಳಬೇಕೆಂಬ ಸ್ವಾರ್ಥದಲ್ಲಿ ದೇವರು, ಧರ್ಮಗಳ ಹೆಸರಿನಲ್ಲಿ ಸಾಮಾಜಿಕ ನಿಯಂತ್ರಣಗಳನ್ನು ಜಾರಿಗೊಳಿಸುತ್ತದೆ.

ಮಹಿಳೆಯು ಆಪ್ತವಾಗಿ ನಂಬುವ ಕಲಾಭಿವ್ಯಕ್ತಿಯ ಹಾದಿಯಲ್ಲಿ ಹರಡಲಾಗುವ ಇಂಥಾ ಸಾಮಾಜಿಕ ಕಂಟಕಗಳ ಅಧ್ಯಯನ 'ಮಹಿಳಾ ಚರಿತ್ರೆ'ಯ ಪುನಾರಚನೆಯ ಒಂದು ಪ್ರಮುಖ ಭಾಗ. ಮತ್ತೆ ಇಂಥಾ ಶೋಧಕ್ಕೆ ದಾಖಲೆಗಳೇನೂ ಸುಲಭವಾಗಿ ದೊರಕಿ ಬಿಡುವುದಿಲ್ಲ ಎನ್ನುವುದೂ ಇದ್ದದ್ದೇ ಪುರುಷನಿಗೆ ಸಾಹಿತ್ಯ ಹಾಗೂ ಕಲೆಗಳು ಬಿಡುಗಡೆಯ ಸಾಧನಗಳಾಗಿ ಒದಗಿ ಬರುತ್ತವೆ. ಲಾಭ ನಷ್ಟಗಳ ಇತರೆ ಪರಿಣಾಮಗಳು ಇದ್ದರೂ ಅವು 'ಅಭಿವ್ಯಕ್ತಿಯ' ಪ್ರಮುಖ ಸವಾಲುಗಳಾಗಿರುವುದಿಲ್ಲ. ಆದರೆ ಪುರುಷ ಚಿಂತನೆಯ ಸಮಾಜದಲ್ಲಿ ಮಹಿಳೆಯ ಪಾಲಿಗೆ ಇವು ಬಂಧನಗಳಾಗಿ ಕಾಡುತ್ತವೆ. ಸಂಗೀತ, ನೃತ್ಯಗಳಂತಹ ರಂಜಕ ಕಲೆಗಳಲ್ಲಂತೂ ಈ ಮಾತು ಇನ್ನೂ ಹೆಚ್ಚಾಗಿ ಅನ್ವಯವಾಗುತ್ತದೆ. ಈ ಕಲೆಗಳೇ ನೆಪವಾಗಿ ಮಹಿಳೆಯ ಬದುಕಿಗೆ ಮಾರಕವಾದ ದುಷ್ಟ ಸಾಮಾಜಿಕ ಪದ್ಧತಿಗಳು ಹುಟ್ಟಿ ಬೆಳೆದಿವೆ. ಈ ಸಮಾಜವು ತನಗೆ ಸುಖ ಅನುಕೂಲಗಳು ಕಂಡಂತೆ ಹೆಣ್ಣಿನ ಲೈಂಗಿಕ ಬದುಕಿನ ಮೇಲೆ ನಿಯಂತ್ರಣವನ್ನು ಹೇರುತ್ತದೆ. ಸಭ್ಯ ನಾಗರಿಕ ಮೌಲ್ಯಗಳ ಹೆಸರಿನಲ್ಲಿ ವಿವಾಹದ ಮೂಲಕ ಹಿಡಿತವನ್ನು ಸಾಧಿಸುತ್ತದೆ. ಆದರೆ ವಿವಾಹದ ನಿಯಮಗಳಲ್ಲಿ ಹೆಣ್ಣನ್ನು ಮಾತ್ರವೇ ಕಟ್ಟಿಹಾಕಿ, ಪುರುಷನಿಗೆ ಆ ನಿಯಮಗಳನ್ನು ಮೀರುವ ಸೌಲಭ್ಯಗಳನ್ನೂ ಕಲ್ಪಿಸುತ್ತದೆ. ಹಲವು ಸಾಮಾಜಿಕ ಸಂಕಷ್ಟಗಳಲ್ಲಿ ಸಿಲುಕಿದ ನಿರ್ಗತಿಕ, ಅನಾಥ ಹೆಂಗಸರು ಪುರುಷರ ಲೈಂಗಿಕ ಸುಖಕ್ಕೆ ಮುಕ್ತವಾಗಿ ಸಿಗುವಂತಾಗುವುದು ಒಂದು ವಿಧ. ಇದಕ್ಕಿಂತಲೂ ಅಮಾನವೀಯವಾದ ಒಂದು ವಿಧಾನದಲ್ಲಿ ಮಹಿಳೆಯರು ದೇವರು, ಧರ್ಮ, ಜಾತಿ, ಪರಂಪರೆಗಳ ಹೆಸರಿನಲ್ಲಿ ಪುರುಷರ ವಿವಾಹ ಬಾಹಿರ ಲೈಂಗಿಕ ಸುಖಗಳಿಗೆ ತೆತ್ತುಕೊಳ್ಳಬೇಕಾಗುತ್ತದೆ. ಈ ಮಹಿಳೆಯರ ಸಂಗೀತ ನೃತ್ಯಗಳು ಕಲಾಭಿವ್ಯಕ್ತಿಯಾಗಿ, ಬಿಡುಗಡೆಯ ಮಾಧ್ಯಮವಾಗಿ ಉಳಿಯಲಾರದೆ ಅವರನ್ನು ಹಲವು

ಸಾಮಾಜಿಕ ಬಂಧನಗಳಲ್ಲಿ ಸಿಲುಕಿಸುವ ನೆಪಗಳಾಗುತ್ತವೆ. ಅವರಲ್ಲಿ ಕೆಲವರಿಗೆ ಈ ಸೇವೆಯ ಮೆಚ್ಚುಗೆಯಾಗಿ ಐಹಿಕ ಸುಖ ಸಂಪತ್ತುಗಳು ದೊರೆಯಬಹುದು. ಕೆಲವೊಮ್ಮೆ 'ಸಾಮಾಜಿಕ ಮನ್ನಣೆ'ಯ ಭ್ರಮೆಯೂ ಒದಗಬಹುದು. ಆದರೆ ಇವರ ಒಟ್ಟಾರೆ ಬದುಕು ವಿವಾಹ ಬಾಹಿರವಾಗಿ ಸುಖಗಳನ್ನು ಅರಸುವ ಪುರುಷರಿಗೆ ಮೀಸಲಾಗಿಯೇ ನಡೆಯುವಂತಾಗುವುದೇ ಅಲ್ಲದೆ, ಅವರು ಸಾಮಾಜಿಕ ಗೌರವ ಮನ್ನಣೆಗಳಿಂದಲೂ ವಂಚಿತವಾಗಿ ಉಳಿಯಬೇಕಾಗುತ್ತದೆ.

ಮಹಿಳೆಯರ ಬದುಕಿನ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಪರಿಹಾರ ಕಾರ್ಯಕ್ರಮಗಳನ್ನು ರೂಪಿಸಲು ಹೊರಟ ಹಲವು ಚಾರಿತ್ರಿಕ ಸಂದರ್ಭಗಳೇನೋ ಇವೆ. ಆದರೆ ಈ ಕಾರ್ಯಕ್ರಮಗಳ ಧ್ಯೇಯೋದ್ದೇಶ ಹಾಗೂ ಪರಿಣಾಮಗಳನ್ನು ಕುರಿತೇ ಪ್ರತ್ಯೇಕವಾಗಿ ಅಧ್ಯಯನ ಮಾಡುವ ಅಗತ್ಯ ಎಷ್ಟೊಂದಿದೆ ಎಂಬುದನ್ನು ವಿದ್ವಾಂಸರು ಗುರುತಿಸತೊಡಗಿದ್ದಾರೆ. ಈ ಹಿಂದೆ ಸುಧಾರಣಾವಾದಿಗಳು ಕಲಾವಿದೆಯರಾಗಿಯೂ ವೇಶ್ಯೆಯರಾಗಿ, ದೇವದಾಸಿಯರಾಗಿ.. ಇನ್ನೂ ಹಲವು ಹೆಸರುಗಳಲ್ಲಿ ಸಾಮಾಜಿಕಬಂಧನಗಳಲ್ಲಿ ಸಿಲುಕಿದ್ದ ಮಹಿಳಾ ಸಮುದಾಯದ ಉದ್ಧಾರಕ್ಕೆ ತೊಡಗಿದ್ದಿದೆ. ಆದರೆ ಈ ಸುಧಾರಕರು ಈ 'ಉದ್ಧಾರ'ವನ್ನು 'ಕಲಂಕ ನಿರ್ನಾಮ'ದ ಕಾರ್ಯಕ್ರಮವಾಗಿ ಕಂಡರೇ ಹೊರತು ಮಹಿಳೆಯರ ಬದುಕಿನ ಸಮಸ್ಯೆಗಳು ಅವರಿಗೆ ಮುಖ್ಯವಾಗಲೇ ಇಲ್ಲ. ಮತ್ತೆ ಇದು ಮಹಿಳೆಯ 'ಶೀಲ'ವನ್ನು ಕುರಿತ ಪುರುಷ ಚಿಂತನೆಯ ಆತಂಕ ಮಾತ್ರವೇ ಆಗಿತ್ತು. ಸಿಕ್ಕ ಹುಲ್ಲುಗರಿಕೆಯನ್ನೇ ಭದ್ರವಾಗಿ ಹಿಡಿದು ದೇವದಾಸಿಯರಂತಹ ಸಮುದಾಯದ ಹೆಣ್ಣುಗಳು ಅಷ್ಟಿಷ್ಟು ಸಂಪನ್ಮೂಲಗಳ ಒಡತಿಯರಾಗಿದ್ದುದೇ ಅಲ್ಲದೆ, ಭ್ರಾಮಕದ್ದಾದರೂ ತಮಗೆ ದೊರೆತ ಸಾಮಾಜಿಕ ಮನ್ನಣೆಯನ್ನೇ ಒಪ್ಪಿಕೊಂಡು ಆತ್ಮವಿಶ್ವಾಸವನ್ನು ಹಿಡಿದಿಟ್ಟುಕೊಳ್ಳಬಲ್ಲವರಾಗಿದ್ದರು. ಸುಧಾರಣಾವಾದಿಗಳಿಂದಾಗಿ ಅವರು ಇಷ್ಟನ್ನು ಕೂಡ ಕಳೆದುಕೊಳ್ಳುವ ಪೇಚಿಗೆ ಸಿಕ್ಕಿಬಿದ್ದರು. ಹಾಗಾಗಿ, ಅವರ ಸುಧಾರಣೆಗಾಗಿಯೇ ರೂಪಿಸಲಾದ ಕಾಯಿದೆಗಳನ್ನು ಸ್ವತಃ ಅವರೇ ವಿರೋಧಿಸುವುದೂ ಅವರಿಗೆ ಅನಿವಾರ್ಯವಾಯಿತು. ಅವರ ಸಮಸ್ಯೆಗಳ ಮೂಲ ಸ್ವರೂಪವನ್ನೇ ಅರ್ಥಮಾಡಿಕೊಳ್ಳದೆ ಜಾರಿಗೊಂಡ ಕಾರ್ಯಕ್ರಮಗಳು ಅವರ ಬದುಕಿನ ದಾರಿಗಳನ್ನೇ ಮುಚ್ಚಲು ಹೊರಟಿದ್ದವು. ಪುರುಷ ಚಿಂತನೆಯ ಮಾದರಿಗಳನ್ನೇ ಅನ್ವಯಿಸಿಕೊಂಡಿದ್ದ ಅಂದಿನ ಮಹಿಳಾ ಸಂಸ್ಥೆಗಳಿಗೂ ಈ ಸಮಸ್ಯೆಯ ಮೂಲಗಳು ಗೋಚರಿಸಲೇ ಇಲ್ಲ.

ಈ ಹಿನ್ನೆಲೆಯಲ್ಲಿಯೇ ಇಂದಿನ ಮಹಿಳಾ ಅಧ್ಯಯನದ ವಿದ್ವಾಂಸರು 'ಮಹಿಳಾ ಚರಿತ್ರೆ'ಯ ಪುನಾರಚನೆಗೆ ಅಗತ್ಯದ ದಾಖಲೆಗಳನ್ನು ಮೌಖಿಕ ಪರಂಪರೆಯಲ್ಲಿ ಶೋಧಿಸತೊಡಗಿರುವುದು. ಕಾಲ ಬದಲಾಗುತ್ತಿದೆ, ಹಿಂದಿನ ಸಾಮಾಜಿಕ ನಿಯಂತ್ರಣಗಳು ತಮ್ಮ ಬಲವನ್ನು ಕಳೆದುಕೊಳ್ಳುತ್ತಿವೆ ಎಂಬುದು ಅರ್ಧಸತ್ಯ. ದೇವದಾಸಿ ಪದ್ಧತಿ, ಜೀತಪದ್ಧತಿಗಳಂಥವನ್ನು ಕಾಯಿದೆಗಳು ನಿಷೇಧಿಸಿವೆ. ಜಾತಿ ಪದ್ಧತಿಗಳಲ್ಲಿ ಅಮಾನುಷವಾಗಿ

ಜಾರಿಯಲ್ಲಿದ್ದ ಎಷ್ಟೋ ಸಂಗತಿಗಳು ಕಣ್ಣಿಗೆ ಮರೆಯಾಗಿವೆ. ದೊಡ್ಡ ನಗರಗಳಿಗೆ ಬಂದು ಬಿಟ್ಟರಂತೂ ಆರ್ಥಿಕ ಬಲವೊಂದಿದ್ದರೆ ಉಳಿದೆಲ್ಲರಂತೆಯೇ ಇರುವುದು ಸಾಧ್ಯವೆನಿಸಲೂ ಬಹುದು.ಆದರೂ ಇಂತಹಾ ಸಾಮಾಜಿಕ ಕಳಂಕಗಳ ಹೊರೆಯನ್ನು ಪರಂಪರಾಗತವಾಗಿ ಹೊರುತ್ತಾ ಬಂದಿರುವ ಸಮುದಾಯಗಳ ಸಮಸ್ಯೆಗಳು ಮುಗಿದಿವೆ ಎಂದೇನಲ್ಲ. ಮಹಿಳೆಯರು ತಮ್ಮ ಕಲಾಭಿವ್ಯಕ್ತಿಯನ್ನೇ ಜೀವನ ಮಾರ್ಗವಾಗಿಯೂ ಬಳಸುತ್ತಿದ್ದ 'ಸೇವಾವೃತ್ತಿ' ಇಂದು ಆ ರೂಪದಲ್ಲಿ ಉಳಿದಿಲ್ಲವೇನೋ. ಇಂದು ಇತರ ಸಾಮಾನ್ಯ ನಾಗರಿಕ ಮಹಿಳೆಯರು ಕೂಡ ಸಂಗೀತ ನೃತ್ಯಗಳನ್ನು ಶಿಕ್ಷಣವಾಗಿ, ವೃತ್ತಿಯಾಗಿ ಆಯ್ದುಕೊಳ್ಳುವುದು ಸಾಧ್ಯ. ಹೀಗಿದ್ದರೂ ಈ ಕಲಾವಿದೆಯರ ಸಮಸ್ಯೆಗಳು ಸಾಮಾಜಿಕ ಕಾರಣಗಳಿಗಾಗಿಯೇ, ಅವರು ಮಹಿಳೆಯರು ಎಂಬ ಕಾರಣಕ್ಕಾಗಿಯೇ ಹುಟ್ಟಿದವಾಗಿರುತ್ತವೆ. ಅವರು ಪಾರಂಪರಿಕ ವೃತ್ತಿ ಕುಟುಂಬಗಳವರಾಗಿರಬಹುದು, ಅಥವಾ ಹೊಸದಾಗಿ ಸಭ್ಯನಾಗರಿಕ ಕುಟುಂಬಗಳಲ್ಲಿದ್ದರೂ ಈ ಕಲೆಗಳನ್ನು ಸಾಧನೆ ಅಭಿವ್ಯಕ್ತಿಗಳ ಮಾರ್ಗವಾಗಿ ಆಯ್ದುಕೊಂಡವರಿರಬಹುದು.

ಇಂತಹ ಒಂದು ಗಂಭೀರ ಶೋಧನೆಗೆ ತೊಡಗಿದ ಸಿ. ಎಸ್. ಲಕ್ಷ್ಮಿಯವರು ತಮ್ಮ ಚಿಂತನೆಗಳಿಗೆ ಸೂಕ್ತವೆನಿಸುವ ಸಂಶೋಧನಾ ವಿಧಾನಗಳನ್ನೂ ರೂಪಿಸಿಕೊಂಡಿದ್ದಾರೆ. 'ಸಿಂಗರ್ ಅಂಡ್ ದ ಸಾಂಗ್' ಎಂಬ ಅವರ ಕೃತಿಯ ಶೀರ್ಷಿಕೆಯೇ ಒಂದು ಮಹತ್ವದ ರೂಪಕವಾಗಿದೆ. ಕಲೆಗಿಂತಲೂ ಅದರ ಅಭಿವ್ಯಕ್ತಿಗೆ ತೊಡಗಿದ ಕಲಾವಿದೆಯ ಬದುಕಿನ ದರ್ಶನವನ್ನೇ ಅವರು ಮುಖ್ಯವಾಗಿ ಪರಿಗಣಿಸಿದ್ದಾರೆ. ಐವತ್ತು ಮಹಿಳಾ ಕಲಾವಿದೆಯರನ್ನು ವಿಶಿಷ್ಟ ರೀತಿಯಲ್ಲಿ ಸಂದರ್ಶಿಸಿ ಅವರ ಜೀವನದ ಅನುಭವಗಳನ್ನು ಹಿಡಿದಿಡುವ ಪ್ರಯತ್ನ ಲಕ್ಷ್ಮಿಯವರದು. ಇದು 'ಮಹಿಳಾ ಲೋಕ'ವನ್ನು ದರ್ಶಿಸುವ ಒಂದು ಬಾಗಿಲು ಮಾತ್ರವಾಗಿರದೆ, ಅದರೊಳಗೆ ನಾವು ಪ್ರವೇಶಿಸಲು ಕೂಡ ಅದು ಅನುವು ಮಾಡಿಕೊಡಲಿ ಎಂಬುದು ಅವರ ಆಶಯ. ಈ ಕೃತಿಗೆ ಅವರು ವಿಸ್ತೃತವಾದ ಒಂದು ಪ್ರಸ್ತಾವನೆಯನ್ನು ಬರೆದಿದ್ದಾರೆ. ಅಲ್ಲದೆ ಪ್ರತಿಯೊಬ್ಬ ಕಲಾವಿದೆಯ ಸಂದರ್ಶನಕ್ಕೆ ಮುಂಚೆ ಅದರ ಮುಖ್ಯ ಆಶಯ ಮತ್ತು ಪರಿಣಾಮಗಳ ಒಂದು ಸಣ್ಣ ಟಿಪ್ಪಣಿಯನ್ನು ಕೊಟ್ಟಿದ್ದಾರೆ. ಸಂದರ್ಶನಕ್ಕೆ ಅವರು ಆಯ್ದುಕೊಂಡ ಕಲಾವಿದೆಯರಲ್ಲಿ ಸಂಗೀತ, ನೃತ್ಯಗಳ ವೃತ್ತಿಪರಂಪರೆಗಳಲ್ಲಿ ಬಂದವರಿರುವಂತೆಯೇ, ಸಂಪ್ರದಾಯಸ್ಥ ಕುಟುಂಬಗಳಿಂದ ಬಂದ ಕಲಾವಿದೆಯರೂ ಇದ್ದಾರೆ. ಈ ಎರಡು ಸಾಮಾಜಿಕ ವಲಯಗಳಲ್ಲೂ ಮಹಿಳೆಯ ಅಭಿವ್ಯಕ್ತಿ ಸ್ವಾತಂತ್ರ್ಯ ಎಂಬುದು ತೊಡಕಿನದೇ. ಸಾಹಿತ್ಯದ ಅಭಿವ್ಯಕ್ತಿಯಲ್ಲಾದರೆ ಮಹಿಳೆಗೆ ಬೇರೆ ರೀತಿಯ ಕೆಲವು ಅನುಕೂಲಗಳಿವೆ. ಮೊದಲಿಗೆ ಅಲ್ಲಿ ಆಕೆ ನಾಲ್ಕು ಜನರೆದುರು ಬಂದರೆ ಮಾತ್ರವೇ ಅಭಿವ್ಯಕ್ತಿ ಸಾಧ್ಯ ಎಂಬುದಿಲ್ಲ. ಅದಕ್ಕಿಂತಲೂ ಮುಖ್ಯವಾಗಿ ಅವಳ ಕೃತಿಗೆ ಕಾಲ, ದೇಶ, ಸಂದರ್ಭಗಳ ಕಟ್ಟುಗಳನ್ನು ಮೀರುವ ಗುಣವಿದೆ. ಸದ್ಯಕ್ಕೆ ಅವಳನ್ನು ಕಾಡುವ ಸಮಸ್ಯೆ ಸಮಕಾಲೀನ ಗೌರವ ಮನ್ನಣೆ ಹಾಗೂ ಪಕ್ಷಪಾತದ ವಿಮರ್ಶಾ ಮಾನದಂಡಗಳನ್ನು

ಕುರಿತದ್ದು. ಆದರೆ ಸಂಗೀತ, ನೃತ್ಯಗಳಂತಹ ಪ್ರದರ್ಶನ ಕಲೆಗಳನ್ನು ಅಭಿವ್ಯಕ್ತಿ ಮಾಧ್ಯಮವಾಗಿ ಬಳಸುವ ಮಹಿಳೆಯರ ಸಮಸ್ಯೆಗಳು ಇನ್ನೂ ಸಂಕೀರ್ಣವಾದವು. ಇವೆಲ್ಲವನ್ನೂ ಸೂಕ್ಷ್ಮವಾಗಿ ಪರಿಗಣಿಸಿರುವ ಲಕ್ಷ್ಮಿಯವರು ಸಂದರ್ಶನದ ವಿಧಾನದಲ್ಲೇ ಹೊಸಕ್ರಮವನ್ನು ಬಳಸಿದ್ದಾರೆ. ಆ ಸಂದರ್ಶನಗಳನ್ನು ಆಧರಿಸಿದ ವ್ಯಾಖ್ಯಾನ ರೂಪದ ಪ್ರಸ್ತಾವನೆ ಈ ಹಿನ್ನೆಲೆಯಲ್ಲಿ ತುಂಬಾ ಮಹತ್ವದ್ದಾಗಿ ನನಗೆ ಕಾಣುತ್ತದೆ. ಮಹಿಳಾ ಅಧ್ಯಯನ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವವರಿಗೆ ಪದೇ ಪದೇ ಎದುರಾಗುವ ಹಲವು ಮುಖ್ಯ ಪ್ರಶ್ನೆಗಳನ್ನು ಚರ್ಚೆಗೆ ಇಲ್ಲಿ ಒಳಪಡಿಸಲಾಗಿದೆ. ಈ ಕೆಲವು ಪ್ರಶ್ನೆಗಳ ಚರ್ಚೆಯನ್ನು ಪ್ರಸ್ತಾಪಿಸುವುದು ಸೂಕ್ತವೆಂದುಕೊಂಡಿದ್ದೇನೆ.

ಕೃತಿಯನ್ನು ತಮ್ಮ ತಾಯಿಗೆ ಸಮರ್ಪಿಸುವ ಪುಟದಲ್ಲಿ ಲಕ್ಷ್ಮಿಯವರು ನಮಗೆಲ್ಲ ಪರಿಚಿತವಾದ ಜಾನಪದ ಕಥಾವಿನ್ಯಾಸವನ್ನು ತುಂಬಾ ಮಾರ್ಮಿಕವಾಗಿ ಬಳಸಿದ್ದಾರೆ. ಏಳು ಸಮುದ್ರಗಳಾಚೆ, ಏಳು ಬೆಟ್ಟಗಳಾಚೆ ಒಂದು ದುಂಬಿಯ ಒಳಗೆ ರಾಕ್ಷಸನ ಪ್ರಾಣ ಅಡಗಿದೆ. ಈ ಸಮುದ್ರ ಬೆಟ್ಟಗಳನ್ನು ದಾಟಿ ಪೊಟರೆಯಿರುವ ಮರವನ್ನು ಕಂಡುಹಿಡಿದು ಅಲ್ಲಿ ಅಡಗಿರುವ ದುಂಬಿಯನ್ನು ಹೊಸಕಿ ಹಾಕಬೇಕು. ಈ ಸಾಹಸದಲ್ಲಿ ತೊಡಗುವವನು ಪುರುಷನೇ. ನಿಜದಲ್ಲಿ ಮಹಿಳಾ ಕಲಾವಿದೆಯರು ಸದಾ ಸರ್ವದಾ ಈ ಸಾಹಸವನ್ನೇ ಮಾಡುತ್ತಿರುತ್ತಾರೆ. ಕಲಾಲೋಕದಲ್ಲಿ ಕಾಣುವ ಈ ರಾಕ್ಷಸರೋ ತೀರಾ ಆಕರ್ಷಕವಾಗಿರುತ್ತಾರೆ. ಕೋರೆಹಲ್ಲು, ಕೆಂಪು ಕಣ್ಣು ವಿಕಟಾಟ್ಟಹಾಸಗಳೊಂದೂ ಇಲ್ಲ. ಸಂಪ್ರದಾಯ ಪರಂಪರೆ, ಪ್ರೀತಿ, ವಿಶ್ವಾಸ, ಸಲಹೆ, ಅಗತ್ಯದ ನಿಯಮಗಳ ಸೌಮ್ಯವೇಷಧರಿಸಿ ಅಪ್ಪಿಬಿಡುತ್ತಾರೆ. ಕಲಾವಿದೆಯರು ಈ ರಾಕ್ಷಸರಿಗೆ ಕೆಲವೊಮ್ಮೆ ತಮ್ಮನ್ನು ಒಪ್ಪಿಸಿಕೊಂಡು ಬಿಡುತ್ತಾರೆ. ಕೆಲವೊಮ್ಮೆ ವಿರೋಧಿಸುತ್ತಾರೆ. ಅಪರೂಪಕ್ಕೊಮ್ಮೆ ಹತ್ತಿ ತುಳಿದು ಅವರನ್ನು ನಾಶ ಮಾಡಲೂಬಹುದು. ಇಷ್ಟು ಹೇಳಿದ ಮೇಲೆ ಲಕ್ಷ್ಮೀಯವರು ತಾವು ಉನ್ನತ ಶಿಕ್ಷಣಕ್ಕಾಗಿ ಹೊರಟು ನಿಂತ ಸಂದರ್ಭವನ್ನು ಪ್ರಸ್ತಾಪಿಸಿ ತಂದೆ ತೀರಾ ವಿರೋಧವಾಗಿದ್ದರೆಂದೂ ಅಂತೂ ಹೇಗೋ ಹೊರಟದ್ದಾಯಿತೆಂದೂ ಹೇಳಿ ತಾಯಿಯ ಪ್ರತಿಕ್ರಿಯೆಯನ್ನು ದಾಖಲಿಸುತ್ತಾರೆ. ಉದ್ದಕ್ಕೂ ಮೌನವಾಗಿದ್ದ ತಾಯಿ ರೈಲು ಹೊರಟ ಮೇಲೆ 'ಈಗ ನಿನ್ನ ಕನಸುಗಳೆಲ್ಲಾ ನನಸಾಗಲಿವೆ'ಎಂದರಂತೆ. ಆ ತಾಯಿ ಸ್ವತಃ ಕಲಾವಿದೆ, ಕನಸುಗಳನ್ನಷ್ಟೇ ಕಾಣುತ್ತಾ ಬಂದ ಕಲಾವಿದೆ.

ಸಾಧನೆಗೈದ ಮಹಿಳೆಯರ ಪಟ್ಟಿಗಿಂತಲೂ ಕನಸುಗಳನ್ನೇ ಅಪ್ಪಿ ಮೌನವಾಗಿ ಬದುಕಿದವರ ಪಟ್ಟಿ ತುಂಬಾ ದೊಡ್ಡದು. ಅದಕ್ಕೇ ಇರಬಹುದು ಮಕ್ಕಳು ಮೊಮ್ಮಕ್ಕಳಿಗೆ ತಮ್ಮ ಕನಸುಗಳನ್ನು ಉಣಿಸುವುದು ಅಜ್ಜಿಯರಿಗೆ ಅಗತ್ಯವಾದದ್ದು. ಮಹಿಳಾ ಲೋಕದ ಚಿತ್ರಣಗಳನ್ನು ಈ ಅಜ್ಜಿಯರು ಬಿಡಿಸಿಟ್ಟಿದ್ದಾರೆ. ಈ ದನಿಗಳನ್ನು ಕೇಳಿಸಿಕೊಳ್ಳಲು ಒಣ ಸಂದರ್ಶನಗಳು ನೆರವಾಗಲಾರವು. ನಿಗದಿತ ಪ್ರಶ್ನಾವಳಿಗಳಿಗೆ ನಿರೀಕ್ಷಿತ ಉತ್ತರಗಳನ್ನು ಪಡೆದು ಏನನ್ನೂ ಕಾಣಲಾಗದು. ಈ ಕತೆಗಳೊಂದಿಗೆ, ಕತೆಗಾರ್ತಿಯರೊಂದಿಗೆ ಒಂದಿಷ್ಟು

ಸಮಯ ಕಳೆಯುವ ಸಹಜ ಮಾತುಗಾರಿಕೆಯಲ್ಲಿ ಮಾತ್ರ ಮಹಿಳಾ ಅನುಭವಲೋಕದ ದರ್ಶನ ಲಭ್ಯವಾಗಬಹುದು. ಸಂದರ್ಶನದ ಬುದ್ಧಿವಂತಿಕೆ ಮೆರೆಯುವ ವಿಧಾನ ಇಲ್ಲಿ ಸೂಕ್ತವಾಗುವುದಿಲ್ಲ. ಬದಲಿಗೆ ಅನುಭವಗಳ ಅಭಿವ್ಯಕ್ತಿಗೆ ಅಡ್ಡಿಯಾಗಿರುವ ಕಟ್ಟುಗಳನ್ನು ಸರಿಸಿ ಅದನ್ನು ಹರಿಯಬಿಡುವುದಷ್ಟೇ ಸಂದರ್ಶನಕಾರರ ಕೆಲಸವಾಗಬೇಕು. ಏಕೆಂದರೆ ಮಹಿಳಾಲೋಕದ ಈ ದನಿಗಳಿಗೆ ಬೌದ್ಧಿಕ ಚರ್ಚೆಗಳಲ್ಲಿ ಪಾಲುಗೊಳ್ಳಲು ಸಾಧ್ಯವಾಗದಿರ ಬಹುದು. ಆದರೂ ಅದನ್ನು ಗ್ರಹಿಸುವ ಸಿದ್ಧತೆ ಉಳ್ಳವರಾದರೆ ಸಹಜ ಸಂವಾದದಲ್ಲಿ ಆ ದನಿಗಳು ಸ್ಪಷ್ಟಗೊಳ್ಳುವುದು ಸಾಧ್ಯ. ಲಕ್ಷ್ಮಿಯವರು ಒಂದು ಸುಂದರ ಸಂದರ್ಭವನ್ನು ಹೇಳುತ್ತಾರೆ. ಜನಪದ ಗಾಯಕಿಯೊಬ್ಬಳು ಚಿತ್ರಗಳಿಗೆ ಹೊಂದುವ ಹಾಡುಗಳನ್ನು ಹೇಳಬಲ್ಲವಳಂತೆ. ಸಂಶೋಧಕರು ಅವಳನ್ನು ಚಿತ್ರ ಪ್ರದರ್ಶನವೊಂದಕ್ಕೆ ಕರೆದೊಯ್ದು ಹಾಡಲು ಹೇಳಿದರಂತೆ. ಅವಳು ಕೆಲವು ಹಾಡು ಹೇಳಿ 'ಇದೀಗ ನಿಮ್ಮ ಸರದಿ, ನೀವು ಹಾಡಿ' ಎಂದಳಂತೆ. ಬುದ್ಧಿಜೀವಿಗಳಿಗೆ ಇಂತಹಾ ಕಲಾಪ್ರಯೋಗದಿಂದ ತಬ್ಬಿಬ್ಬು. ಅಂದರೆ ಯೋಜಿತ ಪ್ರಯೋಗಗಳನ್ನಷ್ಟೇ ಬಳಸಿ ಏನನ್ನೂ ಕಾಣಲಾಗದು. ಕಾಣುವ ಶಕ್ತಿ ಕಣ್ಣುಗಳಲ್ಲಿ ನಿರಂತರ ಚೇತನವಾಗಿ ಕೆಲಸ ಮಾಡಬೇಕು ಅಲ್ಲವೇ?

ಸ್ತ್ರೀವಾದಿ ಚಿಂತನೆಯ ಹೆಸರಿನಲ್ಲಿ ಕಲಾವಿದೆಯರ ಬದುಕನ್ನು ಪುರುಷ ಸಮಾಜದಲ್ಲಿ ಹೆಣ್ಣಿನ ಬವಣೆ ಎಂದೋ, ಅಥವಾ ಇನ್ನೊಂದು ವಿಪರೀತದಲ್ಲಿ ಮಾತೃ ಸಮಾಜದ ವೈಭವವೆಂದೋ ಪೂರ್ವಗ್ರಹಿಕೆಯೊಂದಿಗೆ ಸಂದರ್ಶಿಸಲು ತೊಡಗಿದ ಕೂಡಲೇ ದೊರೆಯುವ ಉತ್ತರಗಳೂ ಇದಕ್ಕೆ ಒಗ್ಗುವಂಥವೇ ಆಗಿರಬಹುದೇ ಹೊರತು ವಾಸ್ತವದ ಆಯಾಮಗಳು ಅದೃಶ್ಯವಾಗಿಯೇ ಉಳಿದುಬಿಡುತ್ತವೆ. ಹಾಗಾಗಿ ಲಿಂಗವ್ಯವಸ್ಥೆ, ಕಲಾಭಿವ್ಯಕ್ತಿ, ಕಲಾವಿದೆಯರ ಸಮಸ್ಯೆಗಳು ಮೊದಲಾದವನ್ನು ಕುರಿತ ಸಿದ್ಧ ಪರಿಕಲ್ಪನೆಗಳನ್ನು ಪಕ್ಕಕ್ಕಿರಿಸಿಯೇ ಅವರನ್ನು ಮಾತನಾಡಿಸುವ ವಿಧಾನದಿಂದ ಲಕ್ಷ್ಮಿಯವರು ಆ ಮಹಿಳಾಲೋಕದ ಬಾಗಿಲನ್ನು ತೆರೆಯಿಸುವಲ್ಲಿ ಯಶಸ್ಸುಗಳಿಸಿರುವಂತಿದೆ. ಸಂದರ್ಶನದ ವೇಳೆಯಲ್ಲಿ ಫೋಟೋಗಳನ್ನು ತೆಗೆಯುವ ಬದಲು ಕಲಾವಿದೆಯರ ಸಂಗ್ರಹದಲ್ಲಿದ್ದವಲ್ಲಿ ಕೆಲವನ್ನು ಕೊಡಿ ಎಂದಾಗ ಅವರ ಪ್ರತಿಕ್ರಿಯೆ, ಆಯ್ಕೆ ಹಾಗೂ ಹಿಂದಿನ ನೆನಪುಗಳಿಗೆ ಅವರು ಜಾರುವ ಪರಿಯಲ್ಲಿ ಎಷ್ಟೋ ಹೊಳಹುಗಳನ್ನು ಕಂಡಿದ್ದಾರೆ. ಕೆಲವು ಪ್ರಶ್ನೆಗಳನ್ನು ಶೈಕ್ಷಣಿಕ ಚೌಕಟ್ಟನ್ನಾಧರಿಸಿ ಕೇಳಬೇಕಾದ ಅಗತ್ಯವೂ ಬಂತು. ಉದಾಹರಣೆಗೆ ಕಲೋಪಾಸನೆಗೆ ತೊಡಗುವ ಸ್ತ್ರೀಪುರುಷರ ಕಲಿಕೆ, ಸಾಧನೆ ಹಾಗೂ ಮನ್ನಣೆಗಳಲ್ಲಿ ಏನು ವ್ಯತ್ಯಾಸ ಬರಬಹುದು ಎಂಬ ಪ್ರಶ್ನೆ. ಎಷ್ಟೋ ಕಲಾವಿದೆಯರಿಗೆ ಪ್ರಶ್ನೆಯ ಉದ್ದೇಶದ ಅರಿವಾಗಲಿಲ್ಲ. ಒಬ್ಬಾಕೆ ಮಾತ್ರ 'ಒಬ್ಬ ಪುರುಷ ಸಂಗೀತಗಾರನನ್ನು ಅವನು ಮುಸ್ಲಿಂ ಆದರೆ ಉಸ್ತಾದ್ ಎನ್ನುತ್ತಾರೆ, ಹಿಂದೂ ಆದರೆ ಪಂಡಿತ್ ಎಂದು ಮನ್ನಿಸುತ್ತಾರೆ. ಆದೆ ಕೇಸರ್ ಬಾಯಿ, ಮೋಗೂಬಾಯಿಯರಂತಹ ಮಹಾನ್ ಸಂಗೀತಜ್ಞೆಯರೂ ಕೇವಲ 'ಬಾಯಿ'ಯರಾಗಿಯೇ ಉಳಿಯುತ್ತಾರೆ'ಎಂದು ಬಲು ಸೂಕ್ಷ್ಮದ ಪ್ರತಿಕ್ರಿಯೆ ತೋರಿದ್ದೂ ಗಮನಾರ್ಹ

ಕಲಾವಿದೆಯ ಬದುಕಿನಲ್ಲಿ 'ವಿವಾಹ'ದ ಪರಿಣಾಮವನ್ನು ಕುರಿತ ಚರ್ಚೆಯಂತೂ ಮನಕಲಕುವಂಥದು. ಬಹುಮಟ್ಟಿನ ಕಲಾವಿದೆಯರಿಗೆ ಕಲೆ ಮತ್ತು ವಿವಾಹಗಳು ಆಯ್ಕೆಯ ಸಂದರ್ಭಗಳಾಗಿರದೆ ಹೇರಿಕೆ ಅಥವಾ ವಿಧಿ ಸಂಕಲ್ಪಗಳೆಂಬಂತೆಯೇ ಒದಗಿ ಬಂದದ್ದು. ತಮ್ಮ ಸಾಮರ್ಥ್ಯ, ಸಾಧನೆಗಳ ಎದುರು 'ವಿವಾಹ'ಇಂದಿಗೂ ಸವಾಲು ಹಾಕಿ ನಿಲ್ಲುತ್ತದೆಂಬ ಸಂಗತಿಯನ್ನು ಎಲ್ಲ ಮಹಿಳೆಯರೂ ಅನುಭವಿಸುತ್ತಿದ್ದೇವೆ. 'ವಿವಾಹ' ಇಂದಿಗೂ ಸವಾಲು ಹಾಕಿ ನಿಲ್ಲುತ್ತದೆಂಬ ಸಂಗತಿಯನ್ನು ಎಲ್ಲ ಮಹಿಳೆಯರೂ ಅನುಭವಿಸುತ್ತಿದ್ದೇವೆ. 'ವಿವಾಹ'ವನ್ನೇ ನಿರಾಕರಿಸುವ ಒಂದು ನಿರ್ಧಾರವನ್ನು ಕೈಗೊಂಡವರಿದ್ದಾರೆ ನಿಜ. ಎಷ್ಟೋ ಕಲಾವಿದೆಯರೂ ಹೀಗೆ ಮಾಡಿದ್ದಾರೆ. ಆದರೆ ಸಮಾಜ ಎಂಬ 'ವ್ಯವಸ್ಥೆ'ಯೊಂದರಲ್ಲಿ ಬದುಕುವ ಅನಿವಾರ್ಯವನ್ನಂತೂ ತಪ್ಪಿಸಲಾಗದಲ್ಲ. ಇಲ್ಲಿದ್ದುಕೊಂಡೇ ಇಲ್ಲಿನ ಒಂದು ರೂಢಿಯನ್ನು ನಿರಾಕರಿಸುವುದು ಎಷ್ಟೋ ವೇಳೆ ಅದನ್ನು ಒಪ್ಪಿಕೊಂಡಾಗ ಆಗುವ ಕಷ್ಟವಾದರೂ ವಾಸಿ ಎನಿಸುವ ಆರೋಪಿಸಿಕೊಂಡ ಶಿಕ್ಷೆಯೂ ಆಗಬಹುದು. ಸಂಪ್ರದಾಯಸ್ಥ ಕುಟುಂಬಗಳ ಮಹಿಳೆಯರು ವಿವಾಹಕ್ಕಾಗಿ ಸಾಧನೆಯ ಕೈಬಿಡಬೇಕಾಗಿ ಬಂದು ಶಿಕ್ಷೆ ಅನುಭವಿಸಿದ್ದೂ ಇದೆಯೆನ್ನಿ.

'ಕಲೆ'ಗೇ ಒಂದು ಶ್ರೇಷ್ಠತೆಯ ಪಟ್ಟಸಿಗುವುದರಲ್ಲಿ ಕೂಡ ಪುರುಷ ಚಿಂತನೆಯ ಕೈವಾಡವಿರುತ್ತದೆ. ದೇವದಾಸಿಯರು ತಮ್ಮ ಪೋಷಕರ ಅಭಿಲಾಷೆಗಳಿಗೆ ಹೊಂದುವ ಸಂಗೀತ, ನೃತ್ಯ ಭಾಗಗಳನ್ನೇ ಹೆಚ್ಚು ಹೆಚ್ಚಾಗಿ ಪ್ರದರ್ಶಿಸಬೇಕಾಗುತ್ತದೆ. ಒಮ್ಮೆ ಈ ನೃತ್ಯ ಕಲೆ 'ಸಭ್ಯ' ಕುಟುಂಬಗಳ ಪರಿಧಿಗೆ ಬಂದಿದ್ದೇ, ನೃತ್ಯ ವಿಧಾನಗಳಲ್ಲೇ ಪರಿಷ್ಕರಣೆಗಳು ಅಗತ್ಯವಾಗಿ ಬಿಟ್ಟಿತು. ಶೀಲ, ಅಶ್ಲೀಲಗಳ ಚರ್ಚೆಗಳೊಂದಿಗೆ ಕಲೆಗೂ ಕಲಾವಿದೆಗೂ ನಡುವೆ ನಿಂತು ಪುರುಷ ಚಿಂತನೆ ನಿರ್ದೇಶನಗಳನ್ನು ನೀಡ ತೊಡಗಿತು. ಈ ಮೊದಲು ಪೋಷಕರು, ಇದೀಗ ಸಭ್ಯನಾಗರಿಕರು. ಒಟ್ಟಿನಲ್ಲಿ ಕಲೆಯಾಗಲೀ ಕಲಾವಿದೆಯಾಗಲೀ ಸ್ವತಂತ್ರರಾಗಿ ಉಳಿಯಲಿಲ್ಲ. ಬಾಲಸರಸ್ವತಿ, ಸ್ವರ್ಣಸರಸ್ವತಿಯರಂತಹ ಮಹಾನ್ ಕಲಾವಿದೆಯರು ಕೂಡ ಈ ಧಾಳಿಗೆ ಸಿಲುಕಬೇಕಾಯಿತೆಂಬುದು ವಿಷಾದನೀಯ. ಪ್ರತಿಯೊಬ್ಬ ಕಲಾವಿದೆಯ ಬದುಕು ಹಾಗೂ ಸಾಧನೆಗಳು ವಿವರಗಳಲ್ಲಿ ವಿಭಿನ್ನ ಕತೆಗಳನ್ನು ಹೇಳಬಹುದು. ಈ ಮಾತು ನಮಗೆ ಈಗ ಪ್ರಸ್ತುತವಲ್ಲ. ಈ ಎಲ್ಲ ಕತೆಗಳ ಹಿನ್ನೆಲೆಗೆ ಇರುವುದೂ ಪುರುಷ ಚಿಂತನೆಯ ಸಾಮಾಜಿಕ ಸವಾಲುಗಳೇ ಎಂಬ ವಿಶ್ಲೇಷಣೆಯೇ ಮುಖ್ಯವಾಗುತ್ತದೆ. ಮಹಿಳಾ ಲೋಕವನ್ನು ಹೊಸ ಆಯಾಮಗಳಿಂದ ಪ್ರವೇಶಿಸಿ ಗಮನಿಸುವ ಅಗತ್ಯವನ್ನು ಇದು ಮನಗಾಣಿಸುತ್ತದೆ. ಇದರಿಂದ ಒದಗುವ ತಿಳಿವು ಮಹಿಳಾ ಚರಿತ್ರೆಯನ್ನು ಪುನಾರಚಿಸುವ ಕೆಲಸಕ್ಕೆ ಮುಖ್ಯ ಆಧಾರವಾಗಬಲ್ಲದು.

ಕಲಾವಿದ ಕುಟುಂಬ ಪರಂಪರೆಗಳಲ್ಲಿ ಬಂದ ಮಹಿಳೆಯರ ಸಾಧನೆಗಳಿಗೆ ಎದುರಾಗುತ್ತಿದ್ದ ಸವಾಲುಗಳದು ಒಂದು ಬಗೆಯಾದರೆ ಸಂಪ್ರದಾಯಸ್ಥ ಕುಟುಂಬಗಳ ಮಹಿಳೆಯರೆದುರು ಇನ್ನೊಂದೇ ಬಗೆಯ ಸವಾಲು. ಇವರ ಸಂಗೀತ ನೃತ್ಯಗಳಿಗೆ ಪಕ್ಕವಾದ್ಯಗಳನ್ನು ನುಡಿಸಲು

ಪುರುಷ ಕಲಾವಿದರು ಒಪ್ಪುತ್ತಿರಲಿಲ್ಲ. ಅಥವಾ ಅವರ ಕಛೇರಿಗಳಿಗೆ ಮಹಿಳೆಯರು ಪಕ್ಕವಾದ್ಯ ನುಡಿಸುವುದನ್ನೂ ಒಪ್ಪುತ್ತಿರಲಿಲ್ಲ. ಗಂಗೂಬಾಯಿ ಹಾನಗಲ್ ರವರಂತೆ ತಮ್ಮದೇ ಸಂಬಂಧಿಕರನ್ನು ನಿರಂತರ ಸಾಥಿಗಳಾಗಿ ಕಲೆಹಾಕಿಕೊಂಡರೆ ಸಮಸ್ಯೆ ಪರಿಹಾರವಾಗಬಹುದು. ಬೇರೆಲ್ಲ ವಿಚಾರಗಳಲ್ಲಿ ಪುರುಷ ಕಲಾವಿದರು ಪರಸ್ಪರ ಹೊಟ್ಟೆಕಿಚ್ಚಿನಿಂದ ಕಚ್ಚಾಡುತ್ತಲೇ ಇದ್ದರೂ ಇದೊಂದು ವಿಚಾರಕ್ಕೆ ಅವರೆಲ್ಲರೂ ಒಗ್ಗಟ್ಟಿನಿಂದ ನಿಂತುಬಿಟ್ಟಿದ್ದರು. ಇಂದಿಗೂ ಎಲ್ಲೋ ಕೆಲವರನ್ನು ಬಿಟ್ಟರೆ ಈ ಸಮಸ್ಯೆ ಬಗೆಹರೆದಿಲ್ಲ.

ಮಹಿಳೆಯರಿಗೆ ತಡೆಹಾಕುವ ಇನ್ನೊಂದು ವಿಧಾನವೆಂದರೆ ಸಂಗೀತ, ನೃತ್ಯಗಳ ಕೆಲ ವಿಭಾಗಗಳನ್ನು ಅವರು ಕಲಿಯಬಾರದು, ಪ್ರದರ್ಶಿಸಬಾರದು ಎಂಬ ನಿಷೇಧ. ರಾಗ-ತಾನ- ಪಲ್ಲವಿಯಂತಹ ಪ್ರೌಢ ಅಭಿವ್ಯಕ್ತಿಗಳಲ್ಲಿ ಅವರು ತೊಡಗುವುದು ಉಚಿತವಲ್ಲ, ಸರಳವಾಗಿ ಸೌಮ್ಯವಾಗಿ ಕೀರ್ತನೆಗಳನ್ನು, ಪದಗಳನ್ನು ಹಾಡಿದರೆ ಚೆನ್ನ ಎಂಬಂತಹ ನಿರ್ದೇಶನಗಳು ಅಭಿಪ್ರಾಯಗಳ ಹೆಸರಿನಲ್ಲಿ ಚಾಲ್ತಿಗೆ ಬಂದದ್ದಿದೆ. ಡಿ.ಕೆ.ಪಟ್ಟಮ್ಮಾಳ್ ರಂತಹ ಕೆಲ ಮಹಿಳೆಯರಷ್ಟೇ ಭೋರ್ಗರೆಯುವ ಸಂಗೀತ ಪ್ರವಾಹವನ್ನು ಹರಿಸುವ ತಮ್ಮ ಸಾಮರ್ಥ್ಯವನ್ನು ಆತ್ಮವಿಶ್ವಾಸದಿಂದ ಸಮರ್ಥಿಸಿಕೊಂಡರು. 'ಸಂಗೀತ ಶೈಲಿಗಳಲ್ಲಿ ವೈವಿಧ್ಯಗಳಿರಬಹುದು, ಆ ಪೈಕಿ ಲಿಂಗಾಧರಿತ ಶೈಲಿಯೂ ಒಂದು ಎನ್ನಬಹುದೇ, ಗಂಡು ಸಂಗೀತ ಹೆಣ್ಣು ಸಂಗೀತ ಎಂದೆಲ್ಲಾ ಹೇಳುವುದು ಹಾಸ್ಯಾಸ್ಪದ'ಎಂದು ಗಟ್ಟಿಯಾಗಿ ಹೇಳಿದರು. ಕಲ್ಪನಾ ಸ್ವರಗಳನ್ನು ಹಾಡುವುದು ಒಂದು ಉನ್ನತ ಬೌದ್ಧಿಕ ಕ್ರಿಯೆಯಾದ್ದರಿಂದ ಹೆಂಗಸರಿಗೆ ಅದು ಸಾಧ್ಯವಿಲ್ಲ ಎಂಬೊಂದು ಪ್ರಚಾರ. ಇಂಥವುಗಳನ್ನು ಮೌನವಾಗಿ ಒಪ್ಪಿಕೊಂಡ ಕಲಾದೆಯರ ಅನಿವಾರ್ಯಗಳ ಕತೆಗಳೂ ಬಗೆಬಗೆಯವು. ಆದರೆ ಕೆಲವರಾದರೂ ಇಂಥಾ ವಿನಾಕಾರಣ ನಿರ್ಬಂಧಗಳನ್ನು ಮೀರುವ ಸಾಧನೆಯನ್ನು ಮಾಡಿದರು. ಹಲವರು ಈ ನಿರ್ಬಂಧಗಳಲ್ಲಿ ಸಿಲುಕಿ ತಮ್ಮ ಕನಸುಗಳನ್ನೂ, ಸಾಮರ್ಥ್ಯಗಳನ್ನೂ ಗಂಟುಕಟ್ಟಿ ಅಟ್ಟದ ಮೇಲೆ ಅಡಗಿಸಿಬಿಟ್ಟರು.

ಕಲಾವಿದೆಯರ ಜೀವಿತಗಳನ್ನು ಗಮನಿಸಿದಷ್ಟೂ ಹೆಣ್ಣಿನ ಲೈಂಗಿಕ ಬದುಕಿನ ಮೇಲೆ ಪುರುಷ ಚಿಂತನೆಯ ಸಮಾಜ ನಿಯಂತ್ರಣವನ್ನು ಸದಾ ಹೇರುತ್ತಲೇ ಬಂದಿದೆ ಎಂಬ ವಾಸ್ತವ ಗಟ್ಟಿಯಾಗುತ್ತದೆ. ಅವಳ ಬದುಕಿನ ಎಲ್ಲ ಎಳೆಗಳನ್ನೂ ಈ ನಿಯಂತ್ರಣವೇ ಆಡಿಸುತ್ತದೆ. ಪರಂಪರಾಗತವಾಗಿ ಕಲಾವಿದೆಯರಾದ ಮಹಿಳೆಯರ ಬದುಕಿನಲ್ಲಿ ಇದು ಹೆಚ್ಚು ಸ್ಪಷ್ಟವಾಗಿ ಕಾಣುತ್ತದಷ್ಟೇ. ಹೀಗಾಗಿಯೇ ಪುರುಷರು ತಮ್ಮ ಕಲಾಪರಂಪರೆಗಳನ್ನು ಉಳಿಸಿ ಬೆಳೆಸಿಕೊಳ್ಳುವಷ್ಟು ಸುಲಭವಾಗಿ ಮಹಿಳೆಯರು ತಮ್ಮ ಕಲಾ ಪರಂಪರೆಗಳನ್ನು ಉಳಿಸಿಕೊಳ್ಳಲಾರರು.

ಸಾಹಿತ್ಯ ಚಿತ್ರಕಲೆಗಳಂತಹವನ್ನು ಮಹಿಳೆಯು ಸ್ವಲ್ಪ ಸಲೀಸಾಗಿ ನಿರ್ವಹಿಸಬಹುದೇನೋ ಎಂದು ಕೆಲವೊಮ್ಮೆ ತೋರಬಹುದು. ಆದರೆ ಅವಳ ಅಭಿವ್ಯಕ್ತಿಗೆ ಅಡೆತಡೆಗಳನ್ನು

ಒಡ್ಡಲು ಪುರುಷ ಚಿಂತನೆ ಇಲ್ಲಿಯೂ ಕಾದಿರುತ್ತದೆ; ಸ್ವಲ್ಪ ಅದೃಶ್ಯವಾಗಿರಬಹುದು ಅಷ್ಟೇ. ಸೀತೆ ರಾವಣನ ಚಿತ್ರ ಬಿಡಿಸಿದ ಕತೆಯೊಂದನ್ನು ಲಕ್ಷ್ಮಿಯವರು ಪ್ರಸ್ತಾಪಿಸುತ್ತಾರೆ. ಗೆಳತಿಯ ಬಲವಂತಕ್ಕೆ ಒಪ್ಪಿ ಸೀತೆ ರಾವಣನ ಚಿತ್ರ ಬಿಡಿಸತೊಡಗಿದಳಂತೆ. ಕಾಲಿನಿಂದ ಆರಂಭಿಸಿ ಸಾಗುತ್ತಾ ಇನ್ನೇನು ಮುಖವನ್ನು ಚಿತ್ರಿಸಬೇಕೆನ್ನುವಾಗ ರಾಮ ಬಂದುಬಿಟ್ಟ. ಹೊಟ್ಟೆಕಿಚ್ಚನ್ನು ತಾಳಲಾರದೆ ಸೀತೆಯನ್ನು ಅಪವಾದದ ನೆಪದಲ್ಲಿ ಕಾಡಿಗಟ್ಟಿಬಿಟ್ಟನಂತೆ. ಇದು ಮಹಿಳೆಗೆ ಇರುವ ಅಭಿವ್ಯಕ್ತಿ ಸ್ವಾತಂತ್ರ್ಯ. ಇಂದಿನ ನಾವು ಕೂಡ ವಿಮರ್ಶೆಯ ನೆಪದಲ್ಲಿ ಮಹಿಳಾ ಸಾಹಿತ್ಯದ ಚರ್ಚೆಗೆ ತೊಡಗಿ ಲೇಖಕಿಯರ ಖಾಸಗಿ ಬದುಕುಗಳನ್ನೂ ಚರ್ಚೆಗೆ ಎಳೆಯುವ ಪ್ರವೃತ್ತಿಯನ್ನು ನೋಡುತ್ತಿದ್ದೇವೆ. ಪುರುಷರಿಗೆ ಅನ್ವಯವಾಗದ 'ಅನುಭವ ಪ್ರಾಮಾಣಿಕತೆ'ಯ ಪ್ರಶ್ನೆ ಮಹಿಳೆಯರ ಸಾಹಿತ್ಯಕ್ಕೆ ಸವಾಲಾಗಿ ಬಿಡುತ್ತದೆ. ಮೊದಲೇ ಹತ್ತು ಹಲವು ಸಾಮಾಜಿಕ ನಿರ್ಬಂಧಗಳಲ್ಲಿ ಸಿಲುಕಿ ತೊಳಲುವ ಮಹಿಳೆಗೆ ತನ್ನ ಸೃಜನಶೀಲತೆಗೆ ಎದುರಾದ ಸವಾಲನ್ನು ಹೊಸದಾಗಿ ಮೈಮೇಲೆ ಹಾಕಿಕೊಳ್ಳಲು ಹಿಂಜರಿಕೆಯೇ ಆಗಿಬಿಡುತ್ತದೆ.

ಮಹಿಳಾ ಚರಿತ್ರೆಯನ್ನು ಪುನಾರಚಿಸುವಲ್ಲಿ ಈ ಮಾತು ಗಮನಾರ್ಹ. ಸಾಧನೆ, ಸಾಮರ್ಥ್ಯ, ಘಟನೆ, ಸಂದರ್ಭಗಳ ಗೋಚರ ದಾಖಲೆಗಳಿಗಾಗಿಯೇ ಶೋಧಿಸುತ್ತಾ ನಿಂತರೆ ಇಡೀ ಶ್ರಮ ನಿಷ್ಫಲವೇ ಎನಿಸಿಬಿಡಬಹುದು. ಈ ದಾಖಲೆಗಳು ಮರೆಯಾಗಿ ಹೋಗಲು ಇರುವ ಕಾರಣಗಳನ್ನು ಗಮನಕ್ಕೆ ತಂದುಕೊಳ್ಳಬೇಕು. ಸಿದ್ಧ ಮಾದರಿಯ ಸಂಶೋಧನಾ ವಿಧಾನಗಳಿಂದ ಚರಿತ್ರೆಯ ಎಳೆಗಳು ಎಟುಕಲಾರವು. ಮೌಖಿಕ ಪರಂಪರೆಯನ್ನು ಆಶ್ರಯಿಸುವುದು ಮಹಿಳಾ ಲೋಕವನ್ನು ಕಾಣಲು ಒಂದು ದಾರಿಯಾಗಬಹುದು. ಇಂತಹಾ ಒಂದು ಆಶಾದಾಯಕ ಪ್ರಯೋಗವನ್ನು ಸಿ.ಎಸ್ .ಲಕ್ಷ್ಮಿಯವರು ಈ ಯೋಜನೆಯಲ್ಲಿ ಮಾಡಿದ್ದಾರೆ.

ಏಟ್ಸ್ ಕವಿಯ Tower ಕವನ ಸಂಕಲನದಲ್ಲಿ Among the school children ಎಂಬ ಕವಿತೆಯೊಂದಿದೆ. ಆ ಕವನದ ಕೊನೆಯ ನಾಲ್ಕು ಸಾಲುಗಳು ಹೀಗಿವೆ.

Oh! chestnut tree, great rooted blooffner
Are you the leaf, the blossom or the bowl
Oh! body swayed to music, oh! brightning glends
How can we know the Dancer from Dance.

ನೃತ್ಯದಿಂದ ನೃತ್ಯಗಾತಿಯನ್ನು ಅರಿಯುವ ಏಟ್ಸ್ ಕವಿಯ ಕುತೂಹಲ ಮಹಿಳಾ ಅಧ್ಯಯನಕಾರರಿಗೆ ಒಂದು ಉಪಯುಕ್ತ ಸೂಚನೆಯಾಗಿ ಸಿ.ಎಸ್ .ಲಕ್ಷ್ಮಿಯವರಿಗೆ ಕಂಡಿದೆ. ಈ ಪ್ರೇರಣೆಯಲ್ಲಿ ಅವರು The singer and the songನ ಶೋಧಕ್ಕೆ ತೊಡಗಿದ್ದಾರೆ. ಮಹಿಳೆಯರು ಅಭಿವ್ಯಕ್ತಿಸುವ ಸಾಹಿತ್ಯವಿರಲಿ, ಸಂಗೀತ ನೃತ್ಯಗಳಿರಲಿ,

ಇನ್ನಾವುದೇ ಕಲೆಯಿರಲಿ, ಅದನ್ನು ಕುರಿತ 'ಕಲಾವಿಮರ್ಶೆ' ಕಲಾವಿದೆಯನ್ನೂ ಒಳಗೊಂಡುಬಿಡುತ್ತದೆ ಎನ್ನುವುದು ಸಹಜವೇ. ಸೃಜನಶೀಲತೆಯ ಸಹಜಗುಣವೇ ಅದು. ಹಾಗೆಂದಾಗ, ಆಕೆಯ ಖಾಸಗಿ ಬದುಕನ್ನು ಜಾಲಾಡುವ ಅನುಮತಿ 'ವಿಮರ್ಶೆ'ಗೆ ದೊರೆತು ಬಿಟ್ಟಿತೆಂಬ ವಿಪರೀತದ ಅರ್ಥ ಬರಬೇಕಾಗಿಲ್ಲ. ಅನುಭವ ಪ್ರಾಮಾಣಿಕತೆಯನ್ನು ಕುರುಹುಗಳಲ್ಲಿ ಕಾಣುವ ಸೂಕ್ಷ್ಮತೆ ವಿಮರ್ಶೆಗೆ ಬೇಕು. ಬದಲು ಆಕೆಯ ಬದುಕಿನ ವಿವರಗಳನ್ನು ಜಾಲಾಡುವ ರೂಕ್ಷಮಾರ್ಗವನ್ನು ಹಿಡಿದರೆ ಆ ವಿಮರ್ಶೆ ಎಂದಿಗೂ 'ಕಲೆ'ಯನ್ನು ಸಮೀಪಿಸಲಾರದು. ಸಂವೇದನಾಶೀಲ ವಿಮರ್ಶೆ ಅವಳ ಸೃಜನಶೀಲತೆಯ ಬೆಳಕಿನಲ್ಲಿ ಅವಳನ್ನು ಅರ್ಥಮಾಡಿಕೊಳ್ಳಲು ಕೂಡ ಯತ್ನಿಸಿದರೆ ಆ ಮಾತು ಬೇರೆ. ವಿಶಾಲ ಅರ್ಥದಲ್ಲಿ 'ಮಹಿಳಾ ಸೃಜನ ಶೀಲತೆ'ಯ ಅಧ್ಯಯನ 'ಮಹಿಳಾ ಲೋಕ'ದ ಗ್ರಹಿಕೆಗೆ ಇರುವ ಪ್ರವೇಶದ್ವಾರ ಎಂದು ಪರಿಗಣಿಸಿದರೆ, ನಮ್ಮ ಅಧ್ಯಯನಗಳಿಗೆ ಬಲವಾದ ಆಧಾರವೊಂದು ಲಭ್ಯವಾಗಬಹುದು.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಲಕ್ಷ್ಯಕ್ಕೊಳಗಾದ ಮಹಿಳಾ ಸಾಹಿತ್ಯ ತನ್ನದೇ ವಿಶಿಷ್ಟ ಕ್ರಮ ಹಾಗು ಸಾಮರ್ಥ್ಯಗಳಲ್ಲಿ ತನ್ನಷ್ಟಕ್ಕೆ ಅಭಿವ್ಯಕ್ತಿಗೊಳ್ಳುತ್ತಲೇ ಬಂತು. ತಿರುಮಲಾಂಬ, ಕಲ್ಯಾಣಮ್ಮ, ಶ್ಯಾಮಲಾದೇವಿ, ಕೊಡಗಿನ ಗೌರಮ್ಮ ಮುಂತಾದ ಹಿರಿಯ ಮಹಿಳೆಯರು ನಡೆಸುತ್ತಿದ್ದ ಕೆಲಸವನ್ನು ತ್ರಿವೇಣಿಯವರ ವಯಸ್ಸಿನ ಮಹಿಳೆಯರು ಮುಂದುವರೆಸಿದರು. ಬಹುಮುಖ್ಯವಾಗಿ ಕತೆಗಾರ್ತಿಯರ ಒಂದು ಪರಂಪರೆಯೇ ಬೆಳೆಯುತ್ತಾ 'ಮಹಿಳಾ ಸಾಹಿತ್ಯ'ದ ಇರವನ್ನು ಕಡೆಗಣಿಸುವುದು ಇನ್ನು ಸಾಧ್ಯವಿಲ್ಲ ಎಂಬ ವಾತಾವರಣವನ್ನು ಸೃಷ್ಟಿಸಿತು. ಈ ಸಾಲಿನಲ್ಲಿ ಬಂದ ಮುಖ್ಯ ಕತೆಗಾರ್ತಿಯರಲ್ಲಿ ಜಯಲಕ್ಷ್ಮಿ ಶ್ರೀನಿವಾಸನ್ ಕೂಡ ಗಮನಾರ್ಹರು. ಈಚೆಗೆ ಈ ಹಿರಿಯ ಕತೆಗಾರ್ತಿಯನ್ನು ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ ನೀಡಿ ಗೌರವಿಸಲಾಯಿತು. ತೀವ್ರ ಅನಾರೋಗ್ಯದಲ್ಲಿರುವ ಈ ಹಿರಿಯ ಜೀವ ಬೇಗನೆ ಚೇತರಿಸಿಕೊಳ್ಳಲಿ ಎಂಬುದು ನಮ್ಮೆಲ್ಲರ ಹಾರೈಕೆ. ಅಂದಿನ ದಿನಗಳಲ್ಲಿ ಕನ್ನಡ ಕಥಾ ಸಾಹಿತ್ಯವನ್ನು ಮಹಿಳೆಯರು ಬೆಳೆಸಿದ ಮಾದರಿಯಾಗಿ ಈ ಸಂಚಿಕೆಯಲ್ಲಿ ಜಯಲಕ್ಷ್ಮಿ ಶ್ರೀನಿವಾಸನ್ ಅವರ ಎರಡು ಸಣ್ಣಕತೆಗಳನ್ನು ಪ್ರಕಟಿಸಲಾಗಿದೆ.

(ಸಂ)

# ವೆಂಕಟ

*ಜಯಲಕ್ಷ್ಮಿ ಶ್ರೀನಿವಾಸನ್*

ಮಾಲತಿಗೆ ಆ ಹೊತ್ತು ಯಾವ ಕೆಲಸ ಮಾಡಲೂ ಹುಮ್ಮಸ್ಸಿಲ್ಲ. ಏನೋ ಹುಚ್ಚು ಹಿಡಿದವಳಂತೆ ಸ್ಫೂರ್ತಿಯೇ ಇಲ್ಲದೆ ತೋರುತ್ತಿದ್ದಳು. ಅದಾವುದೋ ಚಿಂತೆ ಅವಳನ್ನು ಪೀಡಿಸುತ್ತಿತ್ತು: ಮನಸ್ಸಿಗೆ ಯಾವುದೂ ಬೇಡವಾಯಿತು. ಹಾಗೂ ಹೀಗೂ ಒಂದು ರೀತಿಯಾಗಿ ಮನೆಯ ಕೆಲಸಗಳನ್ನು ಗಮನಿಸಿದಳು. ಸರಿ, ಮಕ್ಕಳು ಶಾಲೆಗೆ ಹೋದದ್ದಾಯಿತು. ಯಜಮಾನರು ಆಫೀಸಿಗೆ ಹೊರಟರು. ಕಾರು ಕಾಂಪೌಂಡನ್ನು ದಾಟಿದ್ದೂ ಆಯಿತು.

ಬೆಳಗಿನಿಂದಲೂ ಮನದೊಳಗೆ ಹೊಗೆಯಾಡುತ್ತಿದ್ದ ವೇದನೆಯು ಈಗ ಏಕಾಂತದಲ್ಲಿ ಉರಿಯಲಾರಂಭಿಸಿತು. "ಛೀ, ಛೀ, ಏನು ಕೆಲಸ ಮಾಡಿದೆ! ಅನ್ಯಾಯ, ಶುದ್ಧ ಅನ್ಯಾಯ ಈ ಸಣ್ಣ ತಪ್ಪಿಗಾಗಿ ಅವನನ್ನು ಕೆಲಸದಿಂದ ಓಡಿಸಿಯೇ ಬಿಡಬೇಕೇ? ಅಯ್ಯೋ ದೇವರೇ ಅರಿಯದ ಹುಡುಗನನ್ನು ಸುಖವಾಗಿ ಕಾಪಾಡಪ್ಪ.ಒಳ್ಳೆಯ ಹುಡುಗ ಪಾಪ ಈ ಐದಾರು ವರ್ಷ ಕಾಲ ನಮಗೆ ಆದೆಷ್ಟು ದುಡಿದಿದ್ದಾನೆ. ಮನುಷ್ಯ ತಾನೇ! ತಪ್ಪು ತಂಟೆ ಕೊಂಚವೂ ಮಾಡದೆ ಹೋದರೆ ಅವನು ದೇವರೇ ಆಗಿಬಿಟ್ಟಾನು ಅಲ್ಲವೇ! ನಮ್ಮ ಕಿಟ್ಟಿ, ವಿದ್ಯಾ, ರಾಣಿ, ಇವರೆಲ್ಲ ತಪ್ಪು ಮಾಡೋದೇ ಇಲ್ಲವೇನು! ಅವರನ್ನೆಲ್ಲ ಕ್ಷಮಿಸಿ ಮರುಘಳಿಗೆಯೇ ಮುದ್ದಾಡುವ ಈ ಹೃದಯಕ್ಕೆ ಆ ತಬ್ಬಲಿ ಹುಡುಗನ ಮೇಲೆ ಕರುಣೆ ತೋರದೆ ಹೋಯಿತಲ್ಲಾ......"ಎಂದು ಏನೇನೋ ಚಿಂತಿಸಿ ಪರಿತಪಿಸಿದಳು. ಚಿಂತಾಕ್ರಾಂತಳಾಗಿ ಅದೆಷ್ಟು ಹೊತ್ತು ಹಾಗೆ ಕುಳಿತಿದ್ದಳೋ ತಿಳಿಯದು. ಅಡುಗೆಯವನೂ ಅಮ್ಮಾವ್ರು ಊಟಕ್ಕೆ ಏಳಬಹುದೆಂದು ಕಾದೂಕಾದೂ ಸಾಕಾಗಿ, ಕೊನೆಗೆ ಮೆಲ್ಲಗೆ ಬಂದು "ತಾಯೀ, ಎಲೆ ಹಾಕಿದ್ದೇನೆ" ಎಂದು ಉಸುರಿದನು. ಅದೇ ತಾನೇ ಮಾಲತಿ ಎಚ್ಚೆತ್ತಳು ಎನ್ನಬಹುದು.

ಮಾಲತಿಯ ಕೊನೆಯ ಮಗು ರಾಣೀ ಆಗ ಒಂದು ತಿಂಗಳ ಮಗು. ಕಿಟ್ಟೀಗೆ ಐದು ವರ್ಷ, ವಯಸ್ಸು, ವಿದ್ಯಳಿಗೆ ಮೂರು ವರ್ಷ. ಮಾಲತಿ ಕೊಂಚ ಮರೆಯಾದರೆ ಸರಿ. "ಪುಟ್ಟ, ಪಾಪಚ್ಚೀಗೆ ಇಗೋ ಬಾದಾಮಿ, ಇಗೋ ಕಲ್ಲುಸಕ್ಕರೆ" ಎಂದು ಮಗುವಿನ ಬಾಯಲ್ಲಿ ತಂದು ತುರುಕಿ ಬಿಡುವನು ಕಿಟ್ಟೀ. ಇಂತಹ ತುಂಟತನಗಳೆಷ್ಟೋ! "ಥೂ, ಈ

ಪಾಪಚ್ಚೀ ಬೇಡ, ಅಮ್ಮಾ, ಮಾಮೀ ಮನೆಗೆ ಕೊಟ್ಟುಬಿಡು ನಾನೇ ನಿನ್ನ ಮಡಿಲಲ್ಲಿ ಮಲಗಿಕೋಬೇಕು'' ಎಂದು ರಚ್ಚೇ ಹಿಡಿಯುವಳು ವಿದ್ಯಾ. ಸಣ್ಣ ಕೂಸನ್ನು ಹೊಡದೇಬಿಡುವಳು, ಮಗು ಕಿಟ್ಟನೇ ಕಿರಿಚಿಕೊಳ್ಳುವುದು ಪಾಪ ಸಣ್ಣ ಮಗುವನ್ನು ಯಾವಾಗಲೂ ಯಾರಾದರೊಬ್ಬರು ಎಚ್ಚರಿಕೆಯಿಂದ ನೋಡಿಕೊಳ್ಳಬೇಕಾಗಿತ್ತು. ಆದುದರಿಂದ ಮಾಲತಿಯ ತಾಯಿ ಗೌರಮ್ಮ ಈ ತುಂಟ ಮಕ್ಕಳನ್ನು ನೋಡಿಕೊಳ್ಳಲು ಸಣ್ಣ ಹುಡುಗನೊಬ್ಬನನ್ನು ಇಡಬೇಕೆಂದು ಸಲಹೆಮಾಡಿದ್ದರು. ಅದರಂತೆ ಒಂದು ದಿನ ಬೆಳಿಗ್ಗೆ ಕೆಲಸದವಳು ನಿಂಗಿ ಒಬ್ಬ ಹುಡುಗನನ್ನೂ ಅವನ ತಾಯಿಯನ್ನೂ ಕರೆತಂದೇಬಿಟ್ಟಳು. ''ಅಪ್ಪನಿಲ್ಲದ ಮಗು, ನೀವೇ ಅವನಿಗೆ ಅಪ್ಪ, ಅವ್ವ, ದೇವ್ರು ದಿಂಡ್ರು ಎಲ್ಲ. ನಿಮ್ಮಕೈಲೀ ಒಪ್ಸಿಬಿಟ್ಟೇ ಕನ್ರವ್ವಾ. ತಿಂಗಳಿಗೆ ನಾಲ್ಕು ರೂಪಾಯಿ ಕೊಟ್ಟು ಅನ್ನ ಬಟ್ಟೆ ಗಿಟ್ಟಿಸಿದರೆ ಸಾಕ್ರವ್ವಾ'' ಎಂದು ಕಣ್ಣೀರಿಡುತ್ತಾ ಮಾಲತಿಯ ಬಳಿ ಮಗನನ್ನು ಒಪ್ಪಿಸಿಬಿಟ್ಟಳು ಆ ಹುಡುಗನ ತಾಯಿ.

ಹುಡುಗನ ಹೊಳಪಾದ ಕಣ್ಣುಗಳೂ, ಕಳೆಕಟ್ಟಿದ ಮುಖವೂ ಮನೆಯಲ್ಲಿ ಎಲ್ಲರನ್ನೂ ಆಕರ್ಷಿಸಿತು, ಒಳ್ಳೆ ಚೂಟಿಯಾದ ಹುಡುಗ, ಸರಸರನೇ ಓಡಿ ಓಡಿ ಕೆಲಸ ಮಾಡುತ್ತಿದ್ದ ವೆಂಕಟ. ಮೈಗೆ ಕೊಂಚ ಪೋಷಣೆ ಇತ್ತರೆ ಬಲು ಜೋರಾದ ಆಳಾಗಿ ಮಾರ್ಪಡುವುದರಲ್ಲೇನೋ ಸಂಶಯವಿಲ್ಲ. ಹರಕಲು ಬಟ್ಟೆಯೂ ಕೆದರಿದ ತಲೆಯು ಜಿಡ್ಡು ನಾತವು ಭೂಷಣವಾಗಿ ಧರಿಸಿದ್ದ ವೆಂಕಟನಿಗೆ ಮಾಲತಿ ಎರಡು ಕಾಕಿ ಚಡ್ಡಿ, ಬಿಳೀ ಶರ್ಟು ಎರಡು ಹೊಲಿಸಿಕೊಟ್ಟು, ಎರಡು ಹಳೆಯ ಟವಲುಗಳೂ, ಸಾಬೂನು ಚೂರು ಒಂದು ಕೊಟ್ಟು ಪರಿಶುದ್ಧವಾಗಿರಲು ಬೋಧಿಸಿದಳು. ಅವನಿಗೆ ತಲೆ ಬಾಚಿಕೊಳ್ಳಲು ಬಾಚಣಿಗೆ ಏನು, ಸೀಸೆಯೊಂದರಲ್ಲಿ ಕೊಬ್ಬರಿ ಎಣ್ಣೆ ಏನು! ಜೋರಾಗಿ ಕ್ರಾಪು ಮಾಡಿಸಿಕೊಂಡು, ಪ್ರತಿನಿತ್ಯ ಸಾಬೂನು ಹಚ್ಚಿಸ್ನಾನ ಮಾಡಿ ಕೊಂಚ ದಿನಗಳಲ್ಲೇ ಪಟ್ಟಣಿಗನಾಗಿ ಮಾರ್ಪಟ್ಟ ವೆಂಕಟ. ಅವನ ಬುದ್ಧಿಯೂ ಬಹಳ ಸೂಕ್ಷ್ಮ. ಬಹಳ ಬೇಗನೆ ಎಲ್ಲ ಕೆಲಸ ಮಾಡಲು ಕಲಿತುಬಿಟ್ಟನು. ಮಕ್ಕಳಿಬ್ಬರೂ ವೆಂಕಟ ವೆಂಕಟ ಎಂದು ಅವನ ಹತ್ತಿರ ಚೆನ್ನಾಗಿ ಅಂಟಿಕೊಂಡುಬಿಟ್ಟರು. ಅವರನ್ನು ಆಟವಾಡಿಸಿಕೊಂಡು ಇರಲು ಬಂದ ಹುಡುಗ ಕ್ರಮೇಣ ಅವರುಗಳಿಗೆ ಸ್ನಾನ ಮಾಡಿಸುವುದು, ಊಟ ಮಾಡಿಸುವುದು ಕತೆ ಹೇಳಿ ಮಲಗಿಸುವುದು, ನಡುನಡುವೆ ಸಣ್ಣ ಮಗುವನ್ನೂ ಗಮನಿಸಿಕೊಳ್ಳುವುದು, ಅಂಗಡಿಗೆ ಹೋಗಿಬರುವುದು, ಬಟ್ಟೆ ಒಗೆಯುವುದು, ಮನೆ ಗುಡಿಸುವುದು, ಬೂಟ್ಸಿಗೆ ಪಾಲೀಷ್ ಹಾಕುವುದು... ಇಂತಹ ಸಕಲ ಕಾರ್ಯಗಳನ್ನೂ ಅಚ್ಚುಕಟ್ಟಾಗಿ ಮಾಡಲು ಕಲಿತುಬಿಟ್ಟನು. ರಾಯರ ಮನೆಯ ಊಟ ಒಗ್ಗಿ ಸೊಂಪಾಗಿಬೆಳೆದು ಬಿಟ್ಟ ವೆಂಕಟ.

ಮನೆಯಲ್ಲಿ ಎಲ್ಲರಿಗೂ ವೆಂಕಟನ ಕೆಲಸವೇ ಅಚ್ಚುಮೆಚ್ಚು. ಮಾಲತಿಗಂತೂ ವೆಂಕಟನನ್ನು ಅರ್ಧ ಘಳಿಗೆ ಕಾಣದಾದರೆ ಸರಿಹೋಗದು. ಕ್ರಮೇಣ ಮಕ್ಕಳೂ ದೊಡ್ಡವರಾಗಿ ಪಾಠಶಾಲೆಗೆ ಹೋಗಲು ಪ್ರಾರಂಭಿಸಲು, ಮನೆಯ ಎಲ್ಲ ಕೆಲಸ

ಕಾರ್ಯಗಳ ಹೊಣೆಯೂ ವೆಂಕಟನ ಪಾಲಿಗೆ ಸೇರಿತು. ಮಾಲತಿಯಂತೂ ವೆಂಕಟನನ್ನು ಒಬ್ಬ ಆಳೆಂದು ಪರಿಗಣಿಸದೆ, ತನ್ನ ಕುಟುಂಬದಲ್ಲೊಬ್ಬ ನೆಂಟನೆಂದೇ ಭಾವಿಸಲಾರಂಭಿಸಿದಳು. ತನ್ನ ಮಕ್ಕಳ ಜತೆಯಲ್ಲೆ ಅವನಿಗೂ ತಿಂಡಿ ಕೊಡುವಳು. ಅವನಿಗೆ ಕೊಂಚ ನೆಗಡಿಯಾದರೂ ಸಹ ಮಾಲತಿ ಸಹಿಸಳು. ಉಪಚಾರಮಾಡಿ ಆಸ್ಪತ್ರೆಯಿಂದ ಔಷಧಿ ತರಿಸಿ ಕೊಡುವಳು.ವೆಂಕಟ ಒಳ್ಳೆಯ ಹುಡುಗ, ನಂಬಿಕಸ್ತ, ಜಾಣ. ಆದರೆ ಅವನಲ್ಲಿಯೂ ದುರ್ಗುಣವಿತ್ತು.

ಜಾಣರಾದವರಿಗೆ ಕೊಂಚ ಅತಿಯ ಪ್ರತಿಷ್ಠೆ. ಆಗಾಗ್ಗೆ ಕೆಲಸ ತಪ್ಪಿಸಿಕೊಳ್ಳುತ್ತಿದ್ದನು. ಮಾರನೆಯ ದಿನ ತಲೆ ಕೆರೆಯುತ್ತಾ ಹಿತ್ತಲ ಬಾಗಿಲ ಬಳಿ ಬಂದು ನಿಲ್ಲುತ್ತಿದ್ದ, ಮಕ್ಕಳು 'ಅಮ್ಮಾ, ವೆಂಕಟ ಬಂದ, ಅಮ್ಮಾ ವೆಂಕಟ ಬಂದ,' ಎಂದು ಕುತೂಹಲದೊಡನೆ ಕಿರುಚುತ್ತಾ ಅವನಿದ್ದೆಡೆಗೆ ಧಾವಿಸುವರು. ಇತರ ಸಮಯಗಳಲ್ಲಿ ಸ್ವಾಧೀನದಿಂದ ಮಾತನಾಡಿ ಅವನಿಗೆ ಆದರ ತೋರಿಸುತ್ತಿದ್ದ ಮಾಲತಿ, ಈಗ ಖಂಡಿಸುವುದಕ್ಕೆ ಮಾತ್ರ ಮುಂದೆ ಬರುತ್ತಿರಲಿಲ್ಲ.

"ವೆಂಕಟ ಬಂದು ಹಿತ್ತಲ ಬಾಗಿಲಲ್ಲಿ ನಿಂತಿದ್ದಾನೆ" ಎಂದು ಮಾತ್ರ ಗಂಡನ ಬಳಿ ಹೋಗಿ ಉಸುರುವಳು."ಹೌದೌದು ಬೈಯ್ಯುವುದಕ್ಕೂ ರೇಗುವುದಕ್ಕೂ ನಾನೇ ಹೊಣೆ! ಒಳ್ಳೆಯ ಹೆಸರು ಗಳಿಸಲು ನೀನು!ಆಫೀಸು ಕೆಲಸ ಹೊರೆ ಹೊರೆಯಾಗಿದೆ, ನೀನೇ ಹೋಗಿ ತಲೆ ಚಚ್ಚಿಕೋ, ಮುದ್ದು ಮಾಡೀ ಮಾಡೀ ಹುಡುಗನನ್ನು ಹಾಳು ಮಾಡಿದುದಾಯಿತು" ಎಂದು ಹೆಂಡತಿಯ ಮೇಲೆ ರೇಗಿಬೀಳುವನು ನಾರಾಯಣ ಮೂರ್ತಿ.

"ಇಲ್ಲಾಂದ್ರೆ ಇನ್ನು ಮೇಲೆ ನಾನವನಿಗೆ ಶಿಫಾರ್ಸು ಮಾಡುವುದಿಲ್ಲ, ಕೊಂಚ ನೀವು ಗದರಿಸಿದರೇನೇ ಅವನಿಗೆ ಭಯ ಹುಟ್ಟುವುದು. ಬಹಳ ಹೆಚ್ಚಿಹೋದ ನೋಡಿ" ಎಂದು ತಗ್ಗಿದ ಧ್ವನಿಯಲ್ಲಿ ಅನ್ನುವಳು ಮಾಲತಿ.

"ಅವನನ್ನು ತೊಲಗಿಸು ಎಂದರೂ ನೀನು ಕೇಳೋಲ್ಲ. ಇವನಿಲ್ಲದಿದ್ದರೆ ಇನ್ನೊಬ್ಬನು ಬರುತ್ತಾನೆ.. ಇಲ್ಲ.. ನೀನೇ ಗದರಿಸು ಏನೀಗ?.. ನನಗಂತೂ ಖಂಡಿಸುವ ವಿದ್ಯೆಯೇ ಬರುವುದಿಲ್ಲವಲ್ಲಾ! ನನ್ನನ್ನು ಪೀಡಿಸುವುದೊಂದು ಮಾತ್ರ ಗೊತ್ತಿದೆ ನಿನಗೆ!"

"ಇಲ್ಲಾಂದ್ರೆ. ಏನು ಹೇಳುವುದೆಂದೇ ಗೊತ್ತಾಗೋಲ್ಲ. ಅವನ ಸೋದರ ಮಾವ ಎರಡು ದಿನ ಹಳ್ಳಿಗೆ ಬಂದು ಹೋಗು ಎಂದು ಕರೆದನಂತೆ. ನನ್ನನ್ನು ಬಂದು ರಜೆ ಕೇಳಿದರೆ ರೇಗುವೆನೆಂದು ಹೇಳದೆ ಕೇಳದೆ ಹೋಗಿಬಿಟ್ಟಿದ್ದಾನೆ. ಇನ್ನು ಮೇಲೆ ಹಾಗೆ ಮಾಡುವುದೇ ಇಲ್ಲವೆಂದು ಆಣೆಯಿಟ್ಟು ಕೈ ಮುಗಿಯುತ್ತಾನೆ.."

"ಸರಿ. ನನ್ನನ್ನು ಏನು ಮಾಡೆಂದು ಗೋಳು ಹೊಯ್ದುಕೊಳ್ಳುತ್ತೀ? ಈ ತಿಂಗಳೂ ಸಂಬಳ ಕೊಟ್ಟು ಅವನನ್ನು ಮುಂಚೆ ಮನೆಯಿಂಧ ಹೊರಡಿಸು",

"ಆಮೇಲೆ?"

"ಆಮೇಲೆ ಏನು ಮೇಲೆ? ಇಷ್ಟೊಂದು ದೊಡ್ಡ ನಗರದಲ್ಲಿ ಬೇರೊಬ್ಬ ಆಳು ಸಿಗುವುದಿಲ್ಲವೇನು?"

"ಅದು ಸರಿ, ಇವನಂತಹ ನಂಬಿಕೆಯುಳ್ಳ ಆಳು ಸಿಗುವುದು ಬಹಳ ಶ್ರಮ. ಮತ್ತು ಚೂಟಿಯಾದ ಹುಡುಗ. ಶ್ರೀಧರ(ಮಾಲತಿಯ ತಮ್ಮ) ರಜಾದಲ್ಲಿ ಬಂದಿದ್ದಾಗ ಅವನನ್ನು ಪೀಡಿಸಿ ಓದುಬರೆಹ ಸಹ ಕಲಿತುಬಿಟ್ಟಿದ್ದಾನೆ. ಹಾಲಿನಲೆಕ್ಕ, ಅಗಸನಲೆಕ್ಕ ಎಲ್ಲವನ್ನೂ ಈಗ ಅವನೇ ಬರೆಯುತ್ತಾನೆ. ಅವನಿಲ್ಲದಿದ್ದರೆ ನನಗೆ ಬಲು ಕಷ್ಟಾಂದ್ರೆ. ಅವನನ್ನು ಕಳುಹಿಸಿಬಿಟ್ಟರೆ ಇನ್ನೊಬ್ಬನು ಬಂದು ನಿಮ್ಮ ಬಟ್ಟೆಗಳನ್ನು ನಿತ್ಯಚೊಕ್ಕಟವಾಗಿ ಇಸ್ತ್ರೀ ಮಾಡಿಡುವನೇನು? ಇವನ ಹಾಗೆ ಮಿಕ್ಕ ಆಳುಗಳು ಇಷ್ಟೊಂದು ಬೇಗ ಕಲಿಯಬಲ್ಲರೇ? ಒಂದು ದಿನ ಡ್ರೈವರ್ ಬರದೇ ಹೋದರೆ ಅವನೇ ಅಲ್ಲವೇ ಕಾರು ಒರೆಸಬೇಕಾಗಿದೆ, ಅಲ್ಲದೇ.. ಅವನಿಲ್ಲದಿದ್ದರೆ ಮಕ್ಕಳಿಗೆ ಬಲು ಬೇಕಾರು ಪಾಪ..."

"ಸರಿ ಪುನಃ ನಿನ್ನ ದಾರಿಯೇ ನಿನಗೆ, ಮತ್ತೆ ನನ್ನನ್ನು ಯಾಕೆ ಬಂದು ಹೀಗೆ ತೊಂದರೆ ಮಾಡಬೇಕು? ಅನ್ಯಾಯವಾಗಿ ನನ್ನ ಕೆಲಸವೆಲ್ಲ ಕೆಟ್ಟುಹೋಯಿತು ಅಷ್ಟೆ." "ಹ್ಯಾಗೋ ಹೋಗು, ಆ ಕೆಲಸವನ್ನೂ ನೀನೇ ಮಾಡಬಾರದೆ? ನಿನ್ನ ಪಾಡು, ನಿನ್ನ ಮಾತೇ ಹೀಗೆ ನನ್ನನ್ನು ಯಾಕೆ ಹೀಗೆ ಪೀಡಿಸುತ್ತೀ?" ಎನ್ನುವನು ನಾರಾಯಣಮೂರ್ತಿ. ಗಂಡನಿಗೂ ವೆಂಕಟನನ್ನು ನಿಲ್ಲಿಸಿಕೊಳ್ಳುವುದರಲ್ಲಿ ಸಮ್ಮತವಿದೆಯೆಂಬುದನ್ನು ಅರಿತು ಹಿಗ್ಗುವಳು ಮಾಲತಿ.

"ಏನೋ ವೆಂಕಟ, ರಾಯರು ಬಹಳ ಸಿಟ್ಟಿನಲ್ಲಿದ್ದಾರೆ ತಿಳಿಯಿತೇ?"

"ಹೂಂ"

"ಇನ್ನು ಮೇಲೆ ಹೀಗೆಲ್ಲ ಹೇಳದೆ ಕೇಳದೇ ಹೋಗಬಾರದು, ಏನು?"

"ಹೂಂ, ತಾಯೀ"

"ಸರಿಯಾಗಿರಬೇಕು. ಇನ್ನೊಂದು ಸಲ ಹೀಗೆ ಮಾಡಿದರೆ, ಕೆಲಸವೇ ಹೋಗಿಬಿಡುವುದಷ್ಟೆ."

"ಸರಿ...ತಾಯಿ."

"ರಾಯರು ಈ ತಿಂಗಳ ಸಂಬಳ ಕೊಡಲೇಬೇಡವೆಂದರು. ಹೋಗಲಿ ಪಾಪ ಎಂದು ಅವರ ಹತ್ತಿರ ಶಿಪಾರ್ಸು ಮಾಡುತ್ತೇನೆ. ಇನ್ನು ಸರಿಯಾಗಿರಬೇಕು, ಏನೋ?"

"ಆಗಲಿ ತಾಯೀ..." ಈ ರೀತಿಯಾಗಿ ಒಂದೆರಡು ಮಾತುಗಳು ಅಂದರೆ ಸಾಕು, ತಾನು ವೆಂಕಟನನ್ನು ವಿಪರೀತ ಖಂಡಿಸಿಬಿಟ್ಟಂತೆ ಭಾವನೆ, ಮಾಲತಿಗೆ.

ಇದೆಲ್ಲವನ್ನೂ ಅರಿಯನೇನೂ ಆ ತುಂಟ ವೆಂಕಟ! ಅವನೂ ಬಲು ಚುರುಕಲ್ಲವೇ!

"ಅಮ್ಮಾವ್ರು ಸಿಟ್ಟು ಮಾಡಿಕೊಳ್ಳೊಲ್ಲಾ ಎಂದು ನನಗಾಗಲೇ ಗೊತ್ಕನ್ರಾ! ಇಲ್ದಿದ್ರೆ ಅಳ್ಳೀಗೋಗ್ತಿದ್ನಾ!.... ನಮ್ಮ ರಾಯ್ರುದು ಅಪರಂಜೀ ಗುಣ ವೀರಣ್ಣಾ! ಅವ್ರಹಂಗೆ ಧಾರಾಳ ಬುದ್ಧಿ ದರ್ಮರಾಜ್ನಿಗೂ ಇಲ್ಲಾ,"... ಎಂದು ತನ್ನ ಸಂಗಡಿಗರ ಜೊತೆಯಲ್ಲಿ ಹೆಮ್ಮೆ ಕೊಚ್ಚಿಕೊಳ್ಳುವನು ವೆಂಕಟ.

ಈ ರೀತಿ ಅವನೆಷ್ಟೋ ಬಾರಿ ಹಳ್ಳಿಗೆ ಹೋದವನು ಹದಿನೈದು ದಿನಗಳ ಬಳಿಕ ನಿಧಾನವಾಗಿ ಕೆಲಸಕ್ಕೆ ಬಂದು ನಿಂತುದನ್ನು ಕಂಡು ರಾಯರಿಗೆ ಬಹಳ ಸಿಟ್ಟು ಏರ್ಪಟ್ಟಿತು. ರಾಯರಿಗಿಂತ ಅಮ್ಮಾವರಿಗೆ ದೂರ್ವಾಸ ಮುನಿಯಂತೆ ಕೋಪ ಎಲ್ಲೆ ಮೀರಿತು. 'ಬಡಪಾಯಿ ಪಾಪ ಎಂದು ನೋಡಿದರೆ, ಬರುಬರುತ್ತಾ ಕೊಂಚನಾದರೂ ಭಯವಿಲ್ಲ. ಬಹಳ ಹೆಚ್ಚಿಕೊಂಡ ದಾಂಡಿಗ, ಹಾಳಾಗಿಹೋಗು' ಎಂದು ತನಗರಿವಿಲ್ಲದೆಯೇ ಉಕ್ಕಿಬಂದ ಕೋಪದಲ್ಲಿ ಹೇಳಿಬಿಟ್ಟಳು ಮಾಲತಿ. ಆಫೀಸು ರೂಮಿನಿಂದ ಮಾಲತಿಯ ಕೂಗನ್ನು ಕೇಳಿದ ನಾರಾಯಣಮೂರ್ತಿಗೇ ಅವಳ ಖಡಾಖಂಡಿತವಾದ ಮಾತು ಕೇಳಿ ಪರಮಾಶ್ಚರ್ಯ ವಾಯಿತು. ಕಿಟಕಿಯಿಂದ ವೆಂಕಟನ ಆಳು ಮುಖವನ್ನು ಕಂಡು ನಾರಾಯಣಮೂರ್ತಿಗೆ ಬಹಳ ಕನಿಕರವಾಯಿತು. ಇಷ್ಟು ದಿನಗಳು ಅವನು ಬಾರದೇ ಹೋದ ಕಾರಣವನ್ನು ಮುಂಚೆ ವಿಚಾರಿಸದೆ ಅವಳೀಗ ಹೀಗೆ ಅವನನ್ನು ಹೊರಡಿಸುತ್ತಿರುವಳೆಂದು ನಾರಾಯಣ ಮೂರ್ತಿಯು ಅಚ್ಚರಿಗೊಂಡ. ವೆಂಕಟನ ತುಟಿಗಳು ಅದೇನನ್ನೋ ಹೇಳಬೇಕೆಂದು ಅದುರಿದುವು. ಆದರೆ ಮಾಲತಿ ಅವನಿಗೆ ಮಾತನಾಡಲು ಅವಕಾಶವಿತ್ತರಲ್ಲವೇ? ಒಂದೇ ಸಮನೆ ಪಿಟಪಿಟನೆ ನುಡಿದು ಸಂಬಳವನ್ನು ಕೊಡುವುದಿಲ್ಲವೆಂದುಬಿಟ್ಟಳು. ಬಾಗಿಲನ್ನು ಮುಂದಕ್ಕೆ ತಳ್ಳಿದವಳೇ ಒಳಗೆ ಬಂದುಬಿಟ್ಟಳು. ಯಾವಾಗಲೂ ಗಂಡನ ಬಳಿ ಬಂದು ವೆಂಕಟನನ್ನು ಗದರಿಸೆಂದು ಹೇಳುತ್ತಿದ್ದವಳು ಈ ದಿನ ಯಾಕೋ ಧೈರ್ಯವಾಗಿ ಅವನನ್ನು ಬೈದು ಕೆಲಸದಿಂದ ಓಡಿಸಿಬಿಟ್ಟ ಮಾಲತಿಯನ್ನು ಕಂಡು ಯಾರಿಗೆ ತಾನೇ ಆಶ್ಚರ್ಯವಾಗಲಾರದು? ವೆಂಕಟ ರಾಯರ ಬಳಿ ಬಂದು ಕೈಮುಗಿದು ನಿಂತಿದ್ದರೆ ನಾರಾಯಣಮೂರ್ತಿ ಚೆನ್ನಾಗಿ ವಿಚಾರಿಸುತ್ತಿದ್ದ ಆದರವನಿಗೇನು ಗೊತ್ತು ಪಾಪ ಅಮ್ಮಾವರೇ ಇಷ್ಟೊಂದು ಕೋಪದಲ್ಲಿ ಇರುವಾಗ ರಾಯರ ಬಳಿ ಹೋದರೆ ಹೊಡೆದೇಬಿಟ್ಟಾರು ಅಂದುಕೊಂಡು ಭೀತಿಯಿಂದ ಬಂಗಲೆಯ ಕಾಂಪೌಂಡನ್ನು ದಾಟಿದನು. ಅಮ್ಮಾವರಿಗೆ ಇಷ್ಟೊಂದು ಕೋಪ ಬರಬಹುದು, ತನ್ನನ್ನು ಈ ರೀತಿಯಾಗಿ ಕೆಲಸದಿಂದಲೇ ನೀಗಿಸಿಬಿಡುವರು ಎಂಬುದಾಗಿ ಅವನು ಕನಸಿನಲ್ಲೂ ಕಂಡಿರಲಿಲ್ಲ. ಹೆತ್ತತಾಯಿ ಈ ರೀತಿ ಕೋಪಿಸಿಕೊಂಡು ಮನೆಯಿಂದ ಅವನನ್ನು ಹೊರದೂಡಿದ್ದರೂ ಅವನು ಇಷ್ಟೊಂದು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಈ ಆರು ವರ್ಷಗಳ ಕಾಲ ತನ್ನ ತಾಯಿಯೆಂದೂ, ದೇವರೆಂದೂ ನೆನೆದು ದುಡಿಯುತ್ತಿದ್ದ. ಅಮ್ಮಾವರು ಈ ರೀತಿ ತನ್ನನ್ನು ಕಾರಣ ಸಹ ವಿಚಾರಿಸದೆ ಕೊಂಚವೂ ಕನಿಕರವಿಲ್ಲದೆ ಒಂದೇಟಿಗೆ ಓಡಿಸಿಬಿಟ್ಟರಲ್ಲಾ ಎಂದು ಗಳಗಳನೆ ಕಣ್ಣೀರಿಟ್ಟ ವೆಂಕಟ. 'ಛೀ ಇನ್ಯಾರ ಮನೇಲೂ ದುಡಿಯೋಕಿಲ್ಲಾ, ಸೌದೆ

ಒಡೆದಾದರೂ, ಹೊಟ್ಟೆಹೊರೆಯುತ್ತೇನಷ್ಟೆ. ಬೇ ಯಾರ ಮನೇಲಿ ನಮ್ಮಮ್ಮಾವ್ರಂಥಾ ಒಳ್ಳೇ ಮನುಷ್ರು ಸಿಕ್ತಾವ್ರೆ? ನಮ್ಮ ತಾಯಿ ಒಡೆದ್ರೂ ಬಡಿದ್ರೂನೂವೇ ನಮ್ ಮಾಲ್ತಮ್ಮಾವ್ರ ಸಮಾನ ಯಾರೂ ಬರಾಕಿಲ್ರಾ.'ಆ ದಿನವೆಲ್ಲಾ ನಿಂತೆಡೆಯಲ್ಲಿ ನಿಲ್ಲದೆ, ಬೆಂಗಳೂರು ಪೂರ್ತಿ ತಿರುಗಾಡಿದ, ಕೊನೆಯ ಪಕ್ಷ ಒಂದು ಸಲವಾದರೂ ರಾಯರ ಮನೆಯ ಕಡೆ ಬಳಸಿ ಬಂದ. ಒಳಗೆ ಹೋಗಲು ಮಾತ್ರ ಧೈರ್ಯವಿಲ್ಲ.ಇಲ್ಲಿ ಮಾಲತಿ ಮಾತ್ರವೇನು! ವೆಂಕಟನನ್ನು ಬೈದು ಓಡಿಸಿ, ಒಳಗೆ ಬಂದವಳು ಅಯ್ಯೋ, ಇಂತಹ ತಪ್ಪು ಕೆಲಸ ಮಾಡಿದೆನಲ್ಲಾ ಅವನನ್ನು ಕಾರಣ ವಿಚಾರಿಸಲೇ ಇಲ್ಲ. ಅವರನ್ನೂ ಒಂದು ಮಾತು ಕೇಳಲಿಲ್ಲ, ಓಡಿಸಿಯೇ ಬಿಟ್ಟೆನಲ್ಲಾ, ಅವನು ಮಹಾ ಮಾನಿ. ಹಿಂದಿರುಗಿ ಬರಲಾರ.'' ಹೀಗೆಲ್ಲ ಚಿಂತಿಸಿ ತಲೆ ಚಚ್ಚಿಕೊಂಡಳು. ಗಂಡನ ಬಳಿ ಹೋಗಿ ಇದನ್ನು ಹೇಳಿಕೊಳ್ಳಲೂ ಸಂಕೋಚ. 'ಮಕ್ಕಳಾದರೋ ಒಬ್ಬರಿಗೊಬ್ಬರು ಜಗಳ ಮಾಡುತ್ತಾ ರಗಳೆ ಮಾಡುತ್ತಿವೆ, ಅವರಿಗೆ (ಯಜಮಾನರಿಗೆ) ಆಫೀಸಿಗೆ ಹೊತ್ತಾಯಿತು. ಹೊಸ ಸೂಟು ತೆಗೆದಿಡಬೇಕು. ಷರ್ಟಿಗೆ ಗುಂಡಿ ಬದಲಾಯಿಸಬೇಕು...ಧಾಂಡಿಗ! ಓಡಿಹೋದನಲ್ಲಾ ಅವನಿದ್ದರೆ ಚಿಂತೆಗಳು ಯಾವುವೂ ತನಗೆ ಇರುತ್ತಿರಲಿಲ್ಲ ಎಂದು ಅವಳ ಯೋಚನೆ ಉರುಳಿತು. ನಾರಾಯಣಮೂರ್ತಿ ಈ ವಿಷಯವಾಗಿ ಮಾತೆತ್ತಲಿಲ್ಲ. ತನ್ನಷ್ಟಕ್ಕೆ ಸ್ನಾನ ಊಟ ಮುಗಿಸಿಕೊಂಡು ಉಡುಪು ಬದಲಾಯಿಸಿಕೊಂಡವನು ಆಫೀಸಿಗೆ ತೆರಳಿದನು. ಮಕ್ಕಳನ್ನು ಸುಧಾರಿಸಿ ಊಟ ಮಾಡಿಸಿ ಪಾಠಶಾಲೆಗೆ ಕಳುಹಿಸಿದುದಾಯಿತು.

'ಅಬ್ಬಬ್ಬಾ! ಬೆಳಗ್ಗಿನಿಂದಲೂ ಮನದೊಳಗೆ ಹೊಗೆಯಾಡುತ್ತಿದ್ದ ಯೋಚನೆ, ಈಗ ಏಕಾಂತದಲ್ಲಿ ಒಗ್ಗನೆ ಹತ್ತಿಕೊಂಡು ಜ್ವಾಲೆ ಬಿಟ್ಟು ಉರಿಯಲಾರಂಭಿಸಿತು. ಅವಳ ಹೃದಯ ವೆಂಕಟನಿಗಾಗಿ ಪಶ್ಚಾತ್ತಾಪ ಪಡತೊಡಗಿತು.

ವೆಂಕಟ, ನಾರಾಯಣಮೂರ್ತಿಯ ಮನೆಯನ್ನು ಬಿಟ್ಟು ಹೊರಟು ಹೋಗಿ ತಿಂಗಳ ಮೇಲಾಯಿತು. ಅವನು ನಮ್ಮ ಮಗು, ಎಂದೆಂದಿಗೂ ಅವನನ್ನು ನಮ್ಮ ಮನೆಯಲ್ಲೇ ಇರಿಸಿಕೊಳ್ಳಬೇಕು. ವಯಸ್ಸು ಬಂದಾಗ ಒಳ್ಳೆಯ ಹುಡುಗಿಯನ್ನು ನೋಡಿ ಮದುವೆ ಮಾಡಬೇಕು. ಹಣ್ಣು ಹಣ್ಣು ಮುದುಕನಾದಾಗ್ಯೂ ನಮ್ಮ ಮನೆಯಲ್ಲಿರಿಸಿಕೊಂಡು ಆದರ ತೋರಿಸಬೇಕು... ಎಂದೆಲ್ಲಾ ಆಲೋಚಿಸಿಕೊಂಡಿದ್ದ ನಾರಾಯಣಮೂರ್ತಿ ದಂಪತಿಗಳಿಗೆ ಆ ಸಮಯ ವೆಂಕಟ ಅವರ ಮನೆಯಲ್ಲಿದ್ದ ಕಾಲವು ಕನಸಿನಂತಿತ್ತು.

ಆ ಹೊತ್ತು ಹಗಲು ಹನ್ನೆರಡು ಗಂಟೆಯ ಸಮಯ. ಆಡ್ವೋಕೇಟ್ ವಾಸುದೇವರಾಯರ ಮನೆಯ ಆಳು ವೀರ ಬಂದು ಮನೆಯ ಬಾಗಿಲಲ್ಲಿ ನಿಂತು '' ತಾಯೀ, ನಮ್ಮಮ್ಮಾವ್ರು ಬುಕ್ಕು ಕೇಳಿ ಈಸ್ಕೊಂಡು ಬಾಂತ ಹೇಳವ್ರೆ'' ಎಂದ. ಬೀದಿಯ ವರಾಂಡದ ಕುರ್ಚಿಯೊಂದರಲ್ಲಿ ಸಾವಕಾಶವಾಗಿ ಕುಳಿತು ಪತ್ರಿಕೆ ತಿರುವುತ್ತಿದ್ದ ಮಾಲತಿ ಎದ್ದು ಒಳಗೆ ಹೋಗಿ ಅವನು ಕೇಳಿದ ಪುಸ್ತಕ ತಂದುಕೊಟ್ಟಳು. ಆಗ ವೀರ ಕೈ ಕೈ ಹಿಸುಕುತ್ತ ''ತಾಯಿ ಒಂದು ಮಾತು. ವೆಂಕಟನ್ನ ಯಾಕೆ ಓಡಿಸಿಬಿಟ್ರಿ ತಾಯಿ?.. ಎಂದು ಕೇಳಿದ.

“ಅದೆಲ್ಲ ನಿನಗ್ಯಾಕೆ? ನೋಡಿಕೊಂಡು ಹೊರಟು ಹೋಗು”ಎಂದು ಗದರಿಸಿದಳು ಮಾಲತಿ.

“ಇಲ್ಲ ತಾಯಿ, ಅವನು ನಿಮ್ಹತ್ರ ಹೇಳದೇ ಹೋದದ್ದು ಅವನ ತಪ್ಪಲ್ಲ. ಆ ಹೊತ್ತು ಅಂಗಡಿಬೀದೀಲಿ ವೀಳ್ಯ ತರಲು ನಾನು ಹೋದಾಗ್ಗೆ, ಅವನ ಹಳ್ಳೀ ಮನುಷ್ಯ ಒಬ್ಬ ಬಂದು ಅವನ ಸಂಗಡ ಮಾತ್ನಾಡುತ್ತಿದ್ದ. ವೆಂಕಟನ ಅವ್ವನ್ಗೆ ಜೀವ ಹೋಗ್ತಿದೆ. ಅದೇ ಆ ಮುನಿಯನ್ನ ವೆಂಕಟನ ಮಾವ ಕಳಿಸವ್ರೆ. “ಬಾರ್ಲಾ ಎಂಕ್ಟ” ಎಂದು ಕರೆದ ಮುನಿಯ. ಎಂಕ್ಟ “ಇರ್ಲಾ ಒಸಿ ಹೊತ್ತು. ಮನೆಗೆ ಓಡ್ಹೋಗಿ ನಮ್ಮಮ್ಮಾವ್ರಗೆ ತಿಳಿಸಿ ಒಂದೇಟಿಗೆ ಓಡ್ಬರ್ತೀವ್ನಿ” ಅಂದ. “ನಾನು ಹೋಗಿ ನಿಮ್ಮಮ್ಮಾವ್ರಗೆ ತಿಳಸ್ತೀನಿ, ನೀನು ಹೋಗ್ಬಾ” ಎಂದು ನಾನೇ ಎಂಕ್ಟನಿಗೆ ಹೇಳಿ ಕಳಿಸ್ದೆ ತಾಯಿ. ಆಮೇಕೆ ಈ ಇಶಯನ್ನ ನಿಮ್ಮನೇಗೆಬಂದು ಹೇಳೋಕೆ ಮರ್ತೇಬುಟ್ಟೆ! ತಾಯಿ. ಆಮೇಕೆ ಅವನ್ ಅವ್ವ ಸತ್ತುಹೋದ್ಲು. ಕರ್ಮ ತೀರಿಸ್ಕೊಂಡು ಬಂದ ಎಂಕ್ಟ. ನೀವು ಕೆಲ್ಸದಿಂದ ನೀಗ್ಸಿಬಿಟ್ರಿ, ನನ್ ತಾಯೀ! ನನ್ನಿಂದ ಅವನಿಗೆ ಕೆಲ್ಸಾನೂಹೋಯಿತು. ಅವನ ಜೀವಕ್ಕೆ ಬೇಜಾರಾಯ್ತು. ನಾನೆಂಥಾ ಪಾಪಿ ಕಣ್ರವ್ವಾ. ನನ್ಹತ್ರ ಬಂದು ನನ್ನನ್ನು ಚಂದಾಗಿಬೈದು ಗೋಳಿಟ್ಟ. ಹುಡುಗ ಪಾಪ, ‘ಬಾರಣ್ಣ ನಿಮ್ಮಮ್ಮಾವ್ರಿಗೆ ನಾನು ಸಮಾಧಾನ ಹೇಳಿ ಕೆಲಸಕ್ಕೆ ಸೇರಿಸ್ತೀನಿ’ ಅಂದೆ. ನೀವು ಆಟೊಂದು ಬೈದ ಬಳಿಕ ನಿಮ್ಗೆ ತೊಂದ್ರೆ ಕೊಡೋಕ್ಕಿಲ್ಲ ಅಂದ್ಬಿಟ್ಟ. ನನ್ನನ್ನೂ ಹೋಗ್ಬೇಡವೆಂದು ಹಟ ಮಾಡಿ ನಿಲ್ಲಿಸ್ ಬಿಟ್ಟ ಕಣವ್ವಾ. ಈಗಿರೋ ಆಳು ಸಂದಾಗಿ ಕೆಲ್ಸ ಮಾಡ್ತಿವ್ನಾ ತಾಯಿ” ಎಂದು ಕೇಳಿದ ವೀರ.

ಮಾಲತಿಯ ಹೃದಯವನ್ನು ಸಾವಿರ ಚೇಳು ಕುಟುಕಿದಂತಹ ವೇದನೆ ಏರ್ಪಟ್ಟಿತು. ಗದ್ಗದ ಸ್ವರದಲ್ಲಿ “ಈ ಹುಡುಗ ಬಲು ದಡ್ಡ, ಎಲ್ಲರೂ ನಮ್ಮ ವೆಂಕಟನ ಹಾಗೆಯೇ ಕೆಲಸ ಮಾಡುವರೇನು? ಅಯ್ಯೋ ಪಾಪ, ವೆಂಕಟ ಈಗ ಎಲ್ಲಿ ಕೆಲಸ ಮಾಡುತ್ತಿದ್ದಾನೆ? ಬಂಗಾರದಂತಹ ಹುಡುಗ! ಎಲ್ಲಾದರೂ ಸುಖವಾಗಿ ಚಿರಂಜೀವಿಯಾಗಿ ಬಾಳಲಿ” ಎಂದಳು.

‘ನಿಮ್ಮ ಮನೆಯನ್ನು ಬಿಟ್ಮೇಕೆ ಬೇರೊಂದು ಮನೇಲಿ ಕೆಲ್ಸ ಮಾಡಕ್ಕಿಲ್ಲಾಂತ ಶಪಥ ಹೂಡಿಬಿಟ್ಟಾವ್ನೆ ಹುಡ್ಗ. ಕೊಂಚಕಾಲ ರೈಲ್ವೆ ಸ್ಟೇಶನ್‌ನಾಗೆ ಮೂಟೆ ಹೊತ್ತ. ಆಮೇಲೆ ಸೌದೆ ಡಿಪೋನಾಗೆ ಸೌದೆ ಒಡ್ದು ಹೊಟ್ಟೆಹೊರೆದ. ಅಷ್ಟರೊಳಗೆ ದೊಡ್ಡ ಖಾಯಿಲೆ ಮಲಗಿಬಿಟ್ಟಾವ್ನೆ. ಹೋಗಿ ಅಮ್ಮಾವ್ರನ್ನ ಕೇಳಿ ಔಷಧೀಗೆ ಏನಾದರೂ ದುಡ್ಡು ತರ್ಲೇ?’ ಎಂದು ಕೇಳ್ದೆ. ‘ಬೇಡಣ್ಣಾ ದಮ್ಮಯ್ಯಾ’ ಅಂದ್ಬಿಟ್ಟ. ಅವನೀಗ ನಮ್ಮ ತಂಗೀ ಮನೇಲೇ ದುಟ್ಕೊಟ್ಟು ಊಟ ಮಾಡ್ತಾ ಇವ್ನೆ. ಈಗ ಹತ್ತು ಹನ್ನೆರಡು ದಿವ್ಸದಿಂದ ಬಾಳಾ ಖಾಯ್ಲೇ ಮಲಗವ್ನೆ. ಮೈಮೇಕೆ ಜ್ಞಾನಾನೇ ಇಲ್ಲಾ ತಾಯೀ, ಯಾವಾಗ್ಲೂ ‘ನಮ್ಮಮ್ಮಾವ್ರು, ನಮ್ಮ ರಾಯ್ರೂ, ರಾಣೀಮ್ಮಾ...ಕಿಟ್ಟಪ್ಪಾವ್ರೇ...ಬ್ಯಾಡ ತಾಯೀ ಸಿಟ್ಟು ಮಾಡ್ಕೋಬೇಡಿ...’

ಹೀಗೆ ಕನವರಿಸುತ್ತಾ ಇವ್ನೆ. ಯಾರಾದ್ರೂ ಆಗ್ದೋರು ಮದ್ದಿಟ್ಟವ್ರೆ ಅಂತ ಪೂಜೆ ಗೀಜೇ ಮಾಡ್ಸಿದ್ದೂ ಆಯ್ತು. ಏನೂ ಪ್ರಯೋಜನ ಕಾಣ್ಲಿಲ್ಲ ತಾಯೀ..."

ಮಾಲತಿಗಂತೂ ವೇದನೆ ಕರುಳನ್ನು ಕುಯ್ತು.

" ಏನೋ ಯಾರಾದರೂ ಒಳ್ಳೆಯ ಡಾಕ್ಟರನ್ನು ಕರೆಸಿ ತೋರಿಸಬಾರದೆ?"

" ಅವನಿಗೆ ಅಷ್ಟೊಂದು ಅಕ್ಕರೆಯಾಗಿ ವೈದ್ಯ ಮಾಡೋವ್ರು ಯಾರವ್ರೆ ತಾಯಿ? ದುಡ್ಡಿಗೇನ್ಮಾಡೋದು? ಡಾಕ್ಟರು ಫೀಜು ಕೇಳ್ದೇ ಬರ್ತಾರೇನ್ತಾಯಿ, ಅದೂ ಬಡವರ ಮನೇಗೆ, ಈಟೊತ್ತಿಗೆ ಅವನ್ಗತಿ ಏನಾಯ್ತೋ ಕಾಣ್ರವ್ವಾ....."

"ಯಾಕೋ ವೀರ, ಆಗ್ಲೇ ಬಂದು ತಿಳಿಸ್ ಬಾರದಿತ್ತೇ? ಆಸ್ಪತ್ರೆಗಾದ್ರೂ ಕರೆದುಕೊಂಡು ಹೋಗಿ ಬಿಟ್ಟಿದ್ದರೆ ಚೆನ್ನಾಗಿ ನೋಡಿಕೊಳ್ಳುತ್ತಿದ್ದರು. ನಮ್ಮ ರಾಯರಿಗೆ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ದೊಡ್ಡ ದೊಡ್ಡ ಡಾಕ್ಟರೆಲ್ಲರೂ ಚೆನ್ನಾಗಿ ಗೊತ್ತು. ಆಗಲೇ ಬಂದು ಹೇಳದೆ ಹೋದೆಯಲ್ಲೋ ಏನು ಜ್ವರವಂತೆ ವೆಂಕಟನಿಗೆ?"

"ನಿನ್ನೆ ಬಂದೋದ ಡಾಕ್ಟರು 'ಟೈಫಾಯಿಡ್ ' ಜ್ವರ ಅಂದ್ರು ತಾಯಿ"

"ಅಯ್ಯೋ ರಾಮ! ಟೈಫಾಯಿಡ್ ಬಂದಿರೋನ್ನ ಮನೇಲಿಟ್ಟುಕೊಂಡು ನೋಡಿಕೊಳ್ಳೋದಕ್ಕೆ ಆಗತ್ತೇನೋ. ಬೇಗ ನಿಮ್ಮಮ್ಮಾವರಿಗೆ ಹೇಳಿ ಬಾ. ಅಷ್ಟರೊಳಗಾಗಿ ನಮ್ಮ ರಾಯರಿಗೆ ಫೋನ್ ಮಾಡಿ ಕಾರು ತರಿಸುತ್ತೇನೆ. ನೀನು ಬಂದು ನಮ್ಮನ್ನು ನಿನ್ನ ತಂಗಿಯ ಮನೆಗೆ ಕರೆದುಕೊಂಡು ಹೋಗು"ಎಂದು ಓಡಿಹೋಗಿ ಟೆಲಿಫೋನನ್ನು ಕೈಗೆ ತೆಗೆದುಕೊಂಡಳು ಮಾಲತಿ.

ನಾರಾಯಣಮೂರ್ತಿಯೂ ಸಹ ಹದಿನೈದು ನಿಮಿಷಗಳೊಳಗಾಗಿಯೇ ಕಾರು ಹತ್ತಿ ಮನೆಯನ್ನು ತಲುಪಿದ. ಅಷ್ಟರೊಳಗಾಗಿ ವೀರನೂ ಸಹ ರಜ ಪಡೆದು ಹಿಂದಿರುಗಿ ಬಂದ. ಮೂವರೂ ಕಾರು ಹತ್ತಿ ವೆಂಕಟನು ಖಾಯಿಲೆ ಮಲಗಿರುವ ಮನೆಯ ಕಡೆಗೆ ಹೊರಟರು. ದಾರಿಯುದ್ದಕ್ಕೂ ಮಾಲತಿ ಹುಳುವಿನಂತೆ ಪರಿತಪಿಸುತ್ತಿದ್ದಳು.

"ಆ ಜೀವ ನಮಗೆ ಅದೆಷ್ಟೊಂದು ದುಡಿದಿದೆ. ನಾವು ಹೋಗಿ ನೋಡುವುದರೊಳಗೆ ಪ್ರಾಣ ಹಾರಿಹೋಗಿದ್ದರೆ ಏನು ಗತಿ! ಪರಮಾತ್ಮ ದಯಾಮಯ. ನಮ್ಮ ವೆಂಕಟನನ್ನು ಕಾಪಾಡಪ್ಪ. ಆ ಬಡ ಜೀವಿಗೆ ನಮ್ಮ ಕೈಲಾದ ಸಹಾಯ ನೀಡಲು ನಮಗೆ ಅವಕಾಶ ಕೊಡಪ್ಪಾ..."ಎಂದೆಲ್ಲಾ ಹಲುಬಿದಳು ಮಾಲತಿ.

ಇವರುಗಳು ವೆಂಕಟನು ಖಾಯಿಲೆ ಮಲಗಿದ್ದ ಮನೆಯನ್ನು ತಲುಪಿದಾಗ ಅವನ ದೇಹ ಸ್ಥಿತಿ ಬಹಳ ಚಿಂತೆಗೀಡಾಗಿತ್ತು. ಆ ದಂಪತಿಗಳನ್ನು ಕಂಡೊಡನೆಯೇ ಪಾರ್ವತಿ-ಪರಮೇಶ್ವರರನ್ನು ಕಂಡಂತೆ ಹಿಗ್ಗಿದ ವೆಂಕಟ. ಮಾತನಾಡಲು ಪ್ರಯತ್ನಿಸಿದರೂ ಬಾಯಿಂದ ಮಾತು ಹೊರಡದಾಯಿತು. ಇದೇ ತಾನೇ ಹಗಲು ಹನ್ನೆರಡು ಗಂಟೆಯ

ಸಮಯಕ್ಕೆ ಅವನಿಗೆ ಜ್ಞಾನ ತಿರುಗಿದೆ ಎಂದೂ, ಆದರೆ ಮಾತನಾಡಲು ನಾಲಿಗೆ ತಿರುಗಲಿಲ್ಲವೆಂದೂ ಅಂದಳು ವೀರನ ತಂಗಿ ಚೆನ್ನಿ. ನಾರಾಯಣಮೂರ್ತಿಯು ವಾತ್ಸಲ್ಯದೊಡನೆ ವೆಂಕಟನ ಹಣೆ ಸವರಿದನು. ಹಣೆ ಕೆಂಡದಂತೆ ಸುಡುತ್ತಿತ್ತು. ಆ ಕ್ಷಣವೇ ತನ್ನ ಖಾಯಿಲೆಯೆಲ್ಲ ವಾಸಿಯಾದಂತೆ ಭಾಸವಾಯಿತು. ವೆಂಕಟನಿಗೆ ಮಾಲತಿಯನ್ನು ಕಂಡು ಅದೇನೋ ಹೇಳಲು ಯತ್ನಿಸಿದ. ಆದರೆ ಮಾತನಾಡಲಾರದೆ ಕಣ್ಣೀರಿಟ್ಟ ಬಡಪಾಯಿ. ಇದನ್ನು ಕಾಣಲು ಸಹಿಸಲಾರದೆ ಕೊಠಡಿಯಿಂದ ಹೊರಗೆ ಬಂದುಬಿಟ್ಟಳು ಮಾಲತಿ. ಉಕ್ಕಿಬಂದ ಅಳುವನ್ನು ತಡೆಯಲಾಗಲಿಲ್ಲ ಅವಳಿಗೆ, ಬಿಕ್ಕಿ ಬಿಕ್ಕಿ ಅತ್ತಳು. ಅವನಿಗಾಗಿ ಅವಳು ಹರಸಿಕೊಂಡ ಹರಕೆಗಳೆಷ್ಟೋ!

ನಾರಾಯಣಮೂರ್ತಿ ವಿಕ್ಟೋರಿಯಾ ಆಸ್ಪತ್ರೆಗೆ ಹೋಗಿ ಡಾಕ್ಟರುಗಳನ್ನು ಕಂಡು ಮಾತನಾಡಿ ವೆಂಕಟನಿಗೊಂದು ಹಾಸಿಗೆ 'ರಿಸರ್ವ್'ಮಾಡಿಸಿದನು. ಬಳಿಕ ಮುನಿಸಿಪಲ್ ಆಫೀಸಿಗೆ 'ಫೋನ್ ಮಾಡಿ ಅಮ್‌ಬುಲೆನ್ಸ್, ಗಾಡಿ ತರಿಸಿ ವೆಂಕಟನ ಮನೆಗೆ ಹೋಗಿ, ಅವನನ್ನು ಕರೆತಂದು ಆಸ್ಪತ್ರೆಯಲ್ಲಿ ಅಡ್ಮಿಟ್' ಮಾಡಿದನು.

ವೆಂಕಟನನ್ನು ಆಸ್ಪತ್ರೆಗೆ ಕರೆತಂದು ಒಂದು ವಾರಕಾಲ ಅವನ ದೇಹ ಸ್ಥಿತಿ ಬಹಳ ಮೋಸವಾಗಿಯೇ ಇತ್ತು. ಡಾಕ್ಟರುಗಳು ಅವನು ಬದುಕುವುದು ಶ್ರಮವೆಂದೇ ಹೇಳಿ ಬಿಟ್ಟರು. ಅವನ ವೈದ್ಯಕ್ಕಾಗಿ ಎಷ್ಟು ಖರ್ಚಾದರೂ ನಾನು ವಹಿಸಿಕೊಳ್ಳುವುದಾಗಿಯೂ ದಯವಿಟ್ಟು ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳಬೇಕೆಂದೂ ನಾರಾಯಣಮೂರ್ತಿ ಡಾಕ್ಟರುಗಳಿಗೆ ತಿಳಿಸಿದ್ದನು. ಮಾಲತಿ ತನ್ನ ಗಂಡನ ದಯಾಳು ಗುಣವನ್ನು ಕಂಡು ಹಿರಿ ಹಿರಿ ಹಿಗ್ಗಿದಳು.

ದಿನವಹಿ ಆಫೀಸಿನಿಂದ ಹಿಂದಿರುಗುವಾಗ ನಾರಾಯಣಮೂರ್ತಿ ಮೊದಲು ಆಸ್ಪತ್ರೆಗೆ ಹೋಗಿ ವೆಂಕಟನನ್ನು ಕಂಡು ವಿಚಾರಿಸಿ ಧೈರ್ಯ ಹೇಳುವನು. ಬಳಿಕ ಡಾಕ್ಟರುಗಳನ್ನು ಕಂಡು ಮಾತನಾಡಿ ರೋಗಿಗೆ ಬೇಕಾದ ಗ್ಲೂಕೋಸ್, 'ಹಾರ್ಲಿಕ್ಸ್ '. ಔಷಧಿ...ಇತ್ಯಾದಿ ಏನೇನು ಬೇಕೆಂಬುದನ್ನು ಕೇಳಿ ತಿಳಿದು ಆಗಿಂದಾಗ್ಗೆ ಕೊಂಡು ತಂದು ಒದಗಿಸುವನು.

ಮಾಲತಿಯೂ ಸಹ ಎರಡು ದಿನಕ್ಕೊಂದು ಸಲ ಬಂದು ವೆಂಕಟನನ್ನು ಕಂಡು ಮಾತನಾಡಿಸಿ, ಹುರುಪೂಡಿಸಿ ಹೋಗುವಳು. ಬರುವಾಗ ಬುಟ್ಟಿತುಂಬ ಕಿತ್ತಳೆಯ ಹಣ್ಣು ಗಳನ್ನು ತಂದುಕೊಟ್ಟು, ದಾದಿಯ ಹತ್ತಿರ ವೆಂಕಟನಿಗೆ ರಸ ಹಿಂಡಿಕೊಡಲು ಹೇಳಿ ಹೋಗುವಳು. ಡಾಕ್ಟರುಗಳ ಔಷಧಿ ಉಪಚಾರಗಳಿಗಿಂತ, ತನ್ನ ಯಜಮಾನಿ, ಯಜಮಾನರ ಪ್ರೀತಿ ವಾತ್ಸಲ್ಯದ ಮಹಿಮೆಯಿಂದ ವೆಂಕಟನ ಮೈ ಗುಣವಾಗುತ್ತಾಬಂತು.

ದೇವರು ದಯಾಮಯ! ಬಡ ವೆಂಕಟ ಬದುಕಿದ. ಇನ್ನು ಅವನಿಗೆ ಯಾವ ಕೊರತೆಯೂ ಇಲ್ಲ. ತನ್ನ ಯಜಮಾನಿ ಯಜಮಾನರ ವಾತ್ಸಲ್ಯಕ್ಕಿಂತ ಮಿಗಿಲಾದ ಆನಂದವಾವುದೂ ಇಲ್ಲ ಅವನಿಗೆ.

# ತುಂಬುಜೀವನ

*ಜಯಲಕ್ಷ್ಮೀ ಶ್ರೀನಿವಾಸನ್*

ಮಕ್ಕಳನ್ನು ಪಾಠಶಾಲೆಗೆ ಕಳುಹಿಸಿ ಬೀದಿಯ ಬಾಗಿಲು ಮುಚ್ಚಿ ಬಂದಳು ವಂದನಾ. ಇನ್ನು ಪತಿದೇವರ ಊಟವಾಗಬೇಕು. ಆ ಬಳಿಕ ತಾನು ಪೂಜೆ ಮುಗಿಸಿ, ತಾನು ಊಟಕ್ಕೆ ಕೂರಬೇಕು. ಸಾಕಪ್ಪಾ, ಈ ಸಂಸಾರ ತಾಪತ್ರಯ. ಉಸ್ ಅಪ್ಪಾ' ಎಂದು ಒಂದು ಘಳಿಗೆ ನೆಮ್ಮದಿಯಾಗಿ ಕುಳಿತುಕೊಳ್ಳಲು ಅವಳಿಗೆ ಸಮಯವೆಲ್ಲಿ?

ಇಬ್ಬರ ಊಟ ಮುಗಿದು ಎಲೆ ಅಡಿಕೆ ಹಿಡಿದು ಬಂದಾಗ ರಘುಪತಿ "ಇನ್ನು ಆಫೀಸಿಗೆ ಹೋಗುವ ಯೋಚನೆ ಮಾಡಬೇಕು" ಎಂದು ಮಾತಿಗೆ ಪ್ರಾರಂಭಿಸಿದನು.

ವಂದನಾ ಕುರ್ಚಿಯಲ್ಲಿ ಕುಳಿತು ಸುಧಾರಿಸಿಕೊಳ್ಳುತ್ತಾ "ಯಾಕೆ ಇಷ್ಟು ಅವಸರ? ಜ್ವರ ಬಿಟ್ಟು ವಾರವಾಗಲಿಲ್ಲ"

"ಈಗಾಗಲೇ ಫೈಲುಗಳು ರಾಶಿರಾಶಿ ಸೇರಿರುತ್ತವೆ. ನಾನು ಹೋಗುವುದು ಇನ್ನೂ ನಿಧಾನವಾದರೆ ಮತ್ತಷ್ಟು ಸೇರಿಹೋಗುತ್ತಷ್ಟೆ"

"ಇನ್ನೂ ನಾಲ್ಕು ದಿನಗಳು ರಜೆ ಬಾಕಿಯಿದೆ. ಈ ನಾಲ್ಕು ದಿನಗಳನ್ನೂ ಆರಾಮವಾಗಿ ಕಳೆಯಿರಿ"

"ನಾನು ಆರಾಮದಿಂದಿರುವುದು ಇರಲಿ ನನಗೀಗ ಆಯಾಸವೇನೂ ಇಲ್ಲ. ನಿನಗೇ ಈಗ 'ಪೆರ್ ಫೆಕ್ಟ್ ರೆಸ್ಟ್ '(Perfect rest) ಬೇಕು. ನನಗೊಂದು ಹೊಸ ಯೋಚನೆಯೊಂದು ಹೊಳೆದಿದೆ.

"ಅದೇನದು?"

"ನಿನ್ನ ಗೆಳತಿ ಡಾಕ್ಟರ್ ?"

"ರಾಧಿಕಾ..."

"ನಿನ್ನನ್ನು ಬಹಳ ದಿನದಿಂದ ಮದರಾಸಿಗೆ ಕರೆಯುತ್ತಾಳಲ್ಲಾ. ಅವಳ ಮನೆಗೆ ಹೋಗಿ ನಾಲ್ಕುದಿನಗಳು ಆರಾಮವಾಗಿ ಇದ್ದು ಬಾ"

"ಇದೇನ್ರೀ ಇದು!" "ನಾನು ಹೊರಟು ಹೋದರೆ, ನಿಮಗೆ ಇಲ್ಲಿ ಅಡಿಗೆ ಮಾಡಿ

ಬಡಿಸುವವರಾರು? ಮಕ್ಕಳನ್ನು ಸುಧಾರಿಸುವವರಾರು? ನೀವಂತೂ ಖಾಯಿಲೆಯಿಂದ ಎದ್ದು ಇದೇ ತಾನೇ ಚೇತರಿಸಿಕೊಳ್ಳುತ್ತಿರುವಿರಿ..."

ರಘು "ಈ ಚಿಂತೆಯೆಲ್ಲ ನಿನಗೆ ಬೇಡ. ಸುಬ್ಬಯ್ಯನ ಹೋಟೇಲಿನಿಂದ ಊಟ ತರಿಸಿಕೊಳ್ಳುತ್ತೇನೆ. ಹಾಲು ಕಾಯಿಸಿ ಕಾಫೀ ತಯಾರಿಸಿ... ಈ ಎಲ್ಲ ಕೆಲಸಗಳೂ ನನ್ನ ಪಾಲಿಗಿರಲಿ. ಟಿಫನಿಗಂತೂ ಐಯ್ಯಂಗಾರ್ ಬೇಕರಿಯ ಬ್ರೆಡ್ ಬನ್ , ಬಿಸ್ಕತ್ ... ಇದ್ದೇ ಇವೆ. ಇವು ಮಕ್ಕಳಿಗೂ ಬಹಳ ಇಷ್ಟ. ನಾಲ್ಕುದಿನ ಹೋಗಿ ಬಾ ಎಂದು ಬಹಳ ಹಿತವಾಗಿ ಹೇಳಿದನು.

"ನನ್ನನು ತಮಾಷೆ ಮಾಡುವಿರಾ?"

"ಇಲ್ಲ ಚಿನ್ನ, ನಿಜವಾಗಿಯೂ ಹೇಳುತ್ತಿದ್ದೇನೆ, ನೀನು ಹೋಗಿ ಬಾ"

"ಸಂಗೀತಾಳನ್ನಾದರೂ ಜೊತೆಗೆ ಕರೆದುಕೊಂಡು ಹೋಗ್ತೀನಿ."

"ಯಾರೂ ಬೇಡ ವಂದನಾ. ಎಲ್ಲರನ್ನೂ ನಾನು ನೋಡಿಕೊಳ್ಳುತ್ತೇನೆ. ನಿನಗೆ ತುಂಬಾ ವಿಶ್ರಾಂತಿಯೂ ಬದಲಾವಣೆಯೂ ಬೇಕು. ನಾಲ್ಕುದಿನ ಸುಧಾರಿಸಿಕೊಂಡು ಬಾ"

ಪತಿಯ ಸೂಚನೆ ಮನೆಯ ಯಾಂತ್ರಿಕ ಜೀವನದಿಂದ ಬೇಸತ್ತಿದ್ದ ವಂದನಾಗೂ ಹಿತವೆನಿಸಿತು.

ವಂದನಾ ಮರುದಿನ ಮಧ್ಯಾಹ್ನದ ಬೃಂದಾವನ್ ಎಕ್ಸ್‌ಪ್ರೆಸ್‌ನಲ್ಲಿ ಮದರಾಸಿಗೆ ಪಯಣ ಬೆಳೆಸಿದಳು. ಅವಳ ಬಹು ದಿನಗಳ ಬಯಕೆ ಇದೀಗ ಈಡೇರಿತು. ಪ್ರಯಾಣ ಮಾಡುತ್ತಿದ್ದಂತೆಯೇ ತನ್ನ ಪತಿಯ ಹಿರಿಯ ಗುಣಕ್ಕಾಗಿ ಮನಸಾರೆ ಅವನನ್ನು ಮೆಚ್ಚಿ ಧನ್ಯವಾದ ನುಡಿದಳು. ಕಾಲೇಜು ದಿನಗಳ ಸವಿನೆನಪುಗಳಂತೂ ಮಿಂಚಿನಂತೆ ಮಿನಿಗುಟ್ಟಿದವು. ವಂದನಾ ರಾಧಿಕಾಗಿಂತ ಚೆಲುವೆ. ಗಳಿಗೆ ಗಳಿಗೆಗೂ ಗಾಜಿನ ಬಟ್ಟಲು ಒಡೆಯುವಂತೆ ಕಿಲಕಿಲನೆ ನಗುತ್ತಾ ಚೂಟಿಯಾಗಿ ಓಡಿಯಾಡುತ್ತಿದ್ದ ಆ ಸೌಂದರ್ಯ ರಾಣಿ ಎಲ್ಲರಿಗೂ ಅಚ್ಚುಮೆಚ್ಚು. ಹೂವೂ ಮುಗುಳೂ ತುಂಬಿದ ವಸಂತದಕಾಲದ ಪುಷ್ಪಿತ ಗಿಡದಂತಿದ್ದಳು. ಇದೀಗ ಬತ್ತಿದ ದೇಹ, ಜೋಲು ಕೆನ್ನೆ, ಸುಕ್ಕಿದ ಮುಖ, ಇಂಗಿದ ಕಣ್ಣುಗಳುಳ್ಳ ಮೂರು ಮಕ್ಕಳ ತಾಯಿ. ವಂದನಾಳನ್ನು ರಾಧಿಕಾ ಕಂಡರೆ ಗುರುತು ಹಿಡಿಯಬಲ್ಲಳೆ? ರಾಧಿಕಾಳಂತೂ ಇನ್ನೂ ವಿವಾಹವಾಗದ ರಮಣಿ. ಹರೆಯದ ಹುಡುಗಿಯಂತಿರಬಹುದು. ತನ್ನಂತೆ ಅವಳಿಗೆ ಸಂಸಾರದ ನೂರೆಂಟು ತಾಪತ್ರಯಗಳೇನೂ ಇರಲಾರವು. ಹಾಯಾಗಿ ರಾಣಿಯಂತಿದ್ದಾಳೆ. ಕೈತುಂಬ ಸಂಬಳ, ಕೈಗೊಂದು ಕಾಲಿಗೊಂದು ಆಳುಗಳು. ತನ್ನಂತೆ ಅವಳು ಮನೆ, ಮಠ, ಗಂಡ, ಮಕ್ಕಳು, ಖಾಯಿಲೆ ಕಸಾಲೆಯೆಂದು ಒಂದಿಲ್ಲೊಂದು ಕಷ್ಟ ಅನುಭವಿಸಬೇಕಿಲ್ಲ. ಆಸ್ಪತ್ರೆ ಡ್ಯೂಟಿ ಮುಗಿದು ಮನೆಗೆ ಬಂದಳೆಂದರೆ ತಾನೇ ತನ್ನ ಮನೆಗೆ ರಾಣಿ, ರಾಜ ಎಲ್ಲ! ಅವಳಿಗೆ ಇನ್ನೆಂತಹ ನೆಂಟರೂ

ಇಲ್ಲ..." ಈ ರೀತಿ ವಂದನೆಯ ಯೋಚನೆ ಓಡಿತು. ಕೈಯಲ್ಲಿ ಹಿಡಿದಿದ್ದ ಪುಸ್ತಕದ ಮೇಲೂ ಅವಳ ಗಮನ ಹರಿಯಲಿಲ್ಲ. ಚಿಂತನಾರಂಗದಲ್ಲಿ ಹೊತ್ತು ಹೋದುದೇ ತಿಳಿಯಲಿಲ್ಲ.

ಸಂಜೆಯ ವೇಳೆಗೆ ರೈಲುಗಾಡಿಯು ಮದರಾಸು ತಲುಪಿತು. ಡಾಕ್ಟರ್ ರಾಧಿಕಾ ಸ್ಟೇಶನ್‌ಗೆ ಬಂದಿದ್ದಳು. "ಬಾ ವಂದನಾ!" ಎಂದೆನ್ನುತ್ತ ಗೆಳತಿಯನ್ನು ಆದರದಿಂದ ಕೈಹಿಡಿದು ಗಾಡಿಯಿಂದ ಇಳಿಸಿಕೊಂಡಳು. ಗೆಳತಿಯರಿಬ್ಬರೂ ಪರಸ್ಪರ ಯೋಗಕ್ಷೇಮಗಳನ್ನು ವಿಚಾರಿಸಿಕೊಂಡ ನಂತರ ಡಾ. ರಾಧಿಕಾ ತನ್ನ ಕಾರಲ್ಲಿ ವಂದನೆಯನ್ನು ಕುಳ್ಳಿರಿಸಿಕೊಂಡು 'ಕೋಡಂ ಬಾಕ್ಕಂ' ವಿಸ್ತರಣದಲ್ಲಿರುವ ತನ್ನ ಮನೆಗೆ ಕರೆದೊಯ್ದಳು. ರಾಧಿಕಾ ವಂದನೆಯರು ಕಾರಿಂದ ಇಳಿದು ಬಂದು ಮನೆಯ ಡ್ರಾಯಿಂಗ್ ರೂಮಲ್ಲಿ ಕುಳಿತರು. ಅವರಿಬ್ಬರ ಮಾತುಕತೆ ರಾತ್ರಿಯಾದರೂ ಮುಗಿಯದು ಮಾತಿನ ನಡುವೆಯೇ ತಿಂಡಿ, ಕಾಫಿ, ಊಟ ಉಪಚಾರಗಳೂ ಮುಗಿದವು.

ಎಲ್ಲ ಸರಿ, ವಂದನಾ ಅಂದುಕೊಂಡಿದ್ದಂತೆ ರಾಧಿಕಾ ಆರಾಮ ಜೀವನ ನಡೆಸುತ್ತಿದ್ದಳು... ಆದರೆ ... ಅವಳ ಕಣ್ಣುಗಳಲ್ಲಿ ಕಾಲೇಜು ದಿನದ ಆ ಹೊಳಪಿಲ್ಲ. ಅವಳ ತುಟಿಗಳಲ್ಲಿ ಆ ಹುರುಪಿನ ತುಂಟಾಟಿಕೆಯ ನಗುವಿಲ್ಲ. ಮಾವಿನ ಹಣ್ಣುಗಳಂತೆ ಅವಳ ಚೆಲುವಾದ ಹುಬ್ಬುಗೆನ್ನೆಗಳಲ್ಲಿ ಈಗ ಆ ರಂಗಿಲ್ಲ. ಕಣ್ಣುಗಳ ಕೆಳಗೆ-ಅದೇನದು? ಆ ಕಪ್ಪು ಛಾಯೆ? ಕಾಡಿಗೆಯಂತೂ ಹಚ್ಚಿಕೊಂಡಿಲ್ಲವಲ್ಲ...ಹಾಂ... ಅದು ಆಯಾಸದ ವಯಸ್ಸಿನ ಕಪ್ಪು ಗುರುತು. ಹೌದು... ಹೌದು, ಅವಳಿಗೆ ಬದುಕಿನಲ್ಲಿ ಆಸಕ್ತಿ ಇಲ್ಲ... ಆಕೆ ನಿರ್ಲಿಪ್ತೆ...!

ಪಾಪ ರಾಧಿಕಾ, ಈ ಏಕಾಂತ ಜೀವನದಲ್ಲಿ ಬೇಸತ್ತಿದ್ದಾಳೆ. ತನಗಿಂತ ಬೇಗ ಅವಳನ್ನು ಮುಪ್ಪು ಸಮೀಪಿಸುತ್ತಿದೆ. 'ಪಾಪ ರಾಧಿಕಾ ಅವಳಲ್ಲಿ ತಾನು ಅಸೂಯೆಗೊಂಡದ್ದು ಶುದ್ಧ ತಪ್ಪು ಎಂದರಿವಾಯಿತು' ವಂದನಾಗೆ.

ರಾಧಿಕಾ ಮನೆಯಲ್ಲಿದ್ದು ಆ ನಾಲ್ಕುದಿನಗಳೂ ಅವಳು ವಂದನೆಗೆ ರಾಜೋಪಚಾರ ಮಾಡಿದಳು. ಆ ನಾಲ್ಕು ದಿನಗಳೂ ತಾನೂ ಆಸ್ಪತ್ರೆಗೆ ರಜಬರೆದು ಹಾಕಿ ವಂದನೆಯ ಜೊತೆಯಲ್ಲೇ ಇದ್ದಳು. ಇಬ್ಬರೂ ಹಗಲಿರುಳೂ ಮಾತನಾಡಿದ್ದೇ. ತಮ್ಮ ಗತಕಾಲದ ಸವಿನೆನಪುಗಳನ್ನು ಪರಸ್ಪರ ಹೇಳಿ ತಣಿದರು. ರಾಧಿಕಾ ತನ್ನ ಒಡವೆ, ವಸ್ತು, ಅಮೂಲ್ಯವಾದಂತಹ ಸೀರೆಗಳು ಎಲ್ಲವನ್ನೂ ಗೆಳತಿಗೆ ತೋರಿಸಿದಳು. ಆದರೆ ಅವಳ ಒಣನಗುವಲ್ಲಿ ಅವಳಿಗೆ ಎಂತಹುದೋ ಕೊರತೆಯುಂಟೆಂಬುದನ್ನು ವಂದನಾ ಅರಿತಳು. ಬಾಯ್ಬಿಟ್ಟು ಕೇಳಿ ತಿಳಿಯುವ ಧೈರ್ಯವಂತೂ ವಂದನಾಗೆ ಇಲ್ಲ.

ಆ ಹೊತ್ತು ಮಧ್ಯಾಹ್ನ ಗೆಳತಿಯರಿಬ್ಬರೂ ಅದೇ ತಾನೇ ಅಡ್ಯೆಯಾರ್ ಕಲಾಕ್ಷೇತ್ರದಿಂದ ಬಂದವರು ಊಟ ಮುಗಿಸಿ ಹಜಾರಕ್ಕೆ ಬಂದರು. ಟಪಾಲು ಬಂತು. ವಂದನಾ ನಿನಗೆ ವಾರೆಂಟ್ ! ನಿನ್ನ ಡಾರ್ಲಿಗ್ ನಿನ್ನನ್ನಿನ್ನೂ ಬಿಟ್ಟಿರಲಾರರು ಎಂದು ತಮಾಷೆ ಮಾಡುತ್ತ

ಲಕೋಟೆಯನ್ನು ವಂದನೆಯ ಕೈಗೆ ಕೊಟ್ಟಳು ರಾಧಿಕಾ.

"ಹೋಗೆ, ರಾಧೀ, ನಿನಗೆ ಯಾವಾಗಲೂ ನನ್ನನ್ನು ಗೋಳೊಯ್ಯೋಬೇಕು" ಎಂದಂದು ಲಕೋಟೆಯನ್ನೂ ಒಡೆದು ಗಟ್ಟಿಯಾಗಿಯೇ ಓದಿದಳು.

ಪ್ರಿಯ ವಂದನಾ

ಮಕ್ಕಳೆಲ್ಲರೂ ಸೌಮ್ಯವಾಗಿದ್ದಾರೆ. ಆದರೆ ನಾನು ಅವರನ್ನು ಎಷ್ಟೇ ಚೆನ್ನಾಗಿ ನೋಡಿಕೊಂಡರೂ ನಿನ್ನ ಬರುವಿಕೆಗಾಗಿ ಕಾದಿದ್ದಾರೆ! ಅಮ್ಮ ಯಾವಾಗ ಬರುತ್ತಾಳೆ? ಥೂ ನನಗೆ ಚಾಕಲೇಟ್ ಬೇಡ. ಅಮ್ಮಾನೆ ಬೇಕು ಹೀಗೆ ನನ್ನನ್ನು ಕಾಡಿಸುತ್ತಿದ್ದಾರೆ. ಅವರನ್ನೇಕೆ ಹೇಳಲಿ? ನನಗೂ ನೀನು ಈಗಲೇ ಬಂದರೆ ಚೆನ್ನ. ಬುಧವಾರ ಮಧ್ಯಾಹ್ನ ರೈಲ್ವೆ ಸ್ಟೇಶನ್ ನಲ್ಲಿ ನಾವೆಲ್ಲರೂ ಕಾದಿರುತ್ತೇವೆ. ನೀನು ಖಂಡಿತ ಆ ಗಾಡಿಯಲ್ಲಿ ಬಂದುಬಿಡು,

ಇಂತಿ ನಿನ್ನ.... ರಘು

"ವಂದನೆಯ ಮುಖ ಆನಂದದಿಂದಲೂ ನಾಚಿಕೆಯಿಂದಲೂ ಕೆಂಪೇರಿತು. ಮಳೆಗಾಲದ ಹೂದೋಟದ ಸೊಬಗಿನಂತೆ ಅವಳ ಮುಖ ಕಳಕಳಿಯಾಗಿ ಲಾವಣ್ಯವನ್ನು ಹೊರಚೆಲ್ಲಿತು. ರಾಧಿಕಾ ಆ ಮನೋಹರ ದೃಶ್ಯವನ್ನು ಕಂಡು ಬೆರಗಾದಳು.

ವಂದನಾ! ನೀನೇ ಧನ್ಯೆ, ನಾನು ಕೇಳುತ್ತಿದ್ದೇನೆ. ಈ ನಾಲ್ಕು ದಿನಗಳಿಂದ ನಿನ್ನ ಕೌಟುಂಬಿಕ ಬಾಳ್ವೆಯಲ್ಲಿ ಬಹಳ ಶ್ರಮ ಪಡುತ್ತಿರುವುದಾಗಿ ಗೋಳಾಡುತ್ತಿದ್ದೀ! ಶ್ರಮವಂತೆ ಏತರ ಶ್ರಮ ಇದು? ಮುದ್ದು ಮಕ್ಕಳು! ನಿನ್ನಲ್ಲಿ ಪ್ರಾಣವಿಟ್ಟಿರುವ ಪತಿ! ಇದಕ್ಕಿಂತ ಹೆಚ್ಚಿನ ಸುಖ ಈ ಲೋಕದಲ್ಲಿ ಬೇರೇನಿದೆ?...ವಂದನಾ ನೀನೇ ಸುಖಿ! ನೀನೇ ಧನ್ಯೇ. ನಮ್ಮ ಆಪ್ತರಿಗೆ ಮಾಡುವ ಕೆಲಸಕಾರ್ಯಗಳು ದುಡಿತವೇನೇ ಪೆದ್ದೀ" ಎಂದು ಗೆಳತಿಯನ್ನು ಮುದ್ದಾಗಿ ಖಂಡಿಸಿದಳು ರಾಧಿಕಾ.

"ವಂದನಾ! ನಾನು ;ಮೋಸ ಹೋದೆ ಕಣೇ. ಸ್ವತಂತ್ರ ಜೀವನವೇ ಸುಖಮಯವೆಂದುಕೊಂಡಿದ್ದೆ. ಅದು ತಪ್ಪು, ಈಗ ನೋಡು ನನಗೆ ಯಾರಿದ್ದಾರೆ? ನಾಳೆ ನೀನು ಬೆಂಗಳೂರಿಗೆ ಹೊರಟು ಹೋಗುತ್ತಿ, ನನ್ನನ್ನು ಕೇಳುವವರಾರು? ನಾನು ಒಂಟೀ, ಒಂಟೀ ನಿನ್ನದೇ ತುಂಬು ಜೀವನ. ರಾಧಿಕಾಳ ಕಂಠ ದುಖಃದಿಂದ ಬಿಗಿಯಿತು. ಮುಂದೆ ಮಾತನಾಡಲಾರದಾದಳು, ರಾಧಿಕಾಳ ಒಣನಗುವಿನ ಕಾರಣವನ್ನು ಈಗಾಗಲೇ ವಂದನಾ ಇತ್ಯರ್ಥ ಮಾಡಿಕೊಂಡಿದ್ದಳು. ಗೆಳತಿಯನ್ನು ಹೇಗೆ ಸಂತೈಸಬೇಕೋ ತಿಳಿಯಲಾರದೆ, ಬೆಂಗಳೂರಿನ ರೈಲು ಹತ್ತಿದಳು.

## ಅಭಿವ್ಯಕ್ತಿ: ಇಂದು

ಕನ್ನಡ ಸಾಹಿತ್ಯದಲ್ಲಿ ಮಹಿಳೆಯರ ಅಭಿವ್ಯಕ್ತಿ ಹಲವು ಅಡೆತಡೆಗಳನ್ನೂ, ಸವಾಲುಗಳನ್ನೂ ಎದುರಿಸುತ್ತಿದೆ ಎಂಬುದು ಒಂದು ವಾಸ್ತವವಾದರೆ, ಈ ಸವಾಲುಗಳನ್ನು ಎದುರಿಸುವಲ್ಲಿ ಅವರು ಸಾಕಷ್ಟು ಸಫಲರಾಗುತ್ತಿದ್ದಾರೆ. ತಮ್ಮದೇ ಹಾದಿಗಳನ್ನು ಕಂಡುಕೊಳ್ಳುವ ಸಾಮರ್ಥ್ಯಗಳನ್ನು ಪ್ರಕಟಿಸುತ್ತಿದ್ದಾರೆ ಎಂಬುದು ಈ ವಾಸ್ತವದ ಇನ್ನೊಂದು ಆಶಾದಾಯಕ ಮಗ್ಗುಲು. ಇದರ ಕುರಹವಾಗಿ ಕೆ.ಶರೀಫಾ ಅವರ ಮೂರು ಕವಿತೆಗಳನ್ನೂ, ಎಸ್.ನಾಗವೇಣಿಯವರ ಕತೆಯೊಂದನ್ನೂ ಇಲ್ಲಿ ನೀಡಲಾಗಿದೆ.

(ಸಂ)

# ಮೂರು ಕವಿತೆಗಳು

*ಕೆ. ಶರೀಫಾ, ಹರಿಹರ*

### ೧ ಚಿತೆಯೇರುವ ಪ್ರಶ್ನೆ

ಏಳೇಳು ಜನುಮದಲಿ
ನನ್ನನೇ ಸತಿಯಾಗಿ
ಪಡೆಯುವ ವಾಗ್ದಾನವನು
ಅಂದು ನೀನು ಮಾಡಿದ್ದೆ
ಸಪ್ತಪದಿ ತುಳಿಯುವಾಗ
ಇಂದೇಕೆ ಕೇಳುತ್ತಿರುವೆ
ನಾನು ಸತ್ತರೆ ನೀನು
ನನ್ನೊಂದಿಗೆ ಚಿತೆ ಏರುವೆಯಾ?
ಸತಿ ಹೋಗುವೆಯೊ? ಎಂದು.
ಆಗ ನಾನು ಕೇಳಿದೆ "ನೀನಿನ್ನೂ
ನನ್ನ ಕಣ್ಮುಂದೆಯೇ ನಿಂತಿರುವೆ
ಜೀವಂತ ಉಸಿರಾಗುತ್ತಿರುವೆ
ಮೊದಲೊಮ್ಮೆ ನೀನು ನನಗಾಗಿ
ಸತ್ತಾದರೂ ತೋರಿಸು
ಆಮೇಲೆ ಬರುವುದು
ನಾ ಚಿತೆಯೇರುವ ಪ್ರಶ್ನೆ.

## ೨ ಹೊಕ್ಕಳು-ಹುರಿ

ಗರ್ಭದಲ್ಲಿ ಮೂಡಿದ ಬಿಂದುವಿಗೂ
ಹೊತ್ತು ನಿಂತ ತಾಯಿಗೂ
ಹೊಕ್ಕಳು ಹುರಿಯ ಸಂಬಂಧ
ದಿನ ತುಂಬಿದಾಗ ಹೊಕ್ಕಳ ಹುರಿ
ಕತ್ತರಿಸಿದ ಮೇಲೆ ಉಳಿದದ್ದು
ತಾಯಿಯೊಂದಿಗೆ ಕರುಳು ಬಳ್ಳಿಯ
ಹೊಕ್ಕಳು-ಹುರಿಯ ಸಂಬಂಧ
ಕಡಿಯದಿರುವ ಮಾನಸಿಕ ಬಂಧ.

## ೩. ನೆರಳು

ನನ್ನ ಶತೃವನು ನಾನು
ಸಂತೆ, ಪೇಟೆ, ರಸ್ತೆಯಲಿ
ಹುಡುಕಾಡಿದೆ-ಸಿಗಲಿಲ್ಲ.
ನನ್ನ ಜೀವಂತ ಸಮಾಧಿ
ಮಾಡುತ್ತಿರುವ ಕಪ್ಪು ನೆರಳು
ಯಾವುದೆಂದು ಆಕಾಶದಲಿ
ಗಾಳಿಯಲಿ ಹುಡುಕಿದರೂ ಸಿಗಲಿಲ್ಲ.
ದೀಪದ ಬೆಳಕಿಗೆ ಹರಡದಂತೆ ನನ್ನ
ಮುಚ್ಚಿದ ಕೈಗಳು ಯಾವುದೆಂದು
ನೆರಳಿನ ಆರಂಭವನು ಹುಡುಕುತ್ತ
ಮನೆಯ ತೊಲೆ, ಜಂತಿ ಹೆಂಚಿನವರೆಗೂ
ತಡಕಾಡಿದೆ-ಸಿಗಲಿಲ್ಲ.
ಜ್ಞಾನ ಜ್ಯೋತಿಗೆ ಅಡ್ಡವಾದ
ಗ್ಲೋವ್ಸ್ ತೊಟ್ಟಿರುವ
ಉದ್ದನೆಯ ಕಪ್ಪು ನೆರಳು
ನನ್ನ ಮೈ ಮೇಲೆ ಬಿದ್ದು
ಕತ್ತು ಹಿಸುಕುತ್ತಿತ್ತು
ಕೊಸರಾಡಿ ಕೊಡವಿ ನೋಡಿದೆ
ಅದು ನಿನ್ನ ನೆರಳಾಗಿತ್ತು.

# ಸಿರಿ ತೋರಿದ ದಾರಿ

*ನಾಗವೇಣಿ.ಎಚ್*

ಸತ್ಯನಾಪುರದ ಅರಮನೆಯಲ್ಲಿ ಕತ್ತಲು ಕವಿದಂತಾಗಿದೆ. ಎಲ್ಲೂ ಮಾತಿಲ್ಲ-ಕತೆಯಿಲ್ಲ, ನಗುವಿಲ್ಲ ಅಬ್ಬರವಿಲ್ಲ. ಮಾತಿನ ಚಪ್ಪರವೇ ಕವುಚಿ ಬಿದ್ದಿದೆಯೇನೊ?

ಅರಮನೆಯ ಒಡೆಯ, ಸಾವಿರ ಒಕ್ಕಲ ಮಕ್ಕಳ ಕಣ್ಣ ಬೊಂಬೆಯಂತಿದ್ದ ಅಜ್ಜಯ್ಯ ಬೆರ್ಮಆಳ್ವರು ಬೆಪ್ಪು ಹಿಡಿದವರಂತೆ ಚಾವಡಿಯ ತೂಗುಯ್ಯಾಲೆಯಲ್ಲಿ ಕುಳಿತು ಕಣ್ಣೀರ ಮುತ್ತು ಉರುಳಿಸುತ್ತಿದ್ದಾರೆ.

ತನ್ನ ಜೀವದ ಜೀವ, ಭಾಗ್ಯದ ಭಾಗ್ಯ, ಬದುಕಿನ ಬೆಳಕು, ಅಷ್ಟೇ ಮಾತ್ರವಲ್ಲ ಇಡಿಯ ಅರಮನೆಯ ಶಾಂತಿ-ಸಂಭ್ರಮ-ಸಂಪತ್ತಿನ ಬೆಳಕಂತಿದ್ದ ಮೊಮ್ಮಗಳು ಅಕ್ಕರಸು ಸಿರಿಯನ್ನು ಬಸರೂರಿನ ಅರಮನೆಗೆ ಸೊಸೆಯಾಗಿ ಕಳುಹಿಸಿಕೊಡುವ ದಿನ ತೀರಾ ಹತ್ತಿರವಾಗುತ್ತಿದೆ. ಅಜ್ಜಯ್ಯನ ದುಃಖದ ಕಟ್ಟೆ ಒಡೆದಿದೆ. ಅವರ ಅಪಾರವಾದ ವಿವೇಕದ ಮೂಟೆಯನ್ನು ಕ್ಷಣಿಕವಾಗಿ ವಾತ್ಸಲ್ಯದ ಪದರವೊಂದು ಮುಚ್ಚಿಕೊಂಡಿರಬೇಕು! ಸಾಂಪ್ರದಾಯಿಕ ಸಂಸಾರದಲ್ಲಿ ಆಚಾರ-ವಿಚಾರ, ರೀತಿ-ನೀತಿ, ಕಟ್ಟು-ಕಟ್ಟಲೆ-ಕರ್ತವ್ಯಗಳ ಮಿತಿಯಲ್ಲೇ ಮಮತೆ-ಅಂತಃಕರಣದ ಪ್ರವಾಹ ಸರಿಯಬೇಕು ಎನ್ನುವುದು ಅಜ್ಜಯ್ಯನಿಗೆ ತಿಳಿದಿದ್ದರೂ ನಿನ್ನೆ ಮೊನ್ನೆಯಿಂದೇಕೋ ಆ ಮುದಿ ಹೃದಯ ತೀರಾ ಚಡಪಡಿಸುತ್ತಾ ಸ್ವಲ್ಪ ಹೆಚ್ಚೇ ತಲ್ಲಣಗೊಂಡಿದೆ.

ಅಜ್ಜಯ್ಯನ ಪಕ್ಕದಲ್ಲೇ ಕುಳಿತು, ಆ ಪ್ರೀತಿ-ವಾತ್ಸಲ್ಯ ತುಂಬಿದ ಅಂತಃಕರಣದಿಂದ ಉರುಳುತ್ತಿದ್ದ ನೀರಮುತ್ತನ್ನು ಅವುಚಿಕೊಳ್ಳುತ್ತಿದ್ದ ಎಳೆಬಾಲೆ ಸಿರಿ ತನ್ನ ಪ್ರಬುದ್ಧ ಮಾತುಗಳಿಂದ ಅಜ್ಜಯ್ಯನನ್ನು ಪರಿಪರಿಯಾಗಿ ಸಮಾಧಾನಿಸುತ್ತಿದ್ದಾಳೆ. ಆಕೆ ಸತ್ಯಲೋಕದ ಸತ್ಯದ ಮಗಳಾದರೂ ಅಂತಃಕರಣದ ಪ್ರೀತಿಯ ಧಾರೆಗೆ ನಲುಗದವಳೇನಲ್ಲ. ಆದರೂ ಬದುಕಿನ ಅಸ್ಥಿರತೆಯ ಪ್ರತೀಕವಾಗಿಯೇ ಅಜ್ಜಯ್ಯನ ಬದುಕನ್ನು ಹೊಕ್ಕ ಈ ಮೊಮ್ಮಗಳು ತನಗಾಗಿ ನಿರಂತರ ದುಃಖಿಸುತ್ತಿರುವ ಅಂತಃರಂಗವನ್ನು ಸಹಜಸ್ಥಿತಿಗೆ ತರಲು ಕಳೆದ ಭೂತವನ್ನು ನೆನಪಿಸುತ್ತಾ....,

.... ನೆನಪಿಸಿಕೊಳ್ಳಿ ಅಜ್ಜಯ್ಯ...., ಸೊರಗಿ ಬಾಡುತ್ತಾ ಇನ್ನೇನು ನೆಲೆಕಚ್ಚಬೇಕೆಂದಿದ್ದ ನಿಮ್ಮ ಸಂತಾನಬಳ್ಳಿಯನ್ನು ಅರಳಿಸುವುದಕ್ಕೆ ಕುಲಬೆರ್ಮ ದೇವರ (ಕುಲಬ್ರಹ್ಮ)

ವರಪ್ರಸಾದದಿಂದ ಬಂದವಳಲ್ಲವೇ ನಾನು.... ನಿಮ್ಮ ಸಂತಾನ ಬಳ್ಳಿ ಅರಳಬೇಕೇ ಬೇಡವೇ...?

ಮೊಮ್ಮಗಳ ಮಾತಿನ ಬಿಸಿ ಅಜ್ಜಯ್ಯನ ಒಡಲಿಗೆ ನಿಧಾನಕ್ಕೆ ತಟ್ಟುತ್ತಿದ್ದಂತೆ ಅವರು ಮರಳಿ ಸತ್ಯನಾಪುರದ ಅರಮನೆಯ 'ಒಡೆಯ'ರಾಗತೊಡಗಿದರು. 'ಹೌದು ಈ ಸತ್ಯದ ಅರಮನೆಯ ಧರ್ಮದ ಬೆಳಕು ಎಂದೂ ನಂದಬಾರದು. ನ್ಯಾಯದ ಬದುಕು ಎಂದೂ ಇಂಗಬಾರದು. ಅರಮನೆಯ ಧರ್ಮ ಮತ್ತು ಕರ್ಮದ ಆನೆಬಾಗಿಲನ್ನು ತೆರೆದಿಡುವುದಕ್ಕೆ ಇಲ್ಲಿನ ಸಂತಾನ ಬಳ್ಳಿ ಬೆಳೆಯಲೇ ಬೇಕು'.

ಅಜ್ಜಯ್ಯ ಪರಿಸ್ಥಿತಿಯನ್ನು ಅರ್ಥೈಸಿಕೊಂಡು ಸಾವರಿಸಿಕೊಂಡರೂ ಆ ಮಾಯದ ಮಗಳ ಸಿರಿ ಬೆರ್ಮಯ್ಯ ಆಳ್ವರ ವಿವೇಕದ ಬೆಳಕನ್ನು ಮತ್ತಷ್ಟು ಜಾಗೃತಗೊಳಿಸಲು ತನ್ನ ಮಾತು ಮುಂದುವರಿಸಿದಳು...

ತನಗೆ ಸಂತತಿ ಇಲ್ಲದೆ ಈ ಸತ್ಯನಾಪುರದರಮನೆಯ ಜತೆ ಮನೆತನವೂ ಸರ್ವನಾಶವಾಗುತ್ತದಲ್ಲಾ ಎಂಬ ದುಃಖದಿಂದ ನೀವು ನರಳುತ್ತಾ ಅನ್ನ ನೀರು ಬಿಟ್ಟು ದೇಹಸೊರಗಿಸುತ್ತಾ ಕತ್ತಲೆಕೋಣೆ ಸೇರಿ. ಕಣ್ಣೀರ ಕೋಡಿ ಹರಿಸಿದ್ದು ನಿಜವೇನು ಅಜ್ಜಯ್ಯ...? ಆ ನಿಮ್ಮ ಕಣ್ಣೀರು ಹರಿದು ಬಂದು ಬೆಳ್ಳಿಬೆಟ್ಟದಲ್ಲಿ ಕುಳಿತಿದ್ದ ಕುಲಬೆರ್ಮದೇವರ ಎಡಗಾಲಿಗೆ ಸೋಕಿದಾಗ ಆತನ ದಿವ್ಯದೃಷ್ಟಿಗೆ ತಟ್ಟನೆ ನೀವು ಗೋಚರಿಸಿದ್ದು ಸುಳ್ಳೇನು...? ತನ್ನ ನಿಷ್ಠ ಭಕ್ತನ ದುಃಖವೇನೆಂದು ಕೆದಕಲು ಆತ ತಾಳ-ತಂಬೂರಿ ಹಿಡಿದ ಬ್ರಾಹ್ಮಣನ ರೂಪದಲ್ಲಿ ನಿಮ್ಮ ಅರಮನೆಯ ಬಾಗಿಲಿಗೆ ಬಂದಿದ್ದನ್ನು ಒಮ್ಮೆ ನೆನಪಿಸಿಕೊಳ್ಳಿ ಅಜ್ಜಯ್ಯ...

ಬೆರ್ಮಾಳ್ವ ನಿನ್ನಲ್ಲಿ ಮೂಟೆಗಟ್ಟಲೆ ಮುತ್ತು...ಕಳಸಗಟ್ಟಲೆ ಹವಳಗಳಿದ್ದು...ತಲೆಮಾರು ತಿಂದು ತೇಗುವಷ್ಟು ಧನ-ಧಾನ್ಯ ಸಂಪತ್ತಿದ್ದರೇನು...! ಅದನ್ನು ಅನುಭವಿಸಲು ಸಂತಾನವಿದೆಯೆ? ಎಂದು, ನೀವು ನಿಮ್ಮ ಅಂತರಂಗದ ಕೀಲಿ ತೆಗೆದು ನೋವು-ವ್ಯಸನ-ಸಂಕಷ್ಟವನ್ನು ಸುರಿಯುವ ಮುನ್ನವೇ ಆ ಬ್ರಾಹ್ಮಣ ನಿಮ್ಮನ್ನು ಹಂಗಿಸಿ ಎಚ್ಚರಿಸಿರಲಿಲ್ಲವೆ?

ನಿನ್ನ ಅಧೀನದಲ್ಲಿರುವ ತುಳುನಾಡ ಉತ್ತರದ ಲಂಕೆ ಲೋಕ ನಾಡಿನ ಕಾಡಲ್ಲಿ ಪಾಳುಬಿದ್ದಿರುವ -ಗೆದ್ದಲು ಮುಚ್ಚಿರುವ ನಿನ್ನ ಆದಿ ಕುಲಬೆರ್ಮರ ಆಲಡೆ (ಆದಿಮೂಲ ಕುಲಬ್ರಹ್ಮದೈವಸ್ಥಾನ)ಯನ್ನು ಮೊದಲು ಉದ್ಧಾರ ಮಾಡು... ಆಗಲೇ ನಿನ್ನ ಸಂತಾನಬಳ್ಳಿಯನ್ನು ಚಿಗುರಿಸುತ್ತಾನವ... ಎಂದು ಹೇಳಿದೊಡನೆ ನೀವು ಆಕಾಶದಷ್ಟು ಸಂತೋಷ, ಕಡಲಿನಷ್ಟು ನೆಮ್ಮದಿ ತುಂಬಿಕೊಂಡು ನೇರ ಅರಮನೆಯ ಚಾವಡಿ ಹೊಕ್ಕು, ಚಾಕರಿಯ ದಾರುವನ್ನು ಕರೆದು, ಆ ಬ್ರಾಹ್ಮಣನ ಜೋಳಿಗೆಗೆ ಹತ್ತು ಸೇರು ಅಕ್ಕಿ, ನಾಕುಮುಷ್ಠಿ ಮುತ್ತುಹವಳ ಸುರಿ ಎಂದು ಹೇಳಿ ಮರಳುವಷ್ಟರಲ್ಲಿ ಆ ಬ್ರಾಹ್ಮಣನೆಲ್ಲಿದ್ದಾನೆ...ಮಂಗಮಾಯ!

ಮೊಮ್ಮಗಳ ಮಾತಿನಿಂದ ಅಜ್ಜಯ್ಯನ ಅರಿವಿನ ಪರದೆ ಶುಭ್ರಗೊಂಡಿತ್ತು. ಜವಾಬ್ದಾರಿಯ ಭಾರ ಕವುಚಿಕೊಂಡಂತಾಗಿ ತೂಗುಯ್ಯಾಲೆಯಲ್ಲಿ ಕುಳಿತಿದ್ದ ಅಜ್ಜಯ್ಯ ಎದ್ದು ಮತ್ತೆ ಮದುವೆ ಕೆಲಸದ ಗಡಿಬಿಡಿಯಲ್ಲಿ ತೊಡಗಿಕೊಂಡರು. ಆ ಪರಿಯ ಕೆಲಸದ ನಡುವೆಯೇ ತನ್ನ ಮುದ್ದಿನ ಸಿರಿ ತನ್ನ ಸಂತಾನಬಳ್ಳಿಯೊಳಗೆ ಬಂದ ಪರಿಯನ್ನೂ ದಿನವನ್ನೂ ನೆನಪಿಸಿಕೊಂಡರು.

....ಆ ಜೋಳಿಗೆ ಬ್ರಾಹ್ಮಣನ ಮಾತಿನಂತೆ ಮಂದಿ ಮಾರ್ಬಲವನ್ನು ಸೇರಿಸಿಕೊಂಡು ಲಂಕೆ ಲೋಕನಾಡಿನ ಕಾಡಿಗೆ ಬಂದಾಗ ಕುಲಬೆರ್ಮೆರ ಆಲಡೆ ಕುಸಿದು ಬಿದ್ದಿದ್ದೂ; ಸುತ್ತ ಕಾಡು ಪೊದೆ ಬೆಳೆದದ್ದೂ ನಿಜ. ಹಾಗೇ ಆ ಕಾಡು ಪೊದೆಗಳನ್ನೆಲ್ಲ ಸವರಿ ಕುಲಬೆರ್ಮೆರ ಸ್ಥಾನವನ್ನು ಮತ್ತೆ ನಿರ್ಮಿಸಿ, ಇನ್ನೇನು ಹೋಮಕುಂಡವೊಂದನ್ನು ಹಾಕಬೇಕೆನ್ನುವಷ್ಟರಲ್ಲಿ... ತಾನು ಹೊದ್ದುಕೊಂಡಿದ್ದ ಹಚ್ಚಡ ತುಸು ಭಾರವಾದಂತೆನಿಸಿ ಹಚ್ಚಡ ಬಿಡಿಸಿ ನೋಡುತ್ತಾರೇನು...! ಎಳೆಸಿಂಗಾರದ ಹಾಳೆ (ಅಡಿಕೆಯ ಹೊಂಬಾಳೆ)! ಹಾಳೆ ಬಿಡಿಸಿ ಎಳೆಯ ಸಿಂಗಾರದೆಳೆಗಳನ್ನು ಬೆರ್ಮೆರಿಗೆ ಇಡುವಾ... ಎಂದು ಹಾಳೆ ಬಿಡಿಸಿದ್ದಾರಷ್ಟೆ...! ಸಿಂಗಾರದೆಳೆಗಿಂತಲೂ ನೂರುಪಟ್ಟು ಬಿಳಿಯ....ಸಾವಿರಪಟ್ಟು ಮುದ್ದಾದ ಹಸುಕೂಸು ನಗುತ್ತಿದೆ! ಅವಳೇ ಆ ಸತ್ಯಮಾಲೋಕದ ಸಿರಿ..ಸತ್ಯನಾಪುರದರಮನೆಯ ಐಸಿರಿ-ಅಕ್ಕಸಿರಿ.

ಆ ಎಳೆಗೂಸನ್ನು ತಂದು ಕೆಲಸದ ದಾರುವಿನ ಕೈಯಲ್ಲಿಟ್ಟ ಅಜ್ಜಯ್ಯ ಅಂದಿನಿಂದ ಇಂದಿನವರೆಗೂ ತನ್ನ ಉಸಿರಂತೆ ಜೋಪಾನವಾಗಿ, ಕಣ್ಣಮಣಿಯಂತೆ ಜುಲುಮೆಯಿಂದ ಕಾಪಾಡಿದ್ದಾರೆ. ಇದೀಗ ಆಕೆಯನ್ನು ಸಮಾಜದ ಕಟ್ಟುಪಾಡಿನಂತೆ ಮೈನೆರೆಯುವ ಮುನ್ನವೇ ಗಂಡಿನೊಬ್ಬನ ಆಸರೆ ದೊರಕಿಸಿ ಕಳುಹಿಸುತ್ತಿದ್ದಾರೆ. ಅಜ್ಜಯ್ಯ ನಿಟ್ಟುಸಿರ ಮೇಲೆ ನಿಟ್ಟುಸಿರು ಬಿಡುತ್ತಿದ್ದರು.

ಅಜ್ಜಯ್ಯನ ನಿಟ್ಟುಸಿರ ಮಾಲೆ ಚಾವಡಿಯಲ್ಲಿ ಕುಳಿತಿದ್ದ ಸಿರಿಯ ಚಿತ್ತವನ್ನು ಕೆದಕದಿರಲಿಲ್ಲ. ಎಷ್ಟೆಂದರೂ ಅಜ್ಜಯ್ಯನ ಮುಚ್ಚಟೆಯ ಪ್ರೀತಿ-ಅಂತಃಕರಣ ಆ ಅತ್ತೆಯ ಅರಮನೆಯಲ್ಲಿ ದೊರಕೀತೆ?

ಹಾಗೆ ನೋಡಿದರೆ ಆಕೆ ಸೊಸೆಯಾಗಿ ಕಾಲಿಡಲಿರುವ ಮನೆಯೇನು ಆಕೆಗೆ ಅಪರಿಚಿತವೇನಲ್ಲ. ಮದುವೆ ಗಂಡು ಕಾಂತುಪೂಂಜನ ತಾಯಿ ಸಂಕರುಪೂಂಜೆದಿ ಅಜ್ಜಯ್ಯ ಬೆರ್ಮೆ ಆಳ್ವರಿಗೆ ದೂರದಲ್ಲಿ ಓರೆಕೋರೆಯಲ್ಲಿ ತಂಗಿ. ಆಸ್ತಿ-ಅಂತಸ್ತು ಅಂತಃಕರಣವುಳ್ಳ ಬೆರ್ಮಾಳ್ವನ ದೇವರ ಮಗಳು ತನ್ನ ತುಸು ವಕ್ರಬುದ್ಧಿಯ ಮಗನಿಗೆ ಮೂಗುದಾರ ಹಾಕಿ ಆಳುವವಳಾದರೆ ಇನ್ನೇನು...? ಒಬ್ಬಳೇ ಮಗಳು... ಅಲ್ಲಿದ್ದೆಲ್ಲವೂ ಇಲ್ಲಿಗೆ.... ಇಲ್ಲಿದ್ದೆಲ್ಲವೂ ಅಲ್ಲಿಗೆ....ಎಂಬಂತೆ ಎಲ್ಲ ಆಸ್ತಿ ತಮಗೇ ಎಂಬ ಲೆಕ್ಕಾಚಾರದಿಂದ ಸಂಕರುಪೂಂಜೆದಿ ಅಣ್ಣನ ಕೈಕಾಲು ಹಿಡಿದು ಈ ಮದುವೆಗೆ

ಬೆರ್ಮೆರ್ಮಾಳ್ವರನ್ನು ಒಪ್ಪಿಸಿದ್ದಾಳೆ.

ಅಜ್ಜಯ್ಯ ಬೆರ್ಮೆರ್ಮಾಳ್ವರಿಗೂ ತಂಗಿ ಸಂಕರುವಿನ ಮಗ ಕಾಂತುಪೂಂಜನ ಬಗ್ಗೆ ತಿಳಿಯದ್ದೇನಿಲ್ಲ. ಆತನ ಜಟಿಲ, ಕುಟಿಲ, ಕಪಟತನ, ಹೆಣ್ಣು-ಹೊನ್ನಿನ ವ್ಯಾಮೋಹ ಎಲ್ಲವೂ ಅವರಿಗೆ ಸ್ಪಷ್ಟವಿತ್ತು. ಅದರ ಜತೆಗೆ ಇನ್ನೊಂದು ಸಂಗತಿಯ ಅರಿವೂ ಅವರಿಗೆ ಚೆನ್ನಾಗಿತ್ತು.

ತನ್ನ ಸತ್ಯಲೋಕದ ಮಗಳು ಸಿರಿ ಬೆಂಕಿಯಂತೆ. ಲೋಕದ ಎಲ್ಲ ಹೆಣ್ಣು ಮಕ್ಕಳ ನೋವು-ಸಂಕಟದ ಅರಿವು ಆಕೆಗೆ ಇದೆಯೆನ್ನುವುದು ಅವಳ ಮಾತಲ್ಲೇ ಸ್ಪಷ್ಟ. ಬೆಂಕಿಯಂತಾ ಆ ಮಗಳನ್ನು ಸರಿಯಾಗಿ ಬಳಸಿಕೊಂಡರೆ ಆಕೆ ಬೆಳಕು ನೀಡಿಯಾಳು...ತಪ್ಪಿದೆಯಾ ಸುಟ್ಟು ಭಸ್ಮ ಮಾಡಿಯಾಳು...; ಇರಲಿ ಸಾಕು ಅಬಲ ಹೆಣ್ಣು ಮಕ್ಕಳಿಗೆ ಆಕೆಯಿಂದ ಒಳ್ಳೆಯದಾಗುವುದಾದರೆ...

ಅಜ್ಜಯ್ಯ ಹೀಗೆ ಯೋಚಿಸಿಯೇ ಬಸರೂರ ಅರಮನೆಗೆ ಆಕೆಯನ್ನು ಸೊಸೆಯಾಗಿ ಕಳುಹಿಸಿಕೊಡಲು ಒಪ್ಪಿ ಕಳೆದೆರಡು ಹಿಂದಿನ ಭಾನುವಾರವೇ ನಿಶ್ಚಿತಾರ್ಥ ಮುಗಿಸಿದ್ದರು. ಮೇಲಿನ ಭಾನುವಾರವೇ ಸಿರಿಯ ಮದುವೆಯ ಮಹೂರ್ತ. ನೋಡು ನೋಡುತ್ತಿದ್ದಂತೆ ಮದುವೆಯ ಚಪ್ಪರವೆದ್ದಾಯ್ತು. ಕಬ್ಬಿನ ಜಲ್ಲೆ, ಲಾವಂಚದ ಹುಲ್ಲನ್ನೇ ಬಳಸಿ ಚಪ್ಪರವೆಬ್ಬಿಸಿದ್ದರು ಅಜ್ಜಯ್ಯ. ಅಚ್ಚುಬೆಲ್ಲದಲ್ಲೇ ಚಪ್ಪರದಡಿಯ ಮಣ್ಣನ್ನು ಅರೆದಾಯ್ತು. ಅಜ್ಜಯ್ಯನ ಕಣ್ಣೀರ ಧಾರೆಯೇ ಮಣ್ಣಿಗೆ ನೀರಾಯ್ತು. ಅರಮನೆಯ ತನ್ನ ಮುದ್ದಿನರಗಿಣಿ ಬಸರೂರ ಅತ್ತೆಗೂಡಿಗೆ ಹಾರಿಹೋಗುತ್ತಲ್ಲಾ..ತಾನು ಒಂಟಿಯಾದೆನಲ್ಲ...ತನ್ನ ಅಂತರಂಗದ ಮಾತಿಗಿನ್ಯಾರು ದಿಕ್ಕು.... ಎಂದು ಮುದಿಹೃದಯ ಹಾಗೇ...ಚಡಪಡಿಸುತ್ತಾ ಒಂದು ಚಾವಡಿಯ ತೂಗುಯ್ಯಾಲೆಯಲ್ಲಿ ಬಂದು ಕುಸಿದುಕುಳಿತಿದ್ದ.

ಹತ್ತು ವರುಷದ ಬಾಲೆ ನೂರು ವರುಷದ ತಾಯಿಯಂತೆ ಹತ್ತು ತೂಕದ ಮಾತುಗಳನ್ನಾಡಿ ಅಜ್ಜಯ್ಯನನ್ನು ಸಮಾಧಾನಿಸಿ ಎಬ್ಬಿಸಿ ಕಳುಹಿಸಿದ್ದಳು. ಅಜ್ಜಯ್ಯ ಮತ್ತೆ ಮದುವೆಯ ಸಡಗರದಲ್ಲಿ ತೊಡಗಿಕೊಂಡಿದ್ದರು.

ಅಜ್ಜಯ್ಯ ಮತ್ತೆ ಅಂಗಳ ವಿಳಿದರು. ಚಪ್ಪರದ ಲಾವಂಚ ಹುಲ್ಲಿನ ಸುವಾಸನೆಗೆ ಅವರ ತಲೆ ಗಿರ್‍ರೆಂದಿತ್ತು. ಅರಮನೆಯ ನಾಕು ಮೆಟ್ಟಲು ಇಳಿದೊಡನೆ ಅವರಿಗೆ ಕಂಡಿದ್ದು, ಚಪ್ಪರದ ಕೆಳಗೆ ಅಕ್ಕಪಕ್ಕಕ್ಕೆ ಪಂಚೋಳಿ ವೀಳ್ಯದೆಲೆಗಳಲ್ಲಿ ನೇಯ್ದ ತಡಿಕೆಗಳು. ಅಜ್ಜಯ್ಯ ಆ ನೇಯ್ಗೆಯ ಕಲಾತ್ಮಕತೆಗೆ ತಲೆದೂಗಿದರು. ಅರಮನೆಯ ಅಂತಸ್ತಿಗೆ ತಕ್ಕಂತೆ ಅಡುಗೆಮನೆಯೂ ಸಿದ್ಧವಾಗಿತ್ತು. ಅಷ್ಟರಲ್ಲಿ ಅರಮನೆಯ ಚಾವಡಿಗೆ ಪೇಟೆಯ ಸೆಟ್ಟಿ ಜವುಳಿಯ ಮೂಟೆಯನ್ನೇ ಹೊತ್ತುತಂದ. ಪಟ್ಟೆ ಸೀರೆಗಳ ಅಟ್ಟಿಯನ್ನೇ ಉರುಳಿಸಿದ. ಜರಿಯಲ್ಲಿರುವ ಹೂವಿನ ಚಿತ್ತಾರಗಳನ್ನು ಆಕಾಶದೆತ್ತರಕ್ಕೆ ಬಣ್ಣಿಸಿದ. ಅಜ್ಜಯ್ಯ ಎಲ್ಲವನ್ನೂ ತನ್ನ ಮುತ್ತಿನ ಮಗಳಿಗೆ ಗೊತ್ತುಮಾಡಿಕೊಂಡರು. ಸೆಟ್ಟಿಯ ತಿಜೋರಿಗೆ

ಚಿನ್ನದ ವರಹಗಳ ಸುರಿದೊಡನೆ ಆತನ ಬೆನ್ನಿಗೇ ಬಂದವ-ಚಿನ್ನದ ಆಚಾರಿ. ಲೋಕದದಲ್ಲಿಲ್ಲದ ಒಡವೆಗಳನ್ನು ತಂದು ಬೆರ್ಮಾಳ್ವರೆದುರು ಬಿಚ್ಚಿಟ್ಟ. ಒಡವೆಗಳ ಚಂದಕ್ಕೇ ಅಜ್ಜಯ್ಯನಿಗೆ ಬವಳಿ ಬಂದಂತಾಯ್ತು. ಸತ್ಯದ ಹೆಣ್ಣಿಗೆ ಆ ಎಲ್ಲ ಮುತ್ತಿನ ಒಡವೆಗಳಿರಲಿ...ನನ್ನ ಚಿನ್ನದ ಮಗಳಿಗೆ ಇಡೀಯ ಲೋಕದಲ್ಲಿಲ್ಲದ ಆ ಎಲ್ಲ ಪಡ್ನೆಯ (ಒಡವೆ)ಗಳಿರಲಿ ಎಂದು ಎಲ್ಲವನ್ನೂ ಖರೀದಿಸಿ ಕಲ್ಲಿನ ಕಲೆಂಬಿಯೊಳಗಿರಿಸಿ ಆಚಾರಿಗೆ ಕೊಡುವಷ್ಟು ವರಹ ಕೊಟ್ಟು ಕಳುಹಿಸಿಕೊಟ್ಟರು.

ಅಜ್ಜಯ್ಯನ ಅಂತರಂಗದ ದುಃಖ ತಳಮಳ, ಒಂದು ಹಂತ ತಲುಪುವಷ್ಟರಲ್ಲಿ ಮದುವೆ ದಿನವೂ ಬಂದೇಬಿಟ್ಟಿತು. ನಾಳೆಯೇ ಮದುವೆ! ಅಜ್ಜಯ್ಯ ಬೆರ್ಮಾಳ್ವರ ಮುದ್ದಿನ ಮೊಮ್ಮಗಳು. ತಮ್ಮೆಲ್ಲರ ಮಗಳೆಂಬಂತೆ ಊರಿಗೆ ಊರೇ ಅರಮನೆಯ ಚಪ್ಪರದಡಿಗೆ ಹರಿದು ಬಂತು. ಎಲ್ಲೆಲ್ಲೂ ಸಂಭ್ರಮವೇ ಸಂಭ್ರಮ. ಮದುಮಗಳಿಗೆ ಅರಿಶಿಣ-ಹಾಲು ಹಚ್ಚುವವರು ಹಚ್ಚಿದರು; ಸ್ನಾನದ ಶಾಸ್ತ್ರ ಮಾಡಿಸುವವರು ಮಾಡಿಸಿದರು... ಸುಗಂಧ ದ್ರವ್ಯ ಲೇಪಿಸಬೇಕಾದವರು ಅದನ್ನು ಲೇಪಿಸಿದರು. ಈಗ ಸಿರಿಯ ಸಿಂಗಾರದ ಕೆಲಸ ಶುರುವಾಯಿತು. ಆ ಮೈಸಿರಿಗೆ-ಐಸಿರಿಗೆ ಆಭರಣಗಳ ಸೆರೆ ಬೇರೆ. ಒಂದೇ ಎರಡೇ ಆಭರಣ. ಎಲ್ಲವನ್ನೂ ಹಾಕಿ ಆಯಿತು. ಚಿನ್ನದ ಬಾಚಣಿಗೆಯಲ್ಲಿ ತಲೆ ಬಾಚಿ ಹೂ· ಜೆಲ್ಲಿಬಿಟ್ಟೂ ಆಯಿತು. ಇನ್ನೂ ಪಟ್ಟೆ ಸೀರೆ ಉಡಿಸುವ ಕೆಲಸ.

ಸುತ್ತುಮುತ್ತಿನ ಹೆಂಗಸರು ಅಜ್ಜಯ್ಯ ತಂದಿರಿಸಿದ ಪಟ್ಟೆ ಸೀರೆಯ ಕಟ್ಟು ಬಿಚ್ಚಿದರು. ಹೆಂಗಸರ ಕಣ್ಣಿಗೆ ಮಿಂಚು ಬಡಿದಂತಾಯಿತು. ಯಾವ ಸೀಮೆಯ ಸೆಟ್ಟಿಗಾರ, ಯಾವ ಕೈಯಲ್ಲಿ ಈ ಪರಿಯ ಹೂ ನೇಯ್ದಾನೋ.... ಎಂದು ಹೆಂಗಸರು ಮೂಗಿನ ಮೇಲೆ ಬೆರಳಿಟ್ಟೇ ಸಿರಿಗೆ ಸೀರೆ ಉಡಿಸಿದರು.

ಸಿರಿಯ ಸೀರೆಯ ಸಿಂಗಾರ ಮುಗಿಸುವಷ್ಟರಲ್ಲಿ ಗಂಡಿನ ಕಡೆಯ ದಿಬ್ಬಣ ಬಂದೇಬಿಟ್ಟಿತು. ಸಿಡಿಮದ್ದಿನ ಶಬ್ದಕ್ಕೆ ಅಜ್ಜಯ್ಯನ ಅಂತಃರಂಗ ಮತ್ತೆ ಕಲಕಿತು. ಕಣ್ಣಲ್ಲಿ ನೀಲುಕ್ಕಿ ಬಂತು ಆ ಭಾವದೊಳಗೆ ನೆಂಟರ ಕೈಕಾಲಿಗೆ ನೀರು ಕೊಟ್ಟು ಕುಡಿಯಲು ಎಳನೀರು ಪಾನಕ ಕೊಟ್ಟು ಚಪ್ಪರಕ್ಕೆ ಹೋಗುವಷ್ಟರಲ್ಲಿ ಮದುವೆಯ ಮಹೂರ್ತ ಸಮೀಪಿಸಿಯಾಗಿತ್ತು. ಅಜ್ಜಯ್ಯನಿಂದ ಮೊಮ್ಮಗಳಿಗೆ ಹೂ ಸೀರೆ ಕೊಡಿಸುವ ಮುನ್ನ ಊರ ಹೆಂಗಸರು ಸಿರಿಯ ಕೈಗೆ ಒದು ಕವಳೆ ವೀಳ್ಯದೆಲೆ, ಅಡಿಕೆ ಜತೆಗೆ ಬೆಳ್ಳಿಯ ಗೆಜ್ಜೆ ಕತ್ತಿ ನೀಡಿದರು. ಆ ಗೆಜ್ಜೆ ಕತ್ತಿ ಸಿರಿಯ ಸೊಂಟದಲ್ಲಿ ನೆಲೆಯಾದೊಡನೆ ಆಕೆಯ ಹೆಣ್ತನಕ್ಕೆ ಅದೆಂಥದೋ ನೈತಿಕ ಬೆಂಬಲ ಬಂದಂತಾಯ್ತು. ಬಂಟರ ಹೆಣ್ಣುಗಳ ದಿಟ್ಟತನದ ಪ್ರತೀಕವಷ್ಟೇ ಅಲ್ಲ ಆ ಗೆಜ್ಜೆಕತ್ತಿ, ಅನ್ಯಾಯ-ಶೋಷಣೆಯನ್ನು ಮಟ್ಟಹಾಕಬಲ್ಲ ಸಂಕೇತವೂ ಹೌದು.

ಮದುಮಗಳಿಗೆ ಹಣ-ಸೀರೆ ಕೊಟ್ಟ ನಾಕೇ ನಾಕು ಗಳಿಗೆಯಲ್ಲಿ ಅಜ್ಜಯ್ಯ ಧಾರೆ ಎರೆದೂ ಆಯ್ತು. ಕಣ್ಣೀರಿನ ಧಾರೆ ಹರಿಸುತ್ತಲೇ ಅಜ್ಜಯ್ಯ ನಡುಗುವ ಕೈಗಳಿಂದಲೇ

ಮೊಮ್ಮಗಳಿಗೆ ಧಾರೆ ಎರೆದರು. ಆಯ್ತು! ಸತ್ಯನಾಪುರದ ಅರಮನೆಯ ದೀಪ ಬಸರೂರಿಗೆ ದಾಟಿತು.

ಧಾರೆ ಎರೆದೊಡನೆ ಮತ್ತೇನು! ಬಂದ ನೆಂಟರಿಷ್ಟರ-ಊರ ಮಂದಿಯ ಊಟ-ಉಪಚಾರ ನಡೆದೊಡನೆ ಹೆಣ್ಣನ್ನು ಗಂಡನ ಮನೆಗೆ ಬೀಳ್ಕೊಡುವ ಗಳಿಗೆ. ಅಜ್ಜಯ್ಯನ ಅಂತರಂಗ ಕಲ್ಲಾಗಿತ್ತೇನೋ? ಬಿಕ್ಕಿ ಬಿಕ್ಕಿ ಅಳುತ್ತಿರುವ ಸಿರಿಯನ್ನು ಎದೆಗೊರಗಿಸಿಕೊಂಡು ತಲೆಸವರಿ ಸಮಾಧಾನಿಸುತ್ತಲೇ ತಂದೆ ಆಡಬೇಕಾದ ಬುದ್ಧಿ-ಸಮಾಧಾನದ ಮಾತುಗಳನ್ನಾಡಿದರು. ತನ್ನ ಜೀವದ ಉಸಿರನ್ನೇ ಕಳಚಿ ಬೀಳುವಂತೆ ಏಳು ತೂಕ ಭಾರದ ಸತ್ಯದ ಮಗಳನ್ನು ಎತ್ತಿ ಸಿಂಗರಿಸಿದ್ದ ಸತ್ಯದಂಡಿಗೆ(ಪಲ್ಲಕ್ಕಿ) ಮೇಲೆ ಕೂರಿಸಿದಾಗ ಆ ಮುದಿ ಎದೆ ಬಿರಿಯಿತು. ನೆರೆದ ಮಂದಿಯೆಲ್ಲ ಪಟಪಟನೆ ಕಣ್ಣೀರು ಸುರಿಸುವಂತೆ ದಂಡಿಗೆಗೆ ಮುಖವಿಟ್ಟು ಬೇರ್ಮಾಳ್ವರು ಅತ್ತೇಬಿಟ್ಟರು. ನನ್ನ ಅರಮನೆಯ ಬೆಳಕಿನ ಬೆಳಕೇ ಎಂದು ಮೊಮ್ಮಗಳ ಮುಂದಲೆಗೆ ಮುತ್ತಿಟ್ಟರು. 'ಸತ್ಯವನ್ನು ಬೆಳಗುವ ಮಗಳಾಗು....ಹೆಣ್ಣು ಮಕ್ಕಳಿಗೆ ದಾರಿ ತೋರಿಸುವ ದೀಪವಾಗು... 'ಎಂದು ಹಾರೈಸಿ ದಂಡಿಗೆಯನ್ನು ಬೀಳ್ಕೊಟ್ಟರು. ಒಡತಿಯ ಬೀಳ್ಕೊಡುವ ಸನ್ನಿವೇಶ ದಿಟ್ಟಿಸಲಾಗದೆ ಕೊಟ್ಟಿಗೆಯೊಳಗಿನ ಹಸು-ಕರುಗಳು ಬಾಯ್ಕೊಟ್ಟು ಅತ್ತವು. ಚಪ್ಪರದ ಆಚೀಚೆಗೆ ಅರಮನೆಯ ಕೋಳಿ-ಹುಂಜಗಳು ತಲೆಬಾಗಿ ಶಿಸ್ತಾಗಿ ನಿಂತು ಸತ್ಯದೊಡತಿಯನ್ನು ಬೀಳ್ಕೊಟ್ಟವು. ಅರಮನೆಯ ಮುತ್ತಿನ ಕೆರೆಯ ಮೀನುಗಳು ಒಂದು ಗಳಿಗೆ ಈಜದೆ ದಡದ ನೀರಿಗೆ ಬಂದು ಕೆರೆಯ ದಡದಲ್ಲಿ ಸಾಗುತ್ತಿದ್ದ ದಂಡಿಗೆಯೊಳಗಿನ ಒಡತಿಯನ್ನು ಕಂಡು ದುಃಖಿಸಿದವು.

ಸತ್ಯದಂಡಿಗೆಯ ಮೆರವಣಿಗೆ ಮುಂದರಿಯಿತು. ದಂಡಿಗೆ ಹೊತ್ತ ಭೋವಿಗಳಿಗೂ ಸತ್ಯನಾಪುರದ ಅರಮನೆಯ ಅರಗಿಣಿಯನ್ನು ಬಸರೂರಿನ ಗೂಡಿಗೆ ಹೊತ್ತೊಯ್ಯಲು ಕಷ್ಟವಾಗುತ್ತಿದೆ. ತಮ್ಮ ಒಡತಿ ನಾಳೆಯಿಂದ ಬಸರೂರ ಅರಮನೆಯ ದೀಪ ಬೆಳಗುತ್ತಾಳೆ... ಸತ್ಯನಾಪುರದ ಅರಮನೆಯ ಗತಿ! ಅಜ್ಜಯ್ಯ ಸತ್ಯದ ಸಿರಿ ಹೊರಟ ಸತ್ಯದಂಡಿಗೆಯನ್ನು ಎವೆಯಿಕ್ಕದೆ ದಿಟ್ಟಿಸಿದರು. ದಂಡಿಗೆ ಮರೆಯಾದೊಡನೆ ಅರಮನೆಯ ಚಾವಡಿಯ ತೂಗುಯ್ಯಾಲೆಯಲ್ಲಿ ಬಂದು ಕವುಚಿ ಮಲಗಿದರು.

ಅತ್ತ ಸತ್ಯನಾಪುರದ ಅಜ್ಜಯ್ಯನ ಕೀರ್ತಿಗೆ ಅರಮನೆಯ ಹೆಸರಿಗೆ ಎಳ್ಳಷ್ಟೂ ಕುಂದುಬಾರದಂತೆ ಸಿರಿ ಅತ್ತೆಮನೆಗೆ ಒಪ್ಪುವಂತೆ ಬದುಕಿದಳು. ಬಸರೂರಿನ ಬಾಕಿಮಾರು ಗದ್ದೆಯಲ್ಲಿ ಮೂರು ಬೆಳೆ ತೆಗೆವಷ್ಟರಲ್ಲಿ ಸಿರಿಗೆ ನೀರು ನಿಂತಿತು.

ಮೊಮ್ಮಗಳಿಗೆ ನೀರು ನಿಂತಿರುವ ಸುದ್ದಿ ಅಜ್ಜಯ್ಯನ ಕಿವಿಗೆ ತಲಿಪಿದ್ದೇ ಸಮ, ಅಜ್ಜಯ್ಯ ಹಾರುವ ಹಕ್ಕಿಯಾದರು, ತೇಲುವ ಮೋಡವಾದರು. ಅರಮನೆಯಲ್ಲಿ ಪಾಯಸ-ಪರಮಾನ್ನದ ಕೂಟ ನಡೆಸಿದರು. ತಕ್ಷಣ ಸತ್ಯದಂಡಿಗೆ ಏರಿ ಮೊಮ್ಮಗಳ

ಯೋಗ್ಯಕ್ಷೇಮ ವಿಚಾರಿಸಲು ಧಾವಿಸಿ ಬಂದರು. ಬಸರೂರ ಅರಮನೆ ಚಾವಡಿಯಲ್ಲಿ ಮೊಮ್ಮಗಳನ್ನು ಕಂಡವರೇ ಆಕೆಯ ದಿಟ್ಟಿಯ ದೃಷ್ಟಿ ಬೊಟ್ಟು ತೆಗೆದರು; ಅಂಗೈಗೆ ಮುತ್ತು ಕೊಟ್ಟರು. ಸತ್ಯನಾಪುರದಮನೆಯಿಂದ ತುಪ್ಪದಲ್ಲಿ ಕರಿದು ತಂದ ಸಿಹಿತಿಂಡಿ ತಿನಿಸಿದರು. ಮತ್ತೆ ಬರುವೆನೆಂದು ಮೊಮ್ಮಗಳಿಗೆ ಮಾತುಕೊಟ್ಟು ಮರಳಿ ಸತ್ಯದಂಡಿಗೆ ಏರಿದರು. ಹಾಗೆ ಹೋದ ಬೆರ್ಮಾಳ್ವರು ಮತ್ತೆ ಬಸರೂರು ಅರಮನೆಯ ಆನೆ ಬಾಗಿಲು ಹೊಕ್ಕಿದ್ದು-ಸಿರಿಗೆ ಏಳು ತಿಂಗಳು ತುಂಬಿ ಒಂದು ದಿನ ಮೇಲೆ ಬಿದ್ದಾಗ.

ಏಳು ತಿಂಗಳು ಕಳೆದು ಒಂದೆರಡು ದಿನ ಮೇಲೆ ಬೀಳುವುದರೊಳಗೆ ಸಂಪ್ರದಾಯದಂತೆ ಗಂಡನ ಮನೆಯಲ್ಲಿ ಬಯಕೆ ಶಾಸ್ತ್ರ ಮುಗಿಸಿ ಸತ್ಯನಾಪುರದ ಅರಮನೆಗೆ ಕರೆದೊಯ್ಯುವ ತರಾತುರಿ ಅಜ್ಜಯ್ಯನಿಗೆ. ಹೆರಿಗೆ ಮುಗಿಸಿ ತೊಟ್ಟಿಲ ಮಗು ಮರಳುವವರೆಗಾದರೂ ಸತ್ಯನಾಪುರದ ಮನೆಗೆ ಬೆಳಕು ತುಂಬೀತಲ್ಲವೆ ಎನ್ನುವ ಆಸೆ ಬೆರ್ಮಾಳ್ವರದ್ದು.

ಆ ವಿಚಾರ ಮನದೊಗಿಟ್ಟುಕೊಂಡೇ ಬಸರೂರ ಅರಮನೆಯ ಅಂಗಳ ಹೊಕ್ಕವರು ತಂಗಿ ಸಂಕರುಪೂಂಜೆದಿಯಲ್ಲಿ ಬಯಕೆ ಶಾಸ್ತ್ರದ ಪ್ರಸ್ತಾವವನ್ನೆತ್ತಿದ್ದರು. ಸಿರಿಯೂ ತವರು ಮನೆಗೆ ಕಾಲಿಡಲು ತುದಿಗಾಲಲ್ಲೇ ನಿಂತವಳು. ಅತ್ತೆ-ಗಂಡನ ಮಾತನ್ನು ಒಪ್ಪವಾಗಿ ಕೇಳಿಸಿಕೊಂಡಳು.

ಸಂಕರು ಪೂಂಜೆದಿ ಬಯಕೆಶಾಸ್ತ್ರದ ಬಗ್ಗೆ ಮಗ ಕಾಂತುಪೂಂಜನ ಮುಖದಿಟ್ಟಿಸಿ ಸಲಹೆ ಕೇಳಿದಳು. ಚಂದ್ರನಲ್ಲಿ ಕೇಳಿ ಸೂರ್ಯ ಮೂಡುತ್ತಾನೇನು... ಎಂದು ಅಜ್ಜಯ್ಯ ಮುಖ ಹಿಂಡಿದರು. ಕಾಂತುಪೂಂಜನಿಗೆ ಈಚೀಚೆಗೆ ಹೆಂಡತಿಯ ಮೇಲೆ ಎಳ್ಳಿನಷ್ಟೂ ಆಸಕ್ತಿ ಇಲ್ಲದ್ದೂ- ತಾಯಿ ಸಲಹೆ ಕೇಳಿದ್ದೂ ಸರಿಯಾಯ್ತು. ಬಯಕೆ ಹಾಕದಿದ್ದರೆ ಹೆರಿಗೆ ಆಗುವುದಿಲ್ಲವೇನು! ಎಷ್ಟು ದಿನ ಹೊಟ್ಟೆಯಲ್ಲಿಟ್ಟುಕೊಳ್ಳುತ್ತಾಳೆ ನೋಡುವಾ.... ಹೇಳಿದ್ದಾನಷ್ಟೆ. ಅಜ್ಜಯ್ಯ ಮಿಂಚಿನಂತೆ ಸಿಡುಕಿದರು-ಗುಡುಗಿನಂತೆ ಅಬ್ಬರಿಸಿದ ಅಣ್ಣನ ಅಬ್ಬರಕ್ಕೆ ಸಂಕರುಪೂಂಜೆದಿ ಬೆಚ್ಚಿಬಿದ್ದಳು-ಮಗ ಕಾಂತುಪೂಂಜ ಚಾವಡಿಯ ಅಕ್ಕಿ ಮೂಟೆ ಹಿಂದೆ ಅಡಗಿಕೊಂಡ. ಇನ್ನೊಂದೇ ಒಂದು ಅಬ್ಬರ ಹಾಕಿ ಅಡಗಿ ಕೂತ ಕಾಂತುಪೂಂಜನನ್ನು ಅಜ್ಜಯ್ಯ ಹೊರಕರೆದರು. ಮಗ ಬರುವಷ್ಟರಲ್ಲಿ ಸಂಕರುಪೂಂಜೆದಿ ಮಗನ ಕಾಲಿಗೆ ಮೆಟ್ಟು ತಂದಿರಿಸಿ, ಕೈಗೆ ಓಲೆಗರಿಕೊಡೆ ಕೊಟ್ಟು ಕೈಗಷ್ಟು ವರಹ ತುರುಕಿಸಿ. 'ನೀವಿಬ್ಬರೂ ಈಗಲೇ ಈ ಕ್ಷಣದಲ್ಲೇ ಜೋಯಿಸ್ರ ಹಿತ್ತಲಿಗೆ ಹೋಗಿ ದಿನ ಕೇಳಿ ಬನ್ನಿ'ಎಂದು ಕಳುಹಿಸಿಕೊಟ್ಟಳು.

ಮನಸ್ಸಿಲ್ಲದ ಮನಸ್ಸಿನಿಂದ, ಪೇಟೆಯ ವೇಶ್ಯೆ ಸೂಳೆಸಿದ್ದುವಿನ ನೆನಪನ್ನು ಹಚ್ಚಿಕೊಂಡೇ ಕಾಂತುಪೂಂಜ ಅಜ್ಜಯ್ಯನ ಬೆನ್ನ ಹಿಡಿದ. ಅಜ್ಜಯ್ಯ ಬೆರ್ಮಾಳ್ವರು ಮುಂದೆ-ಕಚ್ಚೆಹರುಕ ಕಾಂತುಪೂಂಜ ಹಿಂದೆ, ಜಾತಕ ಓದು ಜೋಯಿಸರು- ಈ 'ಬೆಂಕಿ-ನೀರ'ಬರುವಿಕೆಯನ್ನು ದೂರದಲ್ಲೇ ಕಂಡು ನಸುನಕ್ಕರು. ಸತ್ಯನಾಪುರದ ವಯೋವೃದ್ಧ ಅರಸು ಈ ತಲೆಹಿಡುಕನ

ಜತೆ ಯಾಕೆ ಬಂದರು-ಎಂಬ ಯೋಚನೆಯಲ್ಲಿರುವಾಗಲೇ ಬಂದ ಸಂಗತಿ ವಿಲೇವಾರಿಯಾಯ್ತು. ಜೋಯಿಸರು ಅರ್ಧಮಣ ಜಾತಕ, ಒಂದು ಮಣ ಪುಸ್ತಕ, ಆರು ಮುಷ್ಠಿ ಕವುಡಿಗೆ ದೊಡ್ಡದೊಂದು ರಾಶಿಮಣೆಯನ್ನು ಎದುರಿಗಿಟ್ಟು ಕೋಟಿ ಲೆಕ್ಕಾಚಾರ ಮಾಡಿ ಸೀಮಂತದ ಮುಹೂರ್ತ ಒದಗಿಸಿಕೊಟ್ಟರು. ಮೇಲಿನ ಭಾನುವಾರ ಬೆಳಿಗ್ಗೆ ಇಂತಿಂಥಾ ಗಳಿಗೆಗೆ ಬಸುರಿಗೆ ಹೂ-ಸೀರೆ ಕೊಡುವುದು...ಸಂಜೆ ಗೋಧೂಳಿ ಲಗ್ನಕ್ಕೆ ಬಸುರಿ ಸಿರಿ ಸತ್ಯನಾಪುರದ ಅರಮನೆಯ ಚಾವಡಿಯೊಳಗಿರಬೇಕು ಎಂದು ಜೋಯಿಸರು ಆಜ್ಞೆಯಿತ್ತರು.

ಹಾಗೇ ಜೋಯಿಸರ ಹಿತ್ತಲಿಂದ ಮರಳಿ ಬಂದ ಅಜ್ಜಯ್ಯ ಆ ರಾತ್ರಿ ಅಲ್ಲೇ ಇದ್ದು, ಮರುದಿನ ಬಸರೂರ ಅರಮನೆಯ ಅರಸಿ ಸಂಕರುಪೂಂಜೆದಿಯನ್ನು ಕರೆದು ಬಸುರಿಗೆ 'ಬಯಕೆ ಸೀರೆ' ತೆಗೆಯುವ ಬಗ್ಗೆ ಪ್ರಸ್ತಾಪವೆತ್ತಿದ್ದರು. ಕಾಂತುಪೂಂಜ ಈ ಮಾತು ಕೇಳಿಸಿಕೊಂಡವನೇ ನೇರ ಅಟ್ಟವೇರಿ ಕುಳಿತು ವೀಳ್ಯ ಮೆಲ್ಲತೊಡಗಿದ್ದ. ಈಕೆಗೆ ಸೀರೆ ಕೊಡುವ ಬದಲು ಸೂಳೆಸಿದ್ದುವಿಗೆ ಸೀರೆ ಕೊಟ್ಟರೆ ಆಕೆಯ ಆದರವೇ ಬೇರೆ- ಮನಸ್ಸಲ್ಲೇ ಮಂಡಿಗೆ ಸವಿಯುವಷ್ಟರಲ್ಲಿ ಅಜ್ಜಯ್ಯನ ಕರೆ ಕೇಳಿಸಿತ್ತು. ಅಟ್ಟವಿಳಿದು ಬಂದವನೇ ಚಾವಡಿಯಲ್ಲಿ ನಿಂತಿದ್ದ ಸಿರಿಯ ಉರಿದೃಷ್ಟಿಯನ್ನು ತಾಗಿಸಿಕೊಳ್ಳದೆ ತಾಯಿ ಸಂಕರು ಪೂಂಜೆದಿಯ ಎದುರು ನಿಂತುಬಿಟ್ಟು. ಸಂಕರು ಪೂಂಜೆದಿ ಮಗನ ಕೈಗೊಂದು ಓಲೆಗರಿಕೊಡೆ ಕೊಟ್ಟು ಕಿಸೆಗೆ ಎಂಟುನೂರು ವರಹಗಳ ಗಂಟನ್ನಿಟ್ಟು 'ಪೇಟೆಯ ಗಮ್ಮಡಸೆಟ್ಟಿಯ ಅಂಗಡಿಯಿಂದ ಬಸುರಿಗೆ ಬಯಕೆ ಸೀರೆ ತೂಗಿ ತಾ... ಹಾಗೆಯೇ ಕುಡುಬೆದಿ(ಕ್ರಿಶ್ಚಿಯನ್ ಹೆಂಗಸು) ಹಿತ್ತಲು ಹೊಕ್ಕು ನಾಡಿದ್ದಿಗೆ ಮಲ್ಲಿಗೆ ಚೆಂಡಿಗೆ ಹೇಳಿ ಬಾ...'ಎಂದು ಬೆರ್ಮಾಳ್ವರ ಸಮೇತ ಮಗನನ್ನು ಕಳುಹಿಸಿಕೊಟ್ಟಳು.

ತಾಯಿಯ ಒತ್ತಾಯಕ್ಕೆ ಮಗ, ಕಾಲಿಗೆ ಮೆಟ್ಟು ಮೆಟ್ಟಿಕೊಂಡು, ಬೆರ್ಮಾಳ್ವರ ಹಚ್ಚಡದ ಬೆನ್ನು ಹಿಡಿದ. ಕಡೇರಿ ಕಾರ್ಲ ಪೇಟೆಯ ಗುಮ್ಮಡ ಸೆಟ್ಟಿ ಸತ್ಯದ ಹೆಣ್ಣು ಸಿರಿಗೆ ಒಪ್ಪುವಂತಾ ಸಾವಿರ ಚಿತ್ತಾರದ ಪಟ್ಟೆ ಸೀರೆಯನ್ನು ತೂಗಿಕೊಟ್ಟ. ಅದಕ್ಕೆ ಒಪ್ಪುವ ರವಿಕೆ ಕಣವನ್ನೂ ಇಟ್ಟ. ತಾಯಿಕೊಟ್ಟ ವರಹಗಳನ್ನು ಗುಮ್ಮಡ ಸೆಟ್ಟಿಯ ತಿಜೋರಿಗೆ ಸುರಿದು ಕಾಂತುಪೂಂಜ ಬಯಕೆಯ ಸೀರೆಕಟ್ಟು ಪಡೆದುಕೊಂಡು ಅಜ್ಜಯ್ಯನ ಬೆನ್ನು ಹಿಡಿದ.

ಮಾತಿಲ್ಲ ಕತೆಯಿಲ್ಲ. ಮೌನದ ಮೆರವಣಿಗೆಯಾಯ್ತು. ಅಷ್ಟು ದೂರ ಸಾಗಿದ ನಂತರ ತಾನೇ ಸೋತೆನೆಂಬಂತೆ ಅಜ್ಜಯ್ಯನೆ 'ನಾನು ಹೀಗೇ.. ಸೀದಾ ಸತ್ಯನಾಪುರದತ್ತ ತೆರಳುವೆ; ದಂಡಿಗೆ ಅಲ್ಲೇ ಇರಲಿ. ನೀನು ನೇರ ಬಸರೂರ ದಾರಿ ಹಿಡಿ'ಎಂದರು. ಕಾಂತುಪೂಂಜನಿಗೆ ಸಾವಿರ ಗಿಂಡೆ ಹಾಲು ಕುಡಿದಂತಾಯ್ತು. ತೊಲಗಲಿ ಮಾರಿ-ಎಂದು ಗೋಣಲ್ಲಾಡಿಸಿದವನೇ ಅಜ್ಜಯ್ಯನ ಬೆನ್ನು ಮರೆಯಾಗುವ ವರೆಗೆ ದಾರಿ ಸಾಗಿಸಿದ ನಾಟಕವಾಡಿ ನೇರ ಸಾಗಿದ್ದು ಪೇಟೆಯ ಸೂಳೆಸಿದ್ದುವಿನ ಅಂತಃಪುರಕ್ಕೆ.

ಚಾವಡಿಯ ತೂಗುಯ್ಯಾಲೆಯಲ್ಲಿ ಕುಳಿತಿದ್ದ ಸೂಳೆಸಿದ್ದುವಿಗೆ ಕಾಂತುಪೂಂಜನ ಬರವಣಿಗೆ ಅಮಾವಾಸ್ಯೆಯ ಕತ್ತಲಿಗೆ ಬೆಳಕು ಸುರಿಸುವ ಚಂದ್ರಮ ಲಗ್ಗೆ ಇಟ್ಟಂತಾಯ್ತು. ಎಂದಿನಂತೆ ಹಾರಿಬಂದು ಆತನ ಕೈಯೊಳಗಿನ ಕಟ್ಟನ್ನು ಕಿತ್ತುಕೊಂಡು ಅಂತಃಪುರದೊಳಗೆ ನುಗ್ಗಿ ಬಾಗಿಲು ಹಾಕಿಕೊಂಡಳು. ಕಾಂತುಪೂಂಜ ಏನೋ ಹೇಳಬೇಕೆಂದವ, ಸಿದ್ದುವಿನ ಚಂದಕ್ಕೆ ಮಾರುಹೋದನೋ... ಆಕೆಯ ವೈಯ್ಯಾರಕ್ಕೆ ಬೇಸ್ತು ಬಿದ್ದನೋ.. ಏನೂ ಹೇಳಲಾಗದೆ ತೂಗುಯ್ಯಾಲೆಯಲ್ಲಿ ಮಲಗಿಕೊಂಡ. ಹಾಗೆ ಮಲಗಿಕೊಂಡವಗೆ ಕಣ್ಣು ಎಳೆದಂತಾಗಿ ಅಲ್ಲೇ ಕಣ್ಣಾಡಮಾಡಿದ್ದ. ಇದ್ದಕ್ಕಿದಂತೆ ಮೂಗಿಗೇನೋ ಸುವಾಸನೆ ಅಮರಿದಂತಾಗಿ ಕಣ್ರೆಪ್ಪೆ ಬಿಡಿಸಿ ನೋಡುತ್ತಾನೇನು.. ಸೂಳೆಸಿದ್ದು ಮಲ್ಲಿಗೆ ಮುಡಿದು.. ಬಯಕೆಯ ಸೀರೆ ಉಟ್ಟುಕೊಂಡು ಕಣ್ಣಲ್ಲೇ ಬಯಕೆ ಸೂಸುತ್ತಾ ಹಾಲು ಹಣ್ಣಿನ ಸೇವೆಗೆ ನಿಂತಿದ್ದಾಳೆ! ಕಾಂತುಪೂಂಜ ಮೈಮರೆತ. ಬಸುರಿಯ ಬಯಕೆಯ ಸೀರೆಯ ಮಡಿಕೆಟ್ಟಿತು-ಮಡಚಿದ್ದ ಸೀರೆಯ ಮಡಿಕೆ ಕೆಟ್ಟಿತ್ತು.

ಎಲ್ಲವೂ ಮುಗಿದ ಮೇಲೆ ಕಾಂತುಪೂಂಜನಿಗೆ ಸಿರಿಯ ಉರಿದಿಟ್ಟಿಯ ನೆನಪಾಯ್ತು! ಬಯಕೆ ಸೀರೆ ಬಿಚ್ಚಿಕೊಡೆಂದು ಸೂಳೆಸಿದ್ದುವಲ್ಲಿ ಕೇಳಿಕೊಂಡ. ಸಿದ್ದುವೂ ಸಿರಿಯ ಸತ್ಯತೆಯನ್ನು ನೆನಪಿಸಿಕೊಂಡು ತಟ್ಟನೆ ಸೀರೆ ಬಿಚ್ಚಿಕೊಟ್ಟಳು. ಸೀರೆ ಮತ್ತೆ ಪೊಟ್ಟಣ ಸೇರಿಕೊಂಡಿತು. ಕಾಂತುಪೂಂಜನ ಜತೆ ಬಸರೂರು ಅರಮನೆಯ ಚಾವಡಿಯೇರಿ ಕಲ್ಲ ಕಲೆಂಬಿಯೊಳಗೆ ಅಡಗಿ ಕೂತಿತು. ಹಾಗೆ ಕಲ್ಲ ಕಲೆಂಬಿಯೊಳಗೆ ಕೂತ ಆ ಸೀರೆ ಹೊರಬಂದಿದ್ದು ಸೀಮಂತದ ಮುಂಜಾನೆ, ಹೂ-ಸೀರೆ ಕೊಡುವ ಗಳಿಗೆಗೆ.

ಸೀಮಂತದ ದಿನವೂ ಬಂತು. ಸತ್ಯನಾಪುರದ ಅಜ್ಜಯ್ಯ ಬಂದು ಬಾಂಧವರೂಡಗೂಡಿ ಬಂದು ದಿಬ್ಬಣದಲ್ಲಿ ಬಸರೂರು ಆನೆ ಬಾಗಿಲು ಹೊಕ್ಕರು. ಚಾವಡಿಯ ತೂಗುಯ್ಯಾಲೆಯಲ್ಲಿ ವೀಳ್ಯೆ ಮೆಲ್ಲುತ್ತಾ ಕೂತಿದ್ದ ಕಾಂತುಪೂಂಜ ಅಜ್ಜಯ್ಯನೆದುರು ಮರ್ಯಾದೆಗಾದರೂ ಎದ್ದು ನಿಲ್ಲಲಿಲ್ಲ. ತಾಯಿ ಸಂಕರುವಿನ ಕೆಮ್ಮಿನ ದಮ್ಮು, ಉರಿದೃಷ್ಟಿಗೆ ಹೆದರಿ ಎದ್ದು ಹೊರ ನಡೆದ. ಸಿರಿ ಎಲ್ಲವನ್ನು ಮೌನವಾಗಿ ನುಂಗಿಕೊಂಡು ಸಹಿಸಿಕೊಂಡಳು. ದೂರದಿಂದ ಬಂದ ನೆಂಟರಿಗೆ ಬಸರೂರು ಅರಮನೆಯ ಬಂಧುಗಳು ಕೈಕಾಲಿಗೆ ನೀರು, ಕುಡಿಯಲು ಎಳನೀರ ಬಾಯರಿಕೆ, ಮೆಲ್ಲಲು ವೀಳ್ಯೆ-ಅಡಿಕೆ ನೀಡಿ ಸತ್ಕರಿಸಿದರು.

ಸೀಮಂತದ ಗಳಿಗೆ ಸಮೀಪಿಸಿತು. ಬಸುರಿ ಮಗಳಿಗೆ ಸೀಮಂತದ ಹೂ ಸೀರೆ ಕೊಡುವ ಗಳಿಗೆ ಕಳೆಯಿತೆಂದು ಅಜ್ಜಯ್ಯ ಅವಸರಿಸುವುದರೊಳಗೆ ಸಂಕರುಪೂಂಜೆದಿ, ಬೆಳ್ಳಿಯ ಹರಿವಾಣದಲ್ಲಿ ಹೂ-ಸೀರೆಯನ್ನಿಟ್ಟು ತಂದು ಸಂಪ್ರದಾಯದಂತೆ ಬಸುರಿಯನ್ನು ಕೂಗಿ ಕರೆದಳು. ಮೂಡುಮುಖ ಹಾಕಿ ಹೊರಬಂದವಳೇ ಸಿರಿ ಅತ್ತೆಯೆದುರು ನಿಂತಳಾದರೂ ಹರಿವಾಣದತ್ತ ಕೈಯೊಡ್ಡಲಿಲ್ಲ. ನೆರೆದ ಸಭೆ ಬಾಯರಳಿಸಿ ಈ ಮೌನ ದೃಶ್ಯವನ್ನು

ಕಣ್ಣುಮಿಟುಕಿಸದೆ ದಿಟ್ಟಿಸಿತು. ಅಜ್ಜಯ್ಯನಿಗೆ ಉಸಿರುಕಟ್ಟಿಸುವ ಸನ್ನಿವೇಶವದು; ಅತ್ತೆ ಸಂಕರುಪೂಂಜೆದಿಗೂ ಕೂಡಾ. ಅತ್ತೆ, ಸಿರಿಯನ್ನು ಇನ್ನಿಲ್ಲದಂತೆ 'ಹೂ-ಸೀರೆ' ಪಡೆಯುವಂತೆ ಒತ್ತಾಯಿಸಿದಳು; ಅಜ್ಜಯ್ಯನೂ 'ನನ್ನ ಮಾನ ಕಳೆಯಬೇಡ ಸತ್ಯದ ಮಗಳೇ' ಎಂದು ಭಿನ್ನವಿಸಿಕೊಂಡರು. ಆದರೂ ಸಿರಿ ಅತ್ತೆಯ ಬೆಳ್ಳಿಯ ಹರಿವಾಣಕ್ಕೆ ಕೈಯೊಡ್ಡಲಿಲ್ಲ. ಬೆರ್ಮಾಳ್ವರು ಎಲ್ಲೋ ಸತ್ಯದ ಮರೆಯಾಗಿದೆ, ಅಸತ್ಯದ ಕೈ ಮೇಲಾಗಿದೆ, ಅನ್ಯಾಯ ಏನು ನಡೆಯಿತು ಹೇಳು ಮಗಳೇ-ಎಂದು ಮತ್ತೆ ಕೇಳಿಕೊಂಡರು.

'ಪೇಟೆಯ ಸೂಳೆಸಿದ್ದು ಉಟ್ಟುಬಿಟ್ಟ ಸೀರೆಯನ್ನು ಈ ಸತ್ಯದ ಸಿರಿ ಉಡುವುದಕ್ಕೆ ಸಾಧ್ಯವೇ ಅಜ್ಜಯ್ಯ...' ಎಂದು ಕಣ್ಣೀರಿಳಿಸುತ್ತಲೇ ಹರಿವಾಣದಿಂದ ಆ ಸೀರೆಯನ್ನೆತ್ತಿಕೊಂಡು ತನ್ನ ತವರುಮನೆಯ ಚಾಕರಿಯ ಹೆಣ್ಣುದಾರುವತ್ತ ಎಸೆದವಳೇ, 'ದಾರು ಆ ಮಡಿಕೆಟ್ಟ ಸೀರೆ ನಿನ್ನಲ್ಲಿರಲಿ. ನನ್ನ ಮಗುವಿನ ತೊಟ್ಟಿಲು ಹೊರುವಾಗ ನಿನ್ನ ತಲೆಗೆ ಸಿಂಬಿಯಾಗಿ ಬಳಕೆಯಾಗಲಿ'-ಎಂದು ಹೂಂಕರಿಸಿದವಳೇ ಹರಿವಾಣದಲ್ಲಿದ್ದ ಹೂವನ್ನೆತ್ತಿಕೊಂಡು ಮುಡಿಗೇರಿಸಿ, ಈ ಉಟ್ಟ ಸೀರೆಯಲ್ಲೇ ನನಗೆ ಬಯಕೆ ಬಡಿಸಿ ಎಂದು ಒತ್ತಾಯಿಸಿದಳು'.

ಅಜ್ಜಯ್ಯನಿಗೆ ಎಲ್ಲವೂ ಸ್ಪಷ್ಟವಾಗಿತ್ತು. ಅತ್ತೆ ಸಂಕರುಪೂಂಜೆದಿಗೂ ಕೂಡಾ. ಅದರೇನು ನೆರೆದ ಮಂದಿ ಮುಂದೆ ಹೀಗೆ ಮುಖ-ಮೂಗುತಿ ಮುಚ್ಚಿಕೊಳ್ಳುವಂತೆ ಮುಖಭಂಗ ಮಾಡುವುದು ತರವೇ'-ಎಂದು ಕಾವಿಗೆ ಕೂತ ಹೇಂಟೆಯಂತೆ ಸಿಡಿಮಿಡಿಗುಡುತ್ತಾ ಅಡುಗೆ ಮನೆ ಹೊಕ್ಕ ಅತ್ತೆ ಮತ್ತೆ ಹೊರ ಕಾಲಿಡಲಿಲ್ಲ. ಕಾಂತುಪೂಂಜನೂ 'ಎಲ್ಲೈ ಅಹಂಕಾರ ತುಂಬಿದ ಹೆಣ್ಣೇ...ನಿನ್ನ ದರ್ಪ ಇಳಿಸುವ ಕಾಲಕ್ಕೆ ಇಳಿಸ್ಯೇನು...'ಎಂದು ಹಲ್ಲು ಮಸೆಯುತ್ತಾ ಅಡಿಕೆ ಹೋಳು ಮೆದ್ದನು.

ಸಿರಿ ಅಜ್ಜಯ್ಯನ ಒತ್ತಾಯಕ್ಕೆ ಮಣಿದು, ಸತ್ಯನಾಪುರದ ಮುತ್ತೈದೆಯರಿಂದ ಸಿಂಗರಿಸಿಕೊಂಡಳು. ಮದುವೆ ಸೀರೆಯನ್ನುಟ್ಟು ಐದು ಜಾತಿಯ ಹೂಗಳನ್ನು ಮುಡಿಗೇರಿಸಿಕೊಂಡು ಊರ ಮಲ್ಲಿಗೆಯ ಜಲ್ಲಿ ಇಳಿಸಿಕೊಂಡು ಅಜ್ಜಯ್ಯನ ಮನೆಯಿಂದ ತಂದಿರುವ ಒಡವೆಗಳನ್ನಷ್ಟೇ ಹಾಕಿಕೊಂಡು ಹೊರಬಂದಳು. ಬಸುರಿ ಸಿರಿಯ ಮೈಸಿರಿ ನೋಡಲು ಒಬ್ಬರಿಗೆ ಹತ್ತತ್ತು ಕಣ್ಣು ಬೇಕೆನಿಸಿತು.

ಇನ್ನು ಬಸುರಿಗೆ ಬಡಿಸುವ ಶಾಸ್ತ್ರ. ಕ್ಷಣ ಉರುಳುತ್ತಿದೆ. ಆದರೂ ಸಂಕರು ಪೂಂಜೆದಿಯ ತಲೆ ಕಾಣಿಸುತ್ತಿಲ್ಲ. ಅಜ್ಜಯ್ಯ ಬೆರ್ಮಾಳ್ವರು ಸಿಹಿತಿಂಡಿ ಕರಿಯುತ್ತಿದ್ದ ಅಡುಗೆ ಮನೆಯೊಳಗೇ ಹೊಕ್ಕು ಸಂಕರುವಿನ ಮನ ಒಲಿಸಿ ಹೊರ ಕರೆತಂದರು. ಸಂಕರು ಪೂಂಜೆದಿ ಸಂಪ್ರದಾಯದಂತೆ ಬಸುರಿಗೆ ಗೆರಸೆ ತುಂಬಾ ಸಿಹಿತಿಂಡಿಯನ್ನು ಬಡಿಸಿ, ಬಯಕೆಯ ಊಟವನ್ನೂ ಬಡಿಸಿದಳು. ಸಿರಿ, ಅಜ್ಜಯ್ಯನ ಒತ್ತಾಯಕ್ಕೆ ಚಕ್ಕುಲಿಯ ತುಂಡು ಮುರಿದಳೇ ವಿನಾ ಏನನ್ನೂ ಉಣ್ಣಲಿಲ್ಲ; ಅತ್ತೆಯನ್ನು ಕಣ್ಣೆತ್ತಿಯೂ ನೋಡಲಿಲ್ಲ.

ಬಂದ ನೆಂಟರ, ಊರುಮಂದಿಯ ಊಟೋಪಚಾರ ನಡೆದೊಡನೆ ಸತ್ಯನಾಪುರದ ದಿಬ್ಬಣ ಹೊರಟಿತು. ಬಸುರಿ ದಂಡಿಗೆ ಏರುವ ಮುನ್ನ ಅತ್ತೆ-ಗಂಡನ ಕಾಲು ಮುಟ್ಟಿ ನಮಸ್ಕರಿಸುವುದು ಸಂಪ್ರದಾಯ. ಸಿರಿಗೆ ಅವರಿಬ್ಬರ ಕಾಲು ಮುಟ್ಟುವುದಕ್ಕೂ ಹೇಸಿಗೆ; ಕಾಂತುಪೂಂಜನಿಗೆ ಹೆಂಡತಿಯನ್ನು ಸೀಳಿ ಹಾಕುವಷ್ಟು ಸಿಟ್ಟು-ಸಂಕರುವಿಗೆ ಬಯಕೆ ಊಟ ಮುಟ್ಟದ ಸೊಸೆ ಸಿರಿಯ ಮೇಲೆ ಪಿತ್ತ ನೆತ್ತಿಗೇರಿದೆ. ಪರಿಸ್ಥಿತಿ ಹೀಗಿರುವಾಗ ಅತ್ತೆ-ಗಂಡ ಇಬ್ಬರೂ ಓರೆಕೋರೆಯಲ್ಲಿ ನಿಂತು ಬೀಳ್ಕೊಡುವುದು ಸಿರಿಯ ಗಮನಕ್ಕೂ ಬಂದಿದೆ. ಸಿರಿ ಅಜ್ಜಯ್ಯನ ಬೇಡಿಕೆಯ ಮಾತನ್ನು ಚಿತ್ತಕ್ಕೇರಿಸಿಕೊಳ್ಳದೆ ನೇರ ದಂಡಿಗೆ ಏರಿಕುಳಿತವಳು ದಂಡಿಗೆ ಹೊತ್ತ ಬೋವಿಗಳಿಗೆ ಮುಂದೆ ನಡೆಯುವಂತೆ ತಾಕೀತು ಮಾಡಿದಳು. ದಿಬ್ಬಣ ಸತ್ಯನಾಪುರದ ಅರಮನೆ ಹೊಕ್ಕಿತು.

ಸತ್ಯನಾಪುರದ ಅರಮನೆಗೆ ಹುಣ್ಣಿಮೆ ಬಂದಂತಾಯ್ತು. ಎಂಬತ್ತು ವರುಷದ ಅಜ್ಜಯ್ಯ ಹದಿನೆಂಟರ ಹರೆಯ ಉಟ್ಟು ಓಡಾಡಿದರು. ಹಾಗೇ ತಿಂಗಳೆರಡು ಕಳೆದವು. ಸಿರಿ ಒಂದು ದಿನ ಮಂಗಳವಾರ-ಅಮಾವಾಸ್ಯೆಯ ದಿನ ಸುಖವಾಗಿ ಮೈಕಳೆದಳು. ಮಗು ಗಂಡು. ತಾಯಿಯ ಪಡಿಯಚ್ಚು.

ಅಜ್ಜಯ್ಯನಿಗೆ ಹೆರಿಗೆಯ ಸುದ್ದಿ ತಲುಪಿತು. ಅಮಾವಾಸ್ಯೆಯಂದೂ ಬೆಳದಿಂಗಳು ಹರಿದು ಬಂದಂತಾಯ್ತು. ಅಜ್ಜಯ್ಯ ಏಳರ-ಏಳನಮೆ(ಸೂತಕ) ಮುಗಿವವರೆಗೆ ಮಗು ನೋಡುವಂತಿಲ್ಲ. ಹುಟ್ಟಿದ ಏಳನೇ ದಿನಕ್ಕೆ ಸೂತಕ ಕಳೆದೊಡನೆ ಅಜ್ಜಯ್ಯ ಮಗುವಿನ ಹುಟ್ಟಿದ ರಾಶಿ-ನಕ್ಷತ್ರ ಫಲಕೇಳಲು ಜೋಯಿಸ ಭಟ್ಟರಲ್ಲಿಗೆ ತೆರಳಿದರು. ಮಗುವಿನ ರಾಶಿ ಓದಿ ಭಟ್ಟರ ದನಿ ಅದುರಿತು, ಮುಖ ಬಾಡಿತು. ಆದರೂ ಹೇಳಲೇ ಬೇಕಲ್ಲವೆ? ಮಗುವಿಗೆ ನಕ್ಷತ್ರದಲ್ಲಿ ಬಂದ ಹೆಸರು ಕುಮಾರ ಕೋಟಿಪೂಂಜ. ಧರೆಗೆ ಹೆಸರು ತರುವವನು. ಆದರೆ ಹುಟ್ಟಿದ ಮಗುವಿನ ಮುಖ ಅಜ್ಜ ನೋಡುವಂತಿಲ್ಲ, ನೋಡಿದಲ್ಲಿ ಅಜ್ಜನಿಗೆ ಮರಣ ಖಂಡಿತ. ತಾಯಿಗೆ ದೇಶಾಂತರ ಬದುಕು ಪ್ರಾಪ್ತಿ'. ಜೋಯಿಸ ಭಟ್ಟರು ಆತಂಕದಿಂದಲೇ ಜಾತಕ ಓದಿ ಅಜ್ಜಯ್ಯನ ಮುಖ ದಿಟ್ಟಿಸಿದರು.

ಅಜ್ಜ ಬೆರ್ಮೆ ಆಳ್ವರೇ ಭಟ್ಟರ ಗೊಂದಲದ ಮುಖಕ್ಕೆ ಸಮಾಧಾನ ಹೇಳಿದರು. 'ಇಂದೋ ನಾಳೆಯೋ ಉರುಳುವ ದೇಹವಿದು. ನನಗೆಂತದ್ದೂ ಭಯವಿಲ್ಲ. ಈ ಕುಮಾರ ತಾಯಿಯನ್ನು ಸಂಬಾಳಿಸಿ ಈ ಅರಮನೆಗೆ ಹೆಸರು ತಂದರೆ ಸಾಕು'ಎಂದು ಹೇಳುತ್ತಲೇ ಭಟ್ಟರ ಅಂಗಳವಿಳಿದು ಅರಮನೆಯ ಚಾವಡಿಯೇರಿ ಸಿರಿಗೂ ಅದೇ ರೀತಿ ಸಮಾಧಾನಿಸಿದರು.

ಮಗುವಿನ ನಕ್ಷತ್ರಫಲ ಕೇಳಿ ಸಿರಿ ಇನ್ನಿಲ್ಲದಂತೆ ದುಃಖಿಸಿದಳು. ಅಜ್ಜಯ್ಯನಿಂದ ಮಗುವನ್ನು ದೂರವೇ ಇರಿಸಿದಳು. ತನ್ನ ಜೀವದ ಜೀವ ಅಜ್ಜಯ್ಯನ ಜೀವಕ್ಕೆ ಸಂಚಕಾರ ಬಂದರೆ ಎಂಬ ಭಯ ಆಕೆಗೆ.

ಬಾಣಂತಿಗೆ ನಲವತ್ತನೇ ದಿನದಲ್ಲಿ ಬಾಣಂತಿಯ 'ತಿಂಗಳು' ಕಳೆಯುವ ಶಾಸ್ತ್ರಕ್ಕೆ ಸಂಪ್ರದಾಯದಂತೆ ಬಸರೂರಿನ ಅತ್ತೆ ಮನೆಗೆ ಹೇಳಿಕೆ ಹೋಯ್ತು. ಕಾಂತುಪೂಂಜ ಅದು ತನಗೆ ಹುಟ್ಟಿದ ಮಗನೇ ಅಲ್ಲವೆಂಬಂತೆ ಓಲೆ ಕೊಂಡೋಯ್ದವರನ್ನು ಬೈದಟ್ಟಿದ್ದ. ಸಂಕರುಪೂಂಜೆದಿಯೂ ಮಗನ ವರ್ತನೆಯನ್ನು ಖಂಡಿಸಲಿಲ್ಲ. ಸುಮ್ಮನಿದ್ದಳು.

ತಿಂಗಳು ಮೂರು ಕಳೆಯಿತು. ಮಗುವಿನ ಕೇಕೇ.. ಕಾ..ಕೂ..ಅರಮನೆಯ ಗೋಡೆಗಳಲ್ಲಿ ಪ್ರತಿಧ್ವನಿಸ ತೊಡಗಿದಾಗ ಅಜ್ಜಯ್ಯನಿಗಂತೂ ಮಗುವಿನ ಮುಖ ನೋಡುವ ತವಕ. ಆದರೆ ಜೋಯಿಸರ ಮಾತು ನೆನಪಾದೊಡನೆ ಆ ಆಸೆಯನ್ನು ಅದುಮಿಡುತ್ತಿದ್ದರು. ಕಣ್ಣೀರ ಹನಿ ಉರುಳಿಸುತ್ತಿದ್ದರು.

ಒಂದು ದಿನ ಸಿರಿ ಮತ್ತೆ ಮುಟ್ಟಾದಳು. ನಾಕನೇ ನೀರು ಹಾಕಿಕೊಂಡು ಸುದ್ಧವಾಗಲು ಮುತ್ತಿನ ಕೆರೆಗೆ ದಾರುವಿನ ಜತೆ ಹೊರಟಳು. ಸಿರಿ ಮುತ್ತಿನ ಕೆರೆಯಲ್ಲಿ ಮುಳುಗೆದ್ದು ಮಿಂದು ಬರುವುದರೊಳಗೆ ತೊಟ್ಟಿಲಲ್ಲಿ ಮಲಗಿದ್ದ ಮಗುವಿಗೆ ಎಚ್ಚರಿಕೆಯಾಗಿ ಹಸಿವಿನಿಂದ ಅಳತೊಡಗಿತ್ತು. ಅಜ್ಜಯ್ಯ ಅಲ್ಲೇ ಚಾವಡಿಯ ಉಯ್ಯಾಲೆಯಲ್ಲಿ ಕುಳಿತವರಿಗೆ ಮಗುವಿನ ಕಿರುಚಾಟ ಕೇಳಿ ಗಾಬರಿಗೊಂಡರು. ಹಾಗೆ ನೇರ ಬಾಣಂತಿ ಕೋಣೆಗೆ ಬಂದು ನೋಡುತ್ತಾರೇನು..? ಚಂದ್ರ ಬಿಂಬವೇ ತೊಟ್ಟಿಲೊಳಗಿದೆ. ಜೋಯಿಸರಂದ ಮಾತು ಅವರ ಚಿತ್ತದಿಂದ ಕಿತ್ತು ಹೋಗಿತ್ತೇನೊ...? ಮಗುವನ್ನು ತೊಟ್ಟಿಲಿಂದ ಎತ್ತಿಕೊಂಡವರೇ ಬಾಣಂತಿ ಕೋಣೆಯಿಂದ ಹೊರಬರಬೇಕೆನ್ನುವಷ್ಟರಲ್ಲಿ ಹೊಸ್ತಿಲು ಎಡವಿ ಮಗುಚಿಕೊಂಡರು. ಹಾಗೆ ಬಿದ್ದ ಅಜ್ಜಯ್ಯ ಮತ್ತೆ ಮೇಲೇಳಲಿಲ್ಲ; ಸಿರಿ ಬರುವಷ್ಟರಲ್ಲಿ ಜೀವ ಬಿಟ್ಟು ಕೈಲಾಸ ಸಂದಿದ್ದರು. ಮಗು ಕುಮಾರ ಮಾತ್ರ ಅಜ್ಜಯ್ಯನ ತೆಕ್ಕೆಯೊಳಗೆ ಹಾಯಾಗಿತ್ತು.

ಮಗುವನ್ನೆತ್ತಿಕೊಂಡು ಸಿರಿ ಇನ್ನಿಲ್ಲದಂತೆ ದುಃಖಿಸಿದಳು. ಅಜ್ಜಯ್ಯನ ಮರಣವಾರ್ತೆಯನ್ನು ಸಂಪ್ರದಾಯದಂತೆ ಬಸರೂರಿನ ಅರಮನೆಗೆ ಕಳುಹಿಸಿ ಗಂಡನ ಮನೆಯವರನ್ನು ಎದುರು ನೋಡುತ್ತಿದ್ದರೆ...ಗೂಬೆಯಂತೆ ಬಂದು ವಕ್ಕರಿಸಿದವ ಅಜ್ಜಯ್ಯನ ದೂರದ ಅಳಿಯ ಸೂಡದ ಸಂಕರಾಳ್ವ ಎಂಬಾತ. ಈ ಹಿಂದೆ ಸತ್ಯನಾಪುರದ ಅರಮನೆಯ ಭೂಮಿಯಲ್ಲಿ ಒಂದೆರಡು ವರುಷ ಸಾಗುವಳಿ ಮಾಡಿಸಿ ಅಜ್ಜಯ್ಯನ ಸಾಕಷ್ಟು ಆಸ್ತಿಯನ್ನು ಕರಗಿಸಿ ಹೋದಾತ ಎಂಬುದು ಸಿರಿಗೆ ತಿಳಿದಿದೆ. ಅರಮನೆಯ ಸುಖ ದುಃಖಕ್ಕೆ ಎಂದೂ ಒದಗಿ ಬರದ ಈ ಅಳಿಯ ಇದೀಗ ಇದ್ದಕ್ಕಿದ್ದಂತೆ ಬಂದು ಅಜ್ಜಯ್ಯನ ಆಸ್ತಿಗೆ ವಾರಸುದಾರನೆಂದು ಹಕ್ಕುಮಂಡಿಸಿ ವಾದಿಸಿದಾಗ ಪಿತ್ತ ಕೆರಳಿತ್ತು. ಸಂಕರಾಳ್ವ ಬಂದವನೇ ಒಂಟಿ ಹೆಣ್ಣು ಸಿರಿಯಲ್ಲಿ ಆಸ್ತಿಯ ಒಡೆತನ ಕೇಳಿದ್ದಲ್ಲದೆ ಅಜ್ಜಯ್ಯನ ಶವಸಂಸ್ಕಾರಕ್ಕೆ ಅವಕಾಶ ಕೊಡುವುದಿಲ್ಲವೆಂದು ಬೆದರಿಕೆ ಹಾಕಿದಾಗ ಸಿರಿ ರಣಚಂಡಿಯಾದಳು.

'ಗಂಡು ದಿಕ್ಕಿಲ್ಲದ ಹೆಣ್ಣೆಂದು ದರ್ಪ ತೋರಿಸುತ್ತಿಯೇನೋ... ನೀಚಾ... ಇದೇ ಗೆಜ್ಜೆಕತ್ತಿಯಿಂದ ನಿನ್ನ ಎದೆ ಸೀಳಿ ರಕ್ತಕಾರಿಸಿಯೇನು...'ಎಂದು ಕಣ್ಣು ಸಿಟ್ಟಿನ ಕೆಂಡದುಂಡೆ ಉರುಳಿಸಿ ಸಿರಿ ಎದ್ದುನಿಂತಾಗ ಸಂಕರಾಳ್ವ ಗದ್ದೆಬೈಲು ಹಿಡಿದು ಪರಾರಿಯಾದ. ಕಾಂತುಪೂಂಜ ಮರಣ ತೆಗೆಯಲು ಬರಲಾರೆ ಎಂದು ಮರು ಓಲೆ ಕಳುಹಿಸಿದಾಗ ತಾನೇ ಅಂತ್ಯಸಂಸ್ಕಾರ ಕಾರ್ಯಕ್ಕೆ ತೊಡಗಿದಳು. ಸಿರಿ ಧಲಗೆಡಲಿಲ್ಲ. ಅರಮನೆಯ ಎದುರಲ್ಲೇ ಒಕ್ಕಲ ಮಕ್ಕಳ ಸಹಕಾರದಲ್ಲಿ ಕಾಷ್ಠ ಏರಿಸಿದಳು.. ಅಜ್ಜಯ್ಯನ ಹೆಣವನ್ನು ಗಂಡು ಮಗನಂತೆ ತಾನೊಬ್ಬಳೇ ಹೊತ್ತು ತಂದು ಚಿತೆಗಿಟ್ಟಳು. ಸಂಸ್ಕಾರ ನಡೆಸಿ ಮಿಂದು ಬಂದು-ಹತ್ತಿರದವರಿಗೆಲ್ಲ ದುಃಖದ ಗಂಜಿ ಉಣಿಸಿ ತಾನೂ ಉಂಡಳು.

ಅಂತ್ಯಸಂಸ್ಕಾರ ನಡೆದು ನಾಕೇ ನಾಕು ದಿನ ಕಳೆದಿದೆಯಷ್ಟೆ. ಸಿರಿಯಿಂದ ಅವಮಾನಿತನಾಗಿ ಕಾಲಿಗೆ ಬುದ್ಧಿ ಹೇಳಿದ್ದ ಸಂಕರಾಳ್ವನ ಚತುರೋಪಾಯಗಳ ಆಟ ಮತ್ತೆ ಶುರುವಾಗಿತ್ತು. ಸತ್ಯನಾಪುರದ ಜಾತಿ ಮಂದಿಯನ್ನು ಮಾತ್ರವಲ್ಲ, ಊರಿಗೆ ನ್ಯಾಯ ಹೇಳುವ ಹತ್ತು ಸಮಸ್ತರಿರುವ 'ಪತ್ತೇರಿ ಕೂಟ'ದ ಹತ್ತೂ ಮಂದಿಯನ್ನು ಹಣದ ಗಂಟು ಕೊಟ್ಟು ಖರೀದಿಸಿಕೊಂಡು ನ್ಯಾಯ ಪಂಚಾತಿಕೆಯ ಸಭೆ ಕರೆಸಲು ಸಫಲನಾದ. ಆ ಸಭೆಗೆ ಗೆಳೆಯ ಕಾಂತುಪೂಂಜನನ್ನು ಕರೆಸಿ ತನ್ನ ಬಲ ಮಗ್ಗುಲಲ್ಲಿ ಕುಳ್ಳಿರಿಸಿಕೊಂಡ. ಪತ್ತೇರಿ ಕೂಟದ ಓಲೆಗೆ ಸಿರಿಗೆ ತಲುಪಿತು. ಊರಿನ ನ್ಯಾಯಕೂಟಕ್ಕೆ ಹೆಣ್ಣುಮಕ್ಕಳು ಹೋಗುವುದು ಆ ಊರಿನ ಪದ್ಧತಿಯಲ್ಲ. ಮುಜುಗರ ಪಟ್ಟುಕೊಂಡೇ ಸಿರಿ ನ್ಯಾಯಕೂಟ ಹೊಕ್ಕಳು. ಊರಿನ ಹತ್ತು ಸಮಸ್ತರು ಸಿರಿಗೆ, ಹೆಣ್ಣಿಗಿರುವ ಆರ್ಥಿಕ ಹಾಗೂ ನೈತಿಕ ಚೌಕಟ್ಟಿನ ಬಗ್ಗೆ ತಿಳಿಯ ಹೇಳಿದಾಗ ಸಿರಿ ಉರಿದೆದ್ದಳು. ಆದರೂ ಸಂಭಾಳಿಸಿಕೊಂಡು ಕೂಟದ ಮುಂದಿನ ತೀರ್ಮಾನವನ್ನು ಎದುರು ನೋಡಿದಳು. 'ಸತ್ಯನಾಪುರದ ಅರಮನೆಯ ಗಡಿಯನ್ನು(ಯಜಮಾನಿಕೆ) ಗಂಡೊಬ್ಬನಿಗೆ ಕೊಡಬೇಕಾದುದು ನ್ಯಾಯ. ಆದ್ದರಿಂದ ಅರಮನೆಯ ಗಡಿ ಸಂಕರಾಳ್ವನಿಗೆ. ಅಡುಗೆ ಮನೆಯ ಪಟ್ಟ ನಿನಗೆ'ಎಂದು ಪತ್ತೇರಿ ಕೂಟ ನ್ಯಾಯ ಹೇಳಿದಾಗ ಗಂಡ ಕಾಂತುಪುಂಜನೇ ಎದ್ದು ನಿಂತು ಅದನ್ನು ಸಮರ್ಥಿಸಿದ್ದ. ಸಿರಿ ಏಳೇಳು ಲೋಕದ ಸಿಟ್ಟಿನ ಉರಿ ಕಾರಿದಳು.

ಇಡಿಯ ಗಂಡು ಸಂಕುಲವೇ ಜತೆಗೆ ಕೈಹಿಡಿದ ಗಂಡನೂ ಹೆಣ್ಣೊಬ್ಬಳಿಗೆ ಮಾಡಿದ ಅನ್ಯಾಯವನ್ನು ಸಿರಿಗೆ ಸಹಿಸಲಾಗಲಿಲ್ಲ. ತಲ್ಲಣದ ಗಳಿಗೆಯಲ್ಲೇ ವ್ಯಕ್ತಿ ನಿಜವಾಗುತ್ತಾನೆ-ಎನ್ನುವಂತೆ ಸಿರಿ ಅದೇ ನ್ಯಾಯಕೂಟದಲ್ಲಿ ಕಾಂತಪೂಂಜನಲ್ಲಿ ತನಗೆ ಬರ(ವಿಚ್ಛೇದನೆ)ಕೊಡುವಂತೆ ಒತ್ತಾಯಿಸಿದಳು. ಕಾಂತುಪೂಂಜ 'ಅದೆಲ್ಲ ಏನಿದ್ದರೂ ಬಸರೂರ ಅರಮನೆಯಲ್ಲಿ ಇತ್ಯರ್ಥವಾಗಲಿ'ಎಂದಾಕ್ಷಣ ಸಿರಿ ಕ್ಷಣ ಮಾತ್ರವೂ ತಡಮಾಡದೆ ತನ್ನ ಸತ್ಯನಾಪುರದ ಅರಮನೆ ಹೊಕ್ಕು, ನಿಂತಕಾಲಲ್ಲೇ-ತೊಟ್ಟ ಸೀರೆಯಲ್ಲೇ ಮಗು ಕುಮಾರನನ್ನು ಎತ್ತಿ ಹೊರತಂದು, ಕೆಲಸದಾಳು ದಾರುವಿನ ತಲೆಗೆ ಮಗನ ತೊಟ್ಟಿಲು ಹೊರಿಸಿ ಬಸರೂರ ಕಡೆ ಹೊರಡಲನುವಾದಳು.

ತನ್ನ ಬಯಕೆಯ ಸೀರೆಯನ್ನು ಸಿಂಬಿ ಸುತ್ತಿ ದಾರುವಿನ ತಲೆಯಲ್ಲಿಟ್ಟು ತೊಟ್ಟಿಲು ಹೊರೆಸಿದ ಸಿರಿ, ಸತ್ಯನಾಪುರದ ಅರಮನೆಯೆದುರು ನಿಂತು 'ಈ ಸತ್ಯನಾಪುರದ ಮನೆ, ಬಂಜರು ಬೀಳಲಿ, ಅರಮನೆ ಸುಟ್ಟುಬೂದಿಯಾಗಲಿ...ಸಂಕರಾಳ್ವನಂತಾ ಸಮಯಸಾಧಕರಿಗೆ ಈ ಪುಣ್ಯಭೂಮಿಯಲ್ಲಿ ಎಂದೆಂದೂ ನೆಲೆಸಿಕ್ಕದಿರಲಿ..'ಎಂದು ಶಾಪವಿಟ್ಟಳು. ಮತ್ತೆ ಹಿಂದಿರುಗಿ ನೋಡದೆ ಬೆರ್ಮಸ್ಥಾನದ ಕುಲಬೆರ್ಮರ ಅಪ್ಪಣೆ ಪಡೆಯಲು ಲಂಕೆ ಲೋಕನಾಡಿನತ್ತ ನಡೆದಳು.

ಅಲ್ಲಿಂದ ಸತ್ಯಲೋಕದ ಸಿರಿ ನೇರ ನಡೆದದ್ದು ಬಸರೂರ ಅರಮನೆಯತ್ತ. ಸಿರಿ ಅರಮನೆ ಕಡೆ ಬರುವುದಕ್ಕೂ ಕಾಂತುಪೂಂಜ ಪತ್ತೇರಿಕೂಟದಿಂದ ಮರಳಿ ಅರಮನೆ ಹೊಕ್ಕುವುದಕ್ಕೂ ಸರಿಹೋಯ್ತು. ಸಂಕರುಪೂಂಜೆದಿ ಮೊಮ್ಮಗನ ನೋಡಲು ಹೆಣ್ಣಿಗೆ ಸಹಜವಾದ ಕಾತರದಿಂದ ಓಡಿಬಂದಾಗ ಸಿರಿ ತನ್ನ ಉರಿದಿಟ್ಟ ಬೀರಿಯೇ ತಡೆದು ನಿಲ್ಲಿಸಿದ್ದಳು. ಕಾಂತುಪೂಂಜನೇ ತಾಯಿಯನ್ನು ಅಬ್ಬರಿಸಿ ಒಳಕಳುಹಿಸಿ, ಬಂದ ಕಾರಣವೇನೆಂದು ಸಿರಿಯನ್ನು ಕೇಳಿದ್ದ.

'ನಿನ್ನ ಲಜ್ಜೆಗೆಟ್ಟ ಮುಖವನ್ನು ನೋಡ ಬಂದಿದ್ದಲ್ಲ. ಮದುವೆಯ ನಂಟನ್ನು ಬಿಡಿಸಿಕೊಳ್ಳಲು ಬಂದಿರುವೆ. ಕೊಡು ಬರ... ಕಟ್ಟು ಬತ್ತ್ (ವಿಚ್ಛೇದನ ದಂಡ)' ಎಂದು ಸಿರಿ ಕೆಂಡ ಕಾರಿದೊಡನೆ ಕಾಂತುಪೂಂಜ..

'ಛೀ, ಹುಣೆಯಿಲ್ಲದ ಗದ್ದೆಯಂತಿರುವ ಒಂಟಿ ಸೊಕ್ಕಿನ ಹೆಣ್ಣೇ..., ಬರ ಕೊಡಬೇಕಾದರೆ ನಿನ್ನ ತವರಿನಿಂದ ಗಂಡು ಕುಡಿಯೊಂದನ್ನು ಕರೆದು ತಾ...' ಎಂದು ಹೀಯಾಳಿಸಿದೊಡನೆ ಸಿರಿ ಕೆರಳಿದ ಸಿಂಹಿಣಿಯಂತಾಗಿ...

'ಈ ನನ್ನ ಕರುಳ ಕುಡಿಯೇ ನನ್ನನ್ನು ಕಾಯುವ ಗಂಡು ಕುಡಿ..., ಕೊಡು ಬೇಗನೆ ವಿಚ್ಛೇದನ...' ಎಂದು ಮಗನನ್ನೆತ್ತಿ ತೋರಿಸಿದಳು.

ಕಾಂತುಪೂಂಜ ನಾನಾ ಅಡ್ಡಿ ಕಾರಣವನ್ನೊಡ್ಡಿ 'ಬರ' ಹೇಳುವುದನ್ನು ತಪ್ಪಿಸುತ್ತಿದ್ದಂತೆ ವಾದದ ಸರಪಣಿ ಬೆಳೆಯಿತು. ಸಿರಿಗೆ ತಾಳ್ಮೆ ತಪ್ಪಿದಂತಾಗಿ ಬಸರೂರ ಅರಮನೆಯ ಮೆಟ್ಟಿಲು ಹತ್ತಿ, ಬಾಗಿಲ ದಾರಂದಕ್ಕೆ ಕೈಗಳನ್ನಪ್ಪಳಿಸಿ ಕೈ ಬಳೆಗಳನ್ನು ಒಡೆದಳು, ಮೂಗಿನ ಮೂಗುತಿ ಕಿತ್ತು ಗಂಡನ ಮೂತಿಗೆಸೆದಳು, ಕೊರಳ ಕರಿಮಣಿ ತುಂಡರಿಸಿ ಅರಮನೆಯ ಚಾವಡಿಗೆಸೆದಳು. ಇನ್ನು ಮುಂದಾದರೂ ಯಾವುದೇ ಹೆಣ್ಣಿಗೆ ಇಂತಾ ಹೀನ-ದುಷ್ಟ ಗಂಡನೊಡನೆ ಬಾಳುವ ಗೋಳು ತಪ್ಪಬೇಕು. ಹೆಣ್ಣಿಗೂ ಎರಡನೇ ಮದುವೆಯಾಗುವ ಕಟ್ಟು ಬರಬೇಕು'-ಎಂದೊಡನೆ ಕೆರಳಿದ ಕಾಂತುಪೂಂಜ-ಎಲೇ ಮಾನಗೆಟ್ಟ ಹೆಣ್ಣೇ..ನಿನಗೆ ಬರ ಹೇಳಲೇ ಬೇಕೇ..? ಕೇಳು. ಇಂದು ಸೂರ್ಯ ಕಂತುವುದರೊಳಗೆ ನೀನು ಆ ಮಾಬುಕಳ ದಾಟಿ ಬಿಟ್ಟರೆ ಅದೇ ನಿನಗೆ ನಾನು ಕೊಡುವ ಬರ..' ಎಂದನ್ನುವಷ್ಟರಲ್ಲಿ ಸಿರಿ ಆತನಿಗೆ ಬೆನ್ನು ಹಾಕಿ ಮಾಬುಕಳ ನದಿಯತ್ತ ನಡೆದಿದ್ದಳು. ಹಾಗೇ ಸುಮ್ಮನೆ

ನಡೆದುಬಂದಳೇನು ಸಿರಿ..! ಇಲ್ಲ. ತನಗೆ ಒದಗಿ ಬಂದ ದೇಶಾಂತರ ಸ್ಥಿತಿ ಬಸರೂರಿನ ಅರಮನೆ ಮಂದಿಗೂ ಒದಗಿ ಬರಲಿ.. ಇಲ್ಲಿನ ಸಿರಿವಂತಿಕೆ ಇಂಗಿ ಹೋಗಿ ಅರಮನೆ ಇಡೀ ದುರ್ಭಿಕ್ಷೆ ಕಾಡಲಿ; ವಿಷಯ ಲಂಪಟ ಗಂಡ ಬಿಕ್ಷೆ ಬೇಡಿಕೊಂಡು ನನ್ನಂತೇ ದೇಶಾಂತರ ಹೋಗುವಂತಾಗಲಿ'-ಎಂದು ಶಪಿಸಿದಳು.

ಸಿರಿ, ಮಗು ಮತ್ತು ದಾರುವೊಂದಿಗೆ ನದೀತಟಕ್ಕೆ ಬಂದಾಗ ಅಲ್ಲಿ ಒಂದೇ ಒಂದು ದಾಟುವ ದೋಣಿಯಿಲ್ಲ. ಇರುವ ಎರಡು ದೋಣಿಗಳೂ ಗೂಟಕ್ಕೆ ಬಿಗಿಯಲ್ಪಟ್ಟಿವೆ. ಕಾಂತುಪೂಂಜ ಪೂರ್ವಯೋಜಿತವಾಗಿಯೇ ಎಲ್ಲವನ್ನೂ ಸಮರ್ಪಕವಾಗಿ ಮಾಡಿಮುಗಿಸಿದ್ದಾನೆ ಎಂದು ಸಿರಿಗೆ ಅರ್ಥವಾದರೂ ಎದೆಗುಂದದೆ ಅಲ್ಲೇ ಮರದಡಿ ಮಲಗಿದ್ದ ಅಂಬಿಗನನ್ನು ಕೂಗಿದಳು. ಕಾಂತುಪೂಂಜನಿಂದ ಎಂಜಲು ಪಡೆದ ಆತ 'ಇಲ್ಲ ಒಡತಿ, ಇನ್ನು ದೋಣಿ ಬಿಚ್ಚುವುದು ನಾಳೆ ಮುಂಜಾನೆಗೇ' ಎಂದಾಗಲೂ ಸಿರಿ ತಡವರಿಸಲಿಲ್ಲ. ನದಿ ಪಕ್ಕದಲ್ಲೇ ಬೆಳೆದಿದ್ದ ಬಾಳೆ ತೋಟದಿಂದ ಬಾಳೆ ಎಲೆಯೊಂದನ್ನು ಕಿತ್ತು ತಂದು, ತನ್ನ ಕುಲದೈವವನ್ನು ಬೇಡಿಕೊಂಡಳು. 'ನಾನು ಸತ್ಯದ ಮಗಳಾದರೆ ಈ ಬಾಳೆ ಎಲೆಯ ಮೇಲೆ ಮಲಗಿರುವ ನನ್ನ ಕುಮಾರನನ್ನು ತೊಟ್ಟಿಲ ಸಹಿತ ನದಿ ದಾಟಿಸಬೇಕು- ನದಿಯ ನೀರು ನನಗಾಗಿ ಮೊಣಕಾಲಗಂಟಿನವರೆಗೆ ಇಂಗಬೇಕು?

ಸಿರಿಯ ಬಯಕೆ-ಬೇಡಿಕೆಯಂತೆ ನದಿ ಮೊಣಗಂಟಿನ ವರೆಗೆ ಇಂಗಿ- ಬಾಳೆ ಎಲೆ ನದಿಯಲ್ಲಿ ತೇಲುತ್ತಾ, ಕುಮಾರನನ್ನು ತೊಟ್ಟಿಲಸಹಿತ ಹೊತ್ತು ಆ ದಡಕ್ಕೆ ದಾಟಿಹೋಯ್ತು.

ಸಿರಿ ನದಿ ದಾಟಿದೊಡನೆ ಒಂದು ದೀರ್ಘ ನಿಟ್ಟುಸಿರು ಬಿಟ್ಟಳು. ತನ್ನ ವಿವಾಹ ನಂಟು ಮುರಿದುಬಿತ್ತೆಂಬ ನಿರಾಳತೆಯ ನಿಟ್ಟುಸಿರದು. ವಿಚ್ಛೇದಿತ ಸಿರಿ ಎದೆಗುಂದಲಿಲ್ಲ, ಅಳುಕಲಿಲ್ಲ, ಅಳಲಿಲ್ಲ. ಎದೆಗಾರಿಕೆ ತೋರಿ ಮರದ ನೆರಳಲ್ಲೇ ಬಿಡಾರ ಹೂಡಿದಳು. ನಾಕೈದು ರಾತ್ರಿ ಬೋಳ ಸೀಮೆಯ ಕಾಡಲ್ಲೇ ಹಸುಗೂಸನ್ನು ಕಟ್ಟಿಕೊಂಡು ದಿನದೂಡಿದಳು. ಕೆಲಸದಾಕೆ ದಾರು ಅಂತಾ ಕಷ್ಟದಲ್ಲೂ ಒಡತಿಗೆ ಒದಗಿಬಂದಳು.

ಹಾಗೆಯೇ ದಿನವೆರಡು ಕಳೆದಿದೆ. ಬೋಳ ಸೀಮೆಯಿಡೀ ಕೆಡಸ ಹಬ್ಬದ ಸಂಭ್ರಮ. ಹಬ್ಬದ ಕಟ್ಟಿನಂತೆ ಸೀಮೆಯ ಅರಸುಗಳು ಊರ ಜನರೊಂದಿಗೆ ಬಿಲ್ಲು ಬಾಣ ಹಿಡಿದು ಕಾಡಿಗೆ ಬೇಟೆಗೆ ಹೊರಟಿದ್ದಾರೆ. ಆ ಬೋಳಸೀಮೆಯನ್ನು ಆಳುವವರು ಇಬ್ಬರು ಅರಸು ಸೋದರರು. ಅವರಿಬ್ಬರೂ ಅಲೌಕಿಕ ಶಕ್ತಿಯುಳ್ಳ ವ್ಯಕ್ತಿಗಳು. ಇವರು ಬಿಳಿ ದೇಸಿಂಗರಾಯ ಹಾಗೂ ಕರಿಕಾಸಿಂಗರಾಯ ಎಂಬೀ ಶಿವದೂತರು. ನಾಗರಾಜನಿಂದ ಅನುಮತಿ ಪಡೆದು ಭೂಲೋಕದ ಬೋಳದ ಕಾಡಲ್ಲಿರುವ ತಾವರೆಕೊಳದಲ್ಲಿ ಹುಟ್ಟಿ ಸತ್ಯದ ಬಲದಿಂದ ಬೋಳ ರಾಜ್ಯ(ಸೀಮೆ) ಸ್ಥಾಪನೆ ಮಾಡಿದವರು. ತುಳುವ ಮಂದಿಗೆ ಹಿಡಿಸುವಂತೆ ರಾಜ್ಯಭಾರ ಮಾಡಿದ ಕೀರ್ತಿ ಈ ಸೋದರರಿಗಿತ್ತು. ಊರ ಮಂದಿಯ ಹಿತವನ್ನು ಕಾಪಾಡಲು ಕೆಡ್ಡಸ ಹಬ್ಬದಂದು ಬೇಟೆಯಾಡುವುದು ಪ್ರತೀ ಸೀಮೆಯ ಅರಸುಗಳು ಮಾಡಿಕೊಂಡಿರುವ ಕಟ್ಟು.

ಅಂತೆಯೇ ಅಂದು ಕರಿಕಾಸಿಂಗ- ಬಿಳಿ ದೇಸಿಂಗರು ಇಡೀ ದಿನ ಬೇಟೆಯಾಡಿ ಭಾರೀ ಸುಸ್ತಾದಾಗ ತಮ್ಮೊಡನೆ ಬೇಟೆಯಾಡಲು ಬಂದ ಊರ ಮಂದಿಯನ್ನೆಲ್ಲ ಬೇಟೆಯ ಸಮೇತ ಹಿಂದಕ್ಕೆ ಕಳುಹಿಸಿ, ತಾವು ಮಾತ್ರ ಕಾಡ ತಂಪಿನಲ್ಲಿ ಕೂತು ವೀಳ್ಯದೆಲೆ ಜಗಿಯುತ್ತಿರುವಾಗ ಅವರ ಕಿವಿಗೆ ಸೋಕಿದ್ದು ಜೋಗುಳದ ಇಂಪು!

ಅಲೌಕಿಕ ವ್ಯಕ್ತಿಗಳಾದರು ಹೆಣ್ಣಿನ ದನಿಗೆ ದುರ್ಬಲರಾದರು; ಕಾಡೊಳಗೆ ಈ ಪರಿಯ ಇಂಪು ರಾಗ-ಹಾಗಾದರೆ ಇಂತಾ ಶಾರೀರದ ಶರೀರ ಹೇಗಿದ್ದಿರಬೇಕು! ಅಣ್ಣ ತಮ್ಮಂದಿರು ಆ ಶರೀರವನ್ನು ಅಪ್ಪಿಕೊಳ್ಳಲು ಪೈಪೋಟಿ ನಡೆಸಿ, ಓಟಕಿತ್ತರು. ಏಕಚಿತ್ತಳಾಗಿ ಜೋಗುಳ ಹಾಡುತ್ತಿದ್ದ ಸತ್ಯದ ಸಿರಿ ತನ್ನತ್ತ ಓಡಿ ಬರುತ್ತಿರುವ ಸೋದರರ ಕಣ್ಣ ವಾಂಛೆಯಿಂದಲೇ ಎಲ್ಲವನ್ನೂ ಅರ್ಥೈಸಿಕೊಂಡವಳು.

'ಮುಂದಕ್ಕೆ ಓಡಿ ಬಂದವ ನನಗೆ ದೊಡ್ಡಣ್ಣ, ನಂತರ ಬರುವವ ನನ್ನ ಸಣ್ಣಣ್ಣ'ಎಂದು ಹೇಳುತ್ತಾ ಅವರಿಬ್ಬರನ್ನು 'ಏನು ಅಣ್ಣಂದಿರೇ'ಎಂದು ಮಾತಿಗೆಳೆದಳು. ಕತೆ ಕೈಲಾಸವಾಯಿತು ಎಂದು ಅಣ್ಣಂದಿರು ಮಾತಿನರಗಿಣಿ ಸೋದರಿಯತ್ತ ನಿಧಾನಕ್ಕೆ ಬಂದು ಮಾತಿನ ಮಂಟಪ ಕಟ್ಟಿ ಕೂತು ಬಿಟ್ಟರು. ಸೋದರಿಯ ಕತೆ ಕೇಳಿ ಅತ್ತೇಬಿಟ್ಟರು. ಕೂಡಾ; ಆಕೆಯ ಭಲಕ್ಕಾಗಿ ಬೆನ್ನು ತಟ್ಟಿದರು. ಈ ಅರಸು ಸೋದರರಿರುವಾಗ ಈ ತಂಗಿಗ್ಯಾಕೆ ಅನಾಥ ಭಯ-ಭಾವವೆಂದು ಸಮಾಧಾನಿಸುತ್ತಲೇ ದೈವ ಸಂಕಲ್ಪದಿಂದ ಸಿಕ್ಕಿರುವ ತಂಗಿಯನ್ನು ಬೋಳದ ಅರಮನೆಗೆ ಕರೆದೊಯ್ಯಲು ನಿರ್ಧರಿಸಿ ತಮ್ಮ ನಿರ್ಧಾರವನ್ನು ಮುಂದಿಟ್ಟರು.

'...ಛೇ...ಛೇ ಪೆದ್ದು ಅಣ್ಣಂದಿರಾ...ಮಂದಿ ನಾಲಿಗೆ ರುಚಿ ಇನ್ನು ಸಿಕ್ಕಿಲ್ಲವೇ ನಿಮಗೆ! 'ಹೀಗೆ...ಇದ್ದಕ್ಕಿದ್ದಂತೆ ಕಾಡಿಗೆ ಬಂದವರು ನನ್ನನ್ನು ಕರೆದೊಯ್ದರೆ ಊರ ಜನ ಏನಂದಾರು? ಬೇಟೆಗೆ ಬಂದವರು ಹೆಣ್ಣೊಂದನ್ನು ಬೇಟೆಯಾದಿ ಬಂದರೆಂದು ಹೇಳಲಾರರೆ....? ನಾಳೆ ಊರ ಮಂದಿಯನ್ನೆಲ್ಲ ಮೆರವಣಿಗೆಯಲ್ಲಿ ಕರೆತಂದು ನನ್ನನ್ನು ಸರ್ವಮರ್ಯಾದೆಯೊಂದಿಗೆ ಅರಮನೆಗೆ ಕರೆದೊಯ್ಯುವಿರಂತೆ'ಎಂದು ಹೇಳಿ ಅಣ್ಣಂದಿರನ್ನು ಬೀಳ್ಕೊಟ್ಟಳು.

ಆ ರಾತ್ರಿ ತಾಯಿಯ ಎದೆಹಾಲು ಕುಡಿಯುತ್ತಿದ್ದ ಮಗು ಕುಮಾರ ಇದ್ದಕ್ಕಿದ್ದಂತೆ ತಾಯಿಯೊಡನೆ ಮಾತಿಗೆ ತೊಡಗಿದ್ದು ದಾರುವಿಗಂತು ಅಚ್ಚರಿಯಲ್ಲಿ ಅಚ್ಚರಿ! ಅಲೌಕಿಕ ಶಕ್ತಿಯುಳ್ಳ ಕುಮಾರನನ್ನು ಅಪ್ಪಿಕೊಂಡವಳೇ ಸಿರಿ ಮಗನಲ್ಲಿ ಮುಂದಿನ ತನ್ನ ಬದುಕಿನ ಬಗ್ಗೆ ಪ್ರಸ್ತಾಪಿಸತೊಡಗಿದಳು.

ಮಗು, ಭೂತ-ವರ್ತಮಾನ-ಭವಿಷ್ಯದ ಎಲ್ಲ ಘಟನೆಗಳನ್ನು ತಾಯಿಗೆ ವಿವರಿಸಿ, ನಿನ್ನನ್ನು ಮಮತೆಯಿಂದ ನೋಡಿಕೊಳ್ಳುವ ಅಣ್ಣಂದಿರು ಸಿಕ್ಕಿದ್ದಾರೆ... ಮುಂದಿನ ದಿನ ಗಳಲ್ಲಿ ನಿನಗೊಂದು ಕೈಧಾರೆ (ಮರುಮದುವೆ)ಯೂ ನಡೆಯುತ್ತದೆ. ಆಗ ನನ್ನ

ಸ್ಥಿತಿಯೇನೆಂಬುದನ್ನು ಯೋಚಿಸಿ ಈಗಲೇ ನನ್ನನ್ನು ಬೆಳ್ಳಿಬೆಟ್ಟದಲ್ಲಿರುವ ಅಜ್ಜ ಬೆರ್ಮೆರ್‌ದೇವರ ಬಳಿ ಕಳುಹಿಸಿಕೊಡಮ್ಮ ಎಂದು ಅಂಗಲಾಚುತ್ತದೆ. ಸಿರಿಗೂ ಅದು ನಿಜವೆನಿಸುತ್ತದೆ. ಇಲ್ಲಿಯ ತನ್ನೆಲ್ಲ ಲೋಕೋದ್ಧಾರದ ಕೆಲಸ ಸಮಾಪ್ತಿಯಾದೊಡನೆ ತಾನೂ ಬೆಳ್ಳಿಬೆಟ್ಟಕ್ಕೆ ಬರುವೆನೆಂದು ಮಗುವಿಗೆ ಮಾತುಕೊಟ್ಟು. ಮಗುವನ್ನು ತನ್ನ ಮಾಯಾಶಕ್ತಿಯಿಂದ ಮಾಯಮಾಡುತ್ತಾಳೆ ಸಿರಿ. ಈಗ ಚಾಕರಿಯ ದಾರುವೇನು ಸುಮ್ಮನಿರವವಳೇ? ತಾಯಿ-ಮಗನ ಮಾತು ಕೇಳಿಸಿಕೊಂಡ ದಾರು ಒಡತಿ ಸಿರಿಯೊಂದಿಗೆ ತನಗಿನ್ನೇನೂ ಚಾಕರಿಯ ಕೆಲಸವಿಲ್ಲವೆಂದು ನಿರ್ಧರಿಸಿ ತನ್ನನ್ನೂ ಮಾಯ ಮಾಡುವಂತೆ ಒಡತಿಯನ್ನು ಇನ್ನಿಲ್ಲದಂತೆ ಬೇಡಿಕೊಳ್ಳುತ್ತಾಳೆ. ಸಿರಿಗೂ ಅದು ಹೌದೆನಿಸಿ, ದಾರುವಿನ ಬೇಡಿಕೆಯಂತೆ ಆಕೆಯನ್ನು ತುಳುನಾಡಿನ ಜಾಲಬೈಕಾಡ್ತಿ ಭೂತವನ್ನಾಗಿ ಮಾರ್ಪಡಿಸಿ ತಾನ್ನೊಬ್ಬಳೇ ಅಣ್ಣಂದಿರ ಬರುವಿಕೆಯನ್ನು ಎದುರು ನೋಡುತ್ತಾ ಕೂತಿರುವ ಹೊತ್ತಿಗೆ ಬೆಳ್ಳಿ ಮೂಡಿಯಾಗಿತ್ತು.

ಅಂದು ಮುಂಜಾನೆ ದೇವರು ಹುಟ್ಟಿ ನಾಕುಗಳಿಗೆ ಸರಿದಿಲ್ಲವೇನೋ! ಬೋಳ ರಾಜ್ಯದ ಅರಸರು ಭಾರೀ ಮೆರವಣಿಗೆ ತರುತ್ತಿರುವುದನ್ನು ಕಂಡು ತಂಗಿ ವಿಸ್ಮಿತಳಾದಳು. ಮಾತೆಂದರೆ ಮಾತು-ಕರಿಯ ಕಾಸಿಂಗಣ್ಣನದು-ಬಿಳಿಯ ದೇಸಿಂಗಣ್ಣನದು ಎಂದು ಅಣ್ಣಂದಿರನ್ನು ಭೇಡಿಸುತ್ತಾ ಸಿರಿ ದಂಡಿಗೆ ಏರಿದಳು.

ಬೋಳದರಮನೆಯಲ್ಲಿ ಸಿರಿಯ ಬದುಕು ಸತ್ಯನಾಪುರದ ಅರಮನೆಗಿಂತ ಭಿನ್ನವಾಗಿರಲಿಲ್ಲ. ಮನೆಯ ಮಗಳಂತೆ ಅಲ್ಲಿ ಅವಳ ಆರೈಕೆ. ಅಣ್ಣಂದಿರಂತೂ ಸ್ವಂತ ತಂಗಿಗಿಂತಲೂ ಮಿಗಿಲಾದ ಪ್ರೀತಿ-ಕಾಳಜಿ ತೋರಿಸಿದರು. ಆದರೂ ಅಣ್ಣಂದಿರನ್ನೊಂದು ಕೊರಗು ಕಾಡುತ್ತಲೇ ಇತ್ತು. ಆ ಕೊರಗೇನೆಂದರೆ ಇನ್ನೂ ಹರೆಯದಲ್ಲಿರುವ ಸಿರಿಗೆ ಇನ್ನೊಂದು ಮದುವೆಯ ಯೋಗ ಕೂಡಿ ಬರಲಿಲ್ಲವಲ್ಲ ಎಂಬುದೇ. ಅಣ್ಣಂದಿರು ಹಾಗೇ ಕೊರಗು ತುಂಬಿ ಯೋಚಿಸುತ್ತಿರುವಾಗ ಅವರ ಕಣ್ಣದಿಟ್ಟಿಗೆ ಬಿದ್ದಾತ ಜಮೀನ್ದಾರ ಕೊಟ್ರಾಡಿಯ ಕೊಡ್ಸರಾಳ್ವ.

ಕೊಟ್ರಾಡಿಯ ಕೊಡ್ಸರಾಳ್ವ ಸಂಭಾವಿತ ಜಮೀನ್ದಾರ. ಅಂಗರಜಾಲಬರ್ಕೆಯ ಬಾಮು ಕಿಲ್ಲೆಯರ ಏಕೈಕ ತಂಗಿ ಸಾಮು ಈತನ ಹೆಂಡತಿ. ಸಾಮುವಂತೂ ಕೊಟ್ರಾಡಿಯ ಸೊಸೆಯಾಗಿ ಬಂದ ನಂತರ ಅಲ್ಲಿಯ ಭಾಗ್ಯ ವೃದ್ಧಿಸಿದೆ; ಎರಡಿದ್ದ ಆಸ್ತಿ ಹತ್ತಾಗಿದೆ, ಒಂದಿದ್ದ ಕಣಜ ನಾಕಾಗಿದೆ. ಆದರೆ ಯಾವ ಭಾಗ್ಯ ವೃದ್ಧಿಯಾದರೇನು.. ಸಂತಾನಭಾಗ್ಯವಿಲ್ಲ. ಕೊಡ್ಸರಾಳ್ವರಂತೂ ಸಂತಾನ ಭಾಗ್ಯವನ್ನು ಬಯಸಿದಾತ. ಆದರೇನು ಅದೇನು ಹಲಸಿನ ಹಣ್ಣಿನ ಯೋಗವೇ? ತಟ್ಟನೆ ಒಡಲಿಂದ ಉದುರಲು. ಕೊಡ್ಸರಾಳ್ವರಿಗೆ ಸಂತಾನಕ್ಕಾಗಿ ಮತ್ತೊಂದು ಮದುವೆಯಾಗುವ ಆಸೆ ಒಳಗೊಳಗೇ ಇರುವುದು ಆತನೊಂದಿಗೆ ಸಲಿಗೆಯಿಂದಿರುವ ಬೋಳದರಸುಗಳಿಗೆ ತಿಳಿದಿತ್ತು. ಇದೀಗ ಕೊಡ್ಸರಾಳ್ವ, ಬೋಳದರಸರ

ಮನೆಗೆ ಬಂದಿರುವ ತಂಗಿ ಸಿರಿದೇವಿಯ ಚಂದವನ್ನೊಮ್ಮೆ ನೋಡಲು ಅರಮನೆ ಕಡೆ ಸುಳಿದಾಗ ಅಣ್ಣಂದಿರ ದಿಟ್ಟಿಗೆ ಆತ ತಟ್ಟನೆ ಬಿದ್ದುಬಿಟ್ಟ.

'ಇಂದಲ್ಲ ನಾಳೆ ಇಂವ ಮರುಮದುವೆಯಾಗುವವನೇ..., ಇಂದೇ ಯಾಕೆ ಈತನನ್ನು ಬುಟ್ಟಿಗಿಳಿಸಬಾರದು..' ಎಂಬ ಲೆಕ್ಕಚಾರದಿಂದ ಅಣ್ಣತಮ್ಮಂದಿರು ಮಾತನಾಡಿಕೊಂಡವರೇ, ಕೊಡ್ಸರಾಳ್ವನನ್ನು ಅರಮನೆಯೊಳಗೆ ಕರೆತಂದು, ತಂಗಿ ಸಿರಿದೇವಿಯನ್ನು 'ನೆಂಟನಿಗೆ ಹಾಲು ತಂದು ಕೊಡುವಂತೆ' ಕೂಗಿ ಕರೆದರು. ತಂಗಿ ಸಿರಿ ಅಣ್ಣಂದಿರ ಆಜ್ಞೆಯಂತೆ ಹಾಲು ತಂದಳಾದರೂ ಕೊಡ್ಸರಾಳ್ವನಿಗೆ ಮಾತ್ರ ಸಿರಿಯ ಮುಖ ನೋಡಲು ಧೈರ್ಯ ಸಾಲುತ್ತಿಲ್ಲ. ಕೈಕಾಲು ಅದುರುತ್ತಿದೆ.

ಹಾಲ ಲೋಟವಿತ್ತ ಸಿರಿಯ ಮುಂಗೈಯ ಚೆಲುವನ್ನು ಕೆಳಗಣ್ಣಿಂದಲೇ ಕಂಡವನು ಕೊಡ್ಸರಾಳ್ವ ತನ್ನ ಬುದ್ಧಿಯನ್ನು ಕೆಡಿಸಿಕೊಂಡು ಎಚ್ಚರ ತಪ್ಪಿ ಬಿದ್ದುಬಿಟ್ಟ. ಅಲ್ಲಿಂದಲೇ ಆರಂಭವಾಯ್ತು-ಸಿರಿಯ ಮೇಲೆ ಇನ್ನಿಲ್ಲದ ಮೋಹ. ಅರಮನೆಯಿಂದ ಹಿಂದಿರುಗಿದಾತ ಆಕೆಗಾಗಿ ಅನ್ನ ನೀರು ಬಿಟ್ಟು ಕೊರಗಿದ. ಮಡದಿ ಸಾಮು ಕಳಕಳಿ ಪ್ರೀತಿಯಿಂದ ವಿಚಾರಿಸಿದರೂ ಬಾಯ್ಬಿಡಲಿಲ್ಲ. ಈ ಮನೋರೋಗದ ಸಂಗತಿ ಬೋಳದ ಅಣ್ಣಂದಿರಿಗೆ ತಲಪಿದೊಡನೆ, 'ಮೀನು ಜಾರಿ ಗಾಳಕ್ಕೆ ಬಿದ್ದಾಯ್ತು'-ಎಂಬ ಸಂತಸದಲ್ಲಿ ಕೊಟ್ಸರಾಳ್ವನಿಗೆ ಕರೆ ಕಳುಹಿಸಿದರು.

ತನ್ನ ವ್ಯಾಧಿಗೆ ಔಷಧಿ ಅರಮನೆಯೊಳಗೇ ಇದೆ ಎಂಬ ಸಂತಸದಲ್ಲಿ ಕೊಡ್ಸರಾಳ್ವ ಓಡಿ ಬಂದಾಗ ಸಿಕ್ಕ ಸುದ್ದಿ ಕೊಡ್ಸರಾಳ್ವನ ಸರ್ವವ್ಯಾಧಿಯನ್ನೂ ಶಮನಗೊಳಿಸಿತ್ತು. ಕೊಡ್ಸರಾಳ್ವನಿಗೆ ಮರುಮದುವೆ ಏರ್ಪಾಡಾಯಿತು.

ಗಂಡನ ಮರುಮದುವೆಯು ಸುದ್ದಿ ಸಾಮುವಿನ ಕಿವಿಗೂ ತಲಪಿತು. ಆಕೆಯ ಕಣ್ಣೀರೇ ಒಂದು ಕೆರೆಯಾಯ್ತು. ಕೈಹಿಡಿದ ಹೆಂಡತಿ ಇರುವಾಗ ಹೀಗೆ ಮಾಡುವುದು ನ್ಯಾಯವೇ ಎಂದು ಗಂಡನನ್ನು ಪರಿಪರಿಯಾಗಿ ಬೇಡಿಕೊಂಡಳು. ಸಂತಾನ ಭಾಗ್ಯದ ಕಾರಣವೊಡ್ಡಿ ಕೊಡ್ಸರಾಳ್ವ ತಪ್ಪಿಸಿಕೊಂಡ. ಆದರೆ ಸಾಮು ಸುಮ್ಮನಿರುವವಳೇನು? ಅಂಗರ ಜಾಲಬರ್ಕೆಯ ಅಣ್ಣ ಬಾಮು ಕಿಲ್ಲಾಯರಿಗೆ ಓಲೆ ಅಟ್ಟಿದಳು.

ಅಣ್ಣ ಕಿಲ್ಲಾಯರು ತಂಗಿಯ ಕಷ್ಟ ಕೇಳಿ ಓಡೋಡಿ ಬಂದರು. ಭಾವನಿಗೆ ಬುದ್ಧಿ ಹೇಳಿದರು. ಮತ್ತೆ ಬಂತು ಸಂತಾನಭಾಗ್ಯದ ನೆಪ. ಬಾಮು ಕಿಲ್ಲಾಯ ಸಿಟ್ಟಾದರು. ತನ್ನ ತಂಗಿಯಿಂದ ವೃದ್ಧಿಯಾದ ಸಿರಿಸಂಪತ್ತನ್ನೆಲ್ಲ ಆಕೆಯ ಜತೆಗೇ ತವರಿಗೆ ಸಾಗಿಸಿದರು. ಆದರೆ ಸಾಮುವಿನ ನೋವು-ಸಿಟ್ಟು-ಅಸಹನೆ ಇಷ್ಟಕ್ಕೇ ಶಮನವಾದೀತೆ?

'ತನ್ನ ಹೊಟ್ಟೆಯುರಿಸಿದ ಆ ಸವತಿ ನಮ್ಮ ಕಂಬಳ ಗದ್ದೆ ಹಾದು ಬರುವಾಗ ಈ ನಂದಾದೀಪ ಆಕೆಯ ಕಣ್ಣಿಗೆ ಕುಡಿಬಾಣವಾಗಿ-ಶೂಲವಾಗಿ ಚುಚ್ಚಲಿ' ಎಂದು ಶಪಿಸುತ್ತಾ

ತೆಂಗಿನ ಕಡಿ(ಹೋಳು)ಯಲ್ಲಿ ದೀಪ ಹಚ್ಚಿಟ್ಟು ಮನೆದೈವಕ್ಕೆ ಅಡ್ಡಬಿದ್ದು ಸಾಮು ತವರಿನ ದಾರಿ ಹಿಡಿದಳು.

ಸಾಮು ತವರಿಗೆ ಸಾಗಿದ್ದು ಕೊಡ್ಸರಾಳ್ವನಿಗಂತೂ 'ಶುಂಠಿ' ರಸವಿಲ್ಲದೆ ಕಫ ಜಾರಿದಂತಾ' ಅನುಭವ. ನೆಮ್ಮದಿಯ ನಿಟ್ಟುಸಿರುಬಿಟ್ಟ. ಮುಖದಲ್ಲಿ ಚಿಗುರುನಗೆ ಮೂಡಿತು. ಬೋಳದ ಅರಮನೆಯಲ್ಲಿ ಕೊಡ್ಸರಾಳ್ವನ ಮದುವೆ ಭಾರಿ ಗಡದ್ದಲ್ಲಿ ನಡೆಯಿತು. ಅಣ್ಣಂದಿರು ತಂಗಿಯನ್ನು ಸತ್ಯದಂಡಿಗೆ ಮೇಲೆ ಕುಳ್ಳಿರಿಸಿ ತಾವೂ ದಿಬ್ಬಣದ ಜತೆಯಲ್ಲೇ ಕೊಟ್ರಾಡಿಗೆ ಬಂದರು.

ಸಿರಿ ಕೂತ ಸತ್ಯದಂಡಿಗೆ ಕಟ್ರಾಡಿಯ ಬೈಲನ್ನೇರಿತು. ಇನ್ನೇನು ದಂಡಿಗೆ ಕಂಬಳದ ಗದ್ದೆಗೆ ಹೋಗಬೇಕೆನ್ನುವಷ್ಟರಲ್ಲಿ ಸಿರಿ ದಂಡಿಗೆ ನಿಲ್ಲಿಸಲು ಬೋವಿಗಳಿಗೆ ಆಜ್ಞೆ ಮಾಡಿದಳು.

ಅಕ್ಕ ಸಾಮು ಆಳ್ವೆದಿ ಬಂದು ತನ್ನನ್ನು ಕೈಹಿಡಿದು ಕರೆದೊಯ್ಯುವವರೆಗೂ ಅರಮನೆಯ ಮೆಟ್ಟಿಲು ದಾಟಲಾರೆ..., ಅಕ್ಕ ಹಚ್ಚಿಟ್ಟಿರುವ ಆ ನಂದಾದೀಪ ನನ್ನ ಕಣ್ಣಿಗೆ ಶೂಲವೇ ಸರಿ..' ಎಂದು ಸಿರಿ ಅಂದವಳೇ, ' ಆ ದೀಪವನ್ನು ನಾನು ಇಲ್ಲಿಂದಲೇ... ಈ ಕಣ್ಣದಿಟ್ಟಿಯಿಂದಲೇ ನಂದಿಸಬಲ್ಲೆ... ಆದರೆ ಆಕೆ ಹಚ್ಚಿಟ್ಟಿರುವ ಮನಸ್ಸಿನ ಹಿಂದಿರುವ ನೋವು-ಸಿಟ್ಟನ್ನು ನಾನು ನಂದಿಸಲಾರೆ; ಈಗಲೇ... ಈ ಕ್ಷಣವೇ ಅಕ್ಕನನ್ನು ತವರಿಂದ ಕರೆತನ್ನಿ ಎಂದು ಸ್ವತಾ ಕೊಡ್ಸರಾಳ್ವನನ್ನು ಸಾಮುವಿನ ತವರಿಗಟ್ಟಿದಳು. ದಿಬ್ಬಣದಲ್ಲಿದ್ದ ಅಣ್ಣಂದಿರನ್ನು ಮರಳಿ ಕಳುಹಿಸಿಕೊಟ್ಟಳು ಸಿರಿ.

ಮದುಮಗನ ದಿರಿಸಲ್ಲೇ ಕಾಲಮಣ್ಣು ಮೂಗಿಗೆ ತಾಕುವಂತಹ ವೇಗದಲ್ಲಿ ಕಜ್ಜಿ ಹಿಡಿದ ನಾಯಿಯಂತೆ ಮನಸ್ವಾಸ್ಥ ಕೆಡಿಸಿಕೊಂಡು ಅಂಗರಜಾಲಬರ್ಕಿಗೆ ಓಡಿಹೋದ ಕೊಡ್ಸರಾಳ್ವ ಅಲ್ಲಿ ತನ್ನ ಪೊಗರು, ಗಂಡಸ್ತನವೆಲ್ಲ ಬದಿಗೊತ್ತಿ ಮಡದಿ ಸಾಮುವನ್ನು ಪರಿಪರಿಯಾಗಿ ಬೇಡಿಕೊಂಡು... ಆಕೆಯನ್ನು ಸಮಾಧಾನಿಸಿ ಕೊಟ್ರಾಡಿಗೆ ಕರೆತಂದ.

ಕೊಡುವ ಪ್ರೀತಿಯಲ್ಲಿ ತಾರತಮ್ಯ ಮಾಡಲಾರೆನೆಂಬ ಗಂಡನ ಭರವಸೆ ಮಾತಿಗೆ ತಲೆಬಾಗಿ ಬಂದ ಸಾಮು ನೇರ ಕಂಬಳ ಗದ್ದೆಗಿಳಿದು ಮೌನದೇವತೆಯಾಗಿ ನಿಂತಿದ್ದ ಸವತಿ ಸಿರಿಯ ಕೈಹಿಡಿದು ಕೊಟ್ರಾಡಿಯ ಚಾವಡಿಯೊಳಗೆ ಕರೆತಂದಳು.

ಸಿರಿಯ ಸಿಟ್ಟು ಇನ್ನೂ ಇಳಿದಿರಲಿಲ್ಲ. 'ಅಕ್ಕನ ಒಪ್ಪಿಗೆಯಿಲ್ಲದೆ ತನ್ನನ್ನು ಕೈಧಾರೆ ಮಾಡಿಕೊಂಡಿದ್ದು ಮಹಾ ತಪ್ಪು' ಎಂದು ಕೊಡ್ಸರಾಳ್ವನನ್ನು ಇನ್ನಿಲ್ಲದಂತೆ ಜರೆದು ಹಂಗಿಸಿದಳು ಸಿರಿ. ನೋವುಂಡ ಸಾಮುವಿಗೆ ಸವತಿಯ ಮೇಲೆ ಪ್ರೀತಿ ಉಕ್ಕಲು ಇಷ್ಟೇ ಸಾಕು. ಸಾಮುವೇ ತಂಗಿಯನ್ನು ಸಮಾಧಾನಿಸಿದಳು.

ದಿನಗಳೆಯಿತು. ಎಲ್ಲಾ ಸವತಿಯರಂತೆ ಸಿರಿಗೂ ಸಾಮುವಿಗೂ ಆಗಾಗ್ಗೆ ವಾದ ವಿರಸಗಳು ಏಳುತ್ತಿದ್ದರೂ ಅದು ಕೊಡ್ಸರಾಳ್ವನವರೆಗೆ ಬರದೆ ಅಡಿಗೆಮನೆಯೊಳಗೆ

ಶಮನವಾಗುತ್ತಿತ್ತು. ಹಲವು ಹುಣ್ಣಿಮೆಗಳು ಉರುಳಿದವು. ಒಂದು ದಿನ ಮುಂಜಾನೆ ಸಾಮುವಿನ ಕಿವಿಗೊಂದು ಸಿಹಿ ಸುದ್ದಿ ಬಂದು ತಲುಪಿತು. ಆಕೆಗೆ ಸಂತೋಷದಿಂದ ಮಾತು ಬರದಂತಾಯಿತು. ಸಿರಿ ಬಸುರಿಯಂತೆ! ಒಡಲು ತುಂಬಿಕೊಂಡವಳನ್ನು ಸಾಮು ಕಣ್ರೆಪ್ಪೆಯೊಳಗಿನ ಕಣ್ಣಮಣಿಯಂತೆ ನೋಡಿಕೊಳ್ಳತೊಡಗಿದಳು. ಏಳು ತಿಂಗಳು ಕಳೆದು ಎಂಟಕ್ಕೆ ಬೀಳುವಷ್ಟರಲ್ಲಿ ಕೊಟ್ರಾಡಿಯಲ್ಲಿ ಸಮ್ಮನಾದ ಊಟ ನಡೆಯಿತು. ಅದು ನಡೆದ ಒಂದೆರಡು ದಿನದಲ್ಲೇ ಬೋಳದ ಅರಸು ಅಣ್ಣಂದಿರು ತಂಗಿಯನ್ನು ತವರಿಗೆ ಕರೆಯಬಂದರು. ಅಕ್ಕ ಸಾಮುವನ್ನು ಬಿಟ್ಟು ಬರಲಾರೆನೆಂದಳು ತಂಗಿ ಸಿರಿ.

ದಿನಗಳೆದಂತೆ ಎಂಟು ಕಳೆದು ಒಂಬತ್ತು ತುಂಬಿತು. ಇದ್ದಕ್ಕಿದ್ದಂತೆ ಸಾಮುವಿನ ತವರುಮನೆಯಿಂದ ಬಸುರಿಯ ಸಮ್ಮನದೂಟಕ್ಕೆ ಕರೆ ಬಂತು. ಸಾಮು ತನ್ನ ತವರುಮನೆಯೆಂದರೆ ಬಿಡುವವಳೆ! ತಂಗಿಗೆ ಅಲಂಕಾರ ಮಾಡಿಸಿ ದೋಣಿಯಲ್ಲೇ ತವರಿಗೆ ಹೊರಟಳು. ಅಲ್ಲಿ ಸಮ್ಮನದೂಟ ಮುಗಿದೊಡನೆ ಅಂದೇ ಕೊಟ್ರಾಡಿಯ ದಾರಿ ಹಿಡಿದರು. ಹೆರಿಗೆಗೆ ದಿನ ಹತ್ತಿರವಾಗುತ್ತಿದೆ ಎಂಬ ಭಯ ಬೇರೆ.

ಹಾಗೆ ಸಾಗಿ ಬರುವ ದಾರಿಯಲ್ಲಿ ಅದೂ.. ಇದೂ.. ಕಷ್ಟಸುಖ ಮಾತನಾಡುತ್ತ ಬರುವಾಗ ಸಿರಿಗೆ ಇದ್ದಕ್ಕಿದ್ದಂತೆ ಹೆರಿಗೆ ಬೇನೆ ಕಾಣಿಸಿಕೊಂಡಿತು. ಅಲ್ಲೇ ನೀರು ತೋಡಿನ ಪಕ್ಕ ಬೆಳೆದಿದ್ದ ಸಿರಿ ಹೊನ್ನೆ ಮರದಡಿ ಕುಸಿದು ಕುಳಿತ ಸಿರಿಗೆ ಮೂರು ಗಳಿಗೆಯಲ್ಲೇ ಹೆರಿಗೆಯಾಯಿತು. ಮಗು ಹೆಣ್ಣು.

ಸಿರಿಯ ಸೊಂಟದ ಗೆಜ್ಜೆ ಕತ್ತಿಯಿಂದ ಮಗುವಿನ ಕರಳುಬಳ್ಳಿ ಕತ್ತರಿಸಿದಳು ಅಕ್ಕ ಸಾಮು. ಆ ಹಸಿ ಮಾಂಸದ ಮುದ್ದೆಯಿನ್ನೂ ಸಾಮುವಿನ ಕೈಯ್ಯೊಳಗೇ ಇದೆ; ಮಗುವನ್ನು ಮಲಗಿಸಲು ಒಂದು ಅಡಿಕೆ ಹಾಳೆಯಿಲ್ಲ. ಬಾಣಂತಿ ಸಿರಿ ಅಜ್ಜಯ್ಯ ಬೆರ್ಮೆರ್‍ಳ್ವರನ್ನು ಮನಸಲ್ಲೇ ಪ್ರಾರ್ಥಿಸಿಕೊಂಡು ಸೊಂಟದಲ್ಲಿ ಸಿಲುಕಿಕೊಂಡಿದ್ದ ಅಡಿಕೆಯೊಂದನ್ನು ನೀರತೋಡಿನ ಬಳಿಗೆ ಎಸೆದಳು. ತಟ್ಟನೆ ಅಡಿಕೆಯಿಂದ ಅಡಿಕೆ ಮರ ಬೆಳೆದು, ಅಡಿಕೆ ಹಾಳೆಯೊಂದು ಸಿರಿಯ ಮಡಿಲಿಗೆ ಉದುರಿಸಿತು.

ಮಗುವನ್ನು ಹಾಳೆಯಲ್ಲಿ ಮಲಗಿಸಿದವಳೇ ಸಿರಿ, ಅಕ್ಕ ಸಾಮುವಿನ ಕೈಯ್ಯಲ್ಲಿಟ್ಟು 'ಅಕ್ಕಾ ಈ ಮಗುವಿಗೆ ಸೊನ್ನೆ ಎಂಬ ಹೆಸರಿಟ್ಟು, ನಿನ್ನ ಸ್ವಂತ ಮಗುವಂತೆ ಪ್ರೀತಿ-ಮಮತೆಯಿಂದ ಸಾಕಿಸಲುಹಬೇಕು. ಅಲ್ಲಿ ಬೆಳ್ಳಿಬೆಟ್ಟದಲ್ಲಿ ನನ್ನ ಮಗ ಕುಮಾರ ನನಗಾಗಿ ಕಾಯುತ್ತಿದ್ದಾನೆ... ಸತ್ಯನಾಪುರದ ಅಜ್ಜಯ್ಯನ ಆಸೆಯಂತೆ ಸೊನ್ನೆ ಅವರ ಸಂತಾನ ಬಳ್ಳಿಯನ್ನು ಬೆಳೆಸುತ್ತಾಳೆ..' ಎಂದು ಹೇಳುತ್ತಲೇ ಮಾಯವಾದಳು.

ಹಸುಗೂಸು ಸೊನ್ನೆಯನ್ನೆತ್ತಿ ಬಂದ ಸಾಮುವಿಗೆ ದುಃಖದಿಂದ ಮಾತೇ ಹೊರಡುತ್ತಿಲ್ಲ. ಗಂಡ ಕೊಡ್ಸರಾಳ್ವನಿಗೆ ವಿಷಯ ತಿಳಿಸುತ್ತಲೇ ಆತ ನೀರಿನಿಂದ ತೆಗೆದ ಮೀನಿನಂತಾದ. ಮಗು ಸೊನ್ನೆಯನ್ನು ಕಂಡು ಸಿರಿಯನ್ನು ಮರೆಯಬೇಕೆಂದು ಸಾಮು ಸಮಾಧಾನಿಸಿದಳು. ಆದರೂ ಕೊಡ್ಸರಾಳ್ವ ಕೊರಗಿ ಕೊರಡಾದ.

ದಿನಗಳೆದಂತೆ ಮಗು ಸೊನ್ನೆಯ ಆರೋಗ್ಯ ಕೆಟ್ಟಿತು. ಮಗು ಬಾಯಲ್ಲಿ ನಾಲಿಗೆ ಇರಿಸದೆ ಕಿರಿಚಿ ಅಳುವುದನ್ನು ಕಂಡು ದಂಪತಿಗಳಿಬ್ಬರು ಕಂಗಾಲಾದರು. ದಾರಿ ಕಾಣದೆ, ತಾಯಿ ಮಾಯದ ಸಿರಿಯನ್ನು ಪ್ರಾರ್ಥಿಸಿಕೊಂಡರು. ಸಿರಿಯೇ ಸಾಮುವಿನೆದುರು ಕಾಣಿಸಿಕೊಂಡು 'ಮಕ್ಕಳಿಲ್ಲದ ನನ್ನ ದೂರದ ಅಜ್ಜಯ್ಯ ಕಾನಬೆಟ್ಟು ಅರಮನೆಯ ಚಂದಣ್ಣ ಪೇರ್ಗಡೆಯವರ ಕೈಗೆ ಮಗುವನ್ನು ಕೊಡಬೇಕೆಂದು' ಅಣತಿಯಿಟ್ಟು ಮತ್ತೆ ಮಾಯವಾದಳು. ಸಿರಿಯ ಮಾತಿನಂತೆ ಕೊಡ್ಸರಾಳ್ವ ತನ್ನ ಮಗಳನ್ನು ಚಂದಣ್ಣ ಪೇರ್ಗಡೆ ಅವರ ಕೈಗಿತ್ತೊಡನೆ ಆ ಹಸುಗೂಸು ಅಪ್ಪನನ್ನು-ಅಜ್ಜಯ್ಯನನ್ನು ನೋಡಿ ಬೊಚ್ಚು ಬಾಯಿಬಿಟ್ಟು ನಕ್ಕಿದ್ದು ಸಾಮುವಿಗಂತೂ ತಂಗಿ ಸಿರಿಯೇ ನಕ್ಕಂತಾಯ್ತು. ಸಿರಿಯನ್ನು ಮಗು ಸೊನ್ನೆಯೊಳಗೆ ಕಾಣುತ್ತಿದ್ದರು ದಂಪತಿಗಳು.

# ಕಿನ್ನೂರಿ ನುಡಿಸುವವನ ದನಿ ಚಂದವ್ರೋ...

*ವನಮಾಲ ಕಟ್ಟೇಗೌಡರ*

ಮಾನವನ ಕೌಟುಂಬಿಕ ಬದುಕು ನೆಲೆ ನಿಂತಿರುವುದು 'ಸ್ವಸ್ಥ' ದಾಂಪತ್ಯದ ತಳಹದಿಯ ಮೇಲೆ. ಇಲ್ಲಿ ಗಂಡ-ಹೆಂಡತಿ ಇಬ್ಬರೂ ಪತಿ-ಪತ್ನಿಯರಿಗಿಂತ ಸಖ-ಸಖಿಯರಾದಾಗ ಮಾತ್ರ ಅವರ ದಾಂಪತ್ಯ ಸುಖಿ-ಸಫಲ ದಾಂಪತ್ಯವಾಗುವುದು. ಇಲ್ಲದೇ ಹೋದಲ್ಲಿ 'ಎತ್ತು ಏರಿಗೆಳದರೆ ಕೋಣ ಕೋರಿಗೆಳೆಯಿತು'ಎಂಬ ಗಾದೆಯಂತೆ ಆ ದಾಂಪತ್ಯ ಅಸಫಲತೆಯತ್ತ ಸಾಗುವುದು. ದಾಂಪತ್ಯ ಜೀವನದಲ್ಲಿ ಗಂಡ-ಹೆಂಡಿರ ಮಧ್ಯೆ 'ಸಖ-ಸಖಿ' ಭಾವ ಅವಿರ್ಭಾವಗೊಳ್ಳಲೇ ಬೇಕಾದ ಅನಿವಾರ್ಯತೆಯನ್ನು ಬೇಂದ್ರೆಯವರು ತಮ್ಮ 'ಸಖೀಗೀತ'ದಲ್ಲಿ,

'ನಾದದ ಸೆಳೆಮಿಂಚು, ಸಮತೆಯ ಗೆಳೆಸಂಚು

ಎಸಳಿನ ಎಳೆಯಂಚು ಎಳೆದೀತೇನೆ?

ಎಂದು ತುಂಬ ಸುಂದರವಾಗಿ ಕಟ್ಟಿಕೊಡುತ್ತಾರೆ. ಹೀಗೆ ಸುಖೀ ದಾಂಪತ್ಯದ ಸಾಕಾರಕ್ಕೆ ಪತಿ-ಪತ್ನಿಯರಲ್ಲಿ ಸಖ-ಸಖಿ ಭಾವ ಅಂತರ್ಗತವಾಗಬೇಕು. ಇಲ್ಲದೇ ಹೋದಲ್ಲಿ ದಾಂಪತ್ಯ ಬದುಕಿನಲ್ಲಿ ಪತಿ ಅಥವಾ ಪತ್ನಿಯ ಮನಸ್ಸು ಬೇರೆಡೆ ಹೊರಳುವುದುಂಟು. ಆಗ ಆ ದಾಂಪತ್ಯ ಮುರಿದು ಬೀಳಬಹುದು. ಇಲ್ಲವೆ ಅನೈತಿಕ ಸಂಬಂಧಗಳಿಗೆ ದಾರಿಯಾಗಬಹುದು. ಈ ವಿದ್ಯಮಾನಗಳನ್ನು ತಿಳಿಸುವ ಜನಪದ ಗೀತೆಯೇ 'ಜೋಗಿಪದ'. ಈ ಜನಪದಗೀತೆ ಒಂದು 'ಕಥನ ಕವನ'ವಾಗಿದ್ದು ಸಾಕಷ್ಟು ಪ್ರಸಿದ್ಧಿಪಡೆದುದಾಗಿದೆ.

'ಈ ಗೀತೆಯಲ್ಲಿ ಒಂದು ಹೆಣ್ಣು ದಾಂಪತ್ಯ ಬದುಕಿನ 'ಎಲ್ಲೆ'ದಾಟಿ ಒಬ್ಬ ತಿರುಕ ಜೋಗಿಯ ಕೂಡ ಹೋಗುತ್ತಿರುವ ದೃಶ್ಯವಿದೆ. ಹಾಗೆ ಹೊರಟ ಆ ಹೆಣ್ಣು ಜೋಗಿಯನ್ನು 'ತುರುಬಿಗೆ ಮೊಗ್ಗಾಗಿ ಬಾ'ಎಂದು ಆಹ್ವಾನಿಸುತ್ತಾಳೆ. ಹೊಲ, ಮನೆ, ಒಳ್ಳೆಯ ಗಂಡ...ಮುಂತಾಗಿ ಎಲ್ಲವನ್ನೂ ಬಿಟ್ಟು ನನ್ನ ಹಿಂದೆ ಹೀಗೆ ಬರಬಹುದೆ? ಎಂದು ಜೋಗಿ ನಾರಿಯನ್ನು ಕೇಳುತ್ತಾನೆ. ಅದಕ್ಕುತ್ತರವಾಗಿ ಅವಳು ಜೋಗಿಯನ್ನು ಕಂಡಾಗಿನಿಂದ ತನ್ನ ನಿದ್ರೆ-ನೆಮ್ಮದಿಗಳು ಹಾರಿ ಹೋದ ಬಗೆಯನ್ನು ತಿಳಿಸುತ್ತಾಳೆ. ಕೊನೆಗೆ ಆತ ಸಮ್ಮತಿಸಿ ಅವಳನ್ನು ಸ್ವೀಕರಿಸುವುದರೊಂದಿಗೆ ಹಾಡು ಮುಗಿಯುತ್ತದೆ.

ಈ ಕಥನ ಕವನ ಹೆಣ್ಣೊಬ್ಬಳ ಅನೈತಿಕ ಸಂಬಂಧದ ಬಗ್ಗೆ ತಿಳಿಸುವಂತೆ ಮೇಲ್ನೋಟಕ್ಕೆ ಕಂಡು ಬರಬಹುದಾದರೂ ತನ್ನ ಆಳದಲ್ಲಿ ಅನಂತ ಅರ್ಥಸೂಕ್ಷ್ಮಗಳನ್ನು ಹೊಂದಿದೆ. ಈ ಕಥನಗೀತೆಯನ್ನು ಓದಿ ಮುಗಿಸಿದಾಗ ಮೊದಲನೆಯದಾಗಿ ಮೂಡುವ ಪ್ರಶ್ನೆ ಆ ನಾರಿ ಎಳ್ಳಿನ ಹೊಲ-ಒಳ್ಳೆಯ ಗಂಡನನ್ನು ಬಿಟ್ಟು ಆ ಜೋಗಿಯ ಹಿಂದೆ ಯಾಕೆ ಹೋದಳು? ಅದಕ್ಕುತ್ತರವಾಗಿ "ಅವಳು ಜೋಗಿಯಲ್ಲಿ ಪ್ರೀತಿ ಹುಟ್ಟಿ ಹೋದಳು" ಎಂದು ಹೇಳಬಹುದಾದರೂ ಆ ಪ್ರೀತಿ ಸಾಧುವೆ? ಅಥವಾ ಅದು ಪ್ರೇಮವೆ? ಕಾಮವೆ?ಎಂಬ ಸಂದಿಗ್ಧಗಳು ಹುಟ್ಟಿಕೊಳ್ಳುತ್ತವೆ. ಆಕೆಯ ಗಂಡ ಒಳ್ಳೆಯವ ನಿಜ, ಆದರೆ ಆತ ಅವಳ ಪ್ರೀತಿಯ ಮಟ್ಟಕ್ಕೆ ಏರಲು ವಿಫಲನಾಗಿರಬಹುದೆ? ಅಸಲು ಪ್ರೀತಿಯಲ್ಲಿ ಒಂದು 'ಮಟ್ಟ' ಎನ್ನುವುದಾದರೂ ಇದೆಯೆ? "ಹೃದಯ ಭಾವ ಹೊಮ್ಮಿಸುವುದಕೆ ಭಾಷೆ ಒರಟು ಉಹಾನ"ವಾಗಿರುವಾಗಪ್ರೀತಿಯನ್ನು ಒಂದು ಮಟ್ಟದಿಂದ ಅಳೆಯಲಾದೀತೆ? ಈ ಎಲ್ಲಾ ಪ್ರಶ್ನೆಗಳಿಗಿಂತ ಮೊದಲು ಈ ಕವನ ರಚನೆಗೊಂಡ ಸಾಮಾಜಿಕ ಹಿನ್ನೆಲೆಯನ್ನು ಗಮನಿಸಿದಾಗ ಅದು ಕಟ್ಟಿಕೊಳ್ಳುವ ಅರ್ಥವ್ಯಾಪ್ತಿ ಹೆಚ್ಚು ಸ್ಪಷ್ಟವಾಗುತ್ತದೆ.

ಭಾರತೀಯ ಗ್ರಾಮೀಣ ಸಮಾಜದಲ್ಲಿ 'ಬಾಲ್ಯ ವಿವಾಹ ಪದ್ಧತಿ, ತುಂಬಾ ಪ್ರಾಚೀನ ಕಾಲದಿಂದಲೇ ಬಳಕೆಯಲ್ಲಿತ್ತು. ೨೧ನೇ ಶತಮಾನಕ್ಕೆ ಅಡಿಯಿಟ್ಟಿರುವ ಪ್ರಸ್ತುತ ದಿನಗಳಲ್ಲಿಯೂ ಸಹ ಅಲ್ಲೊಂದು ಇಲ್ಲೊಂದು ಬಾಲ್ಯ ವಿವಾಹದ ಸುದ್ದಿಗಳನ್ನು ಓದುತ್ತಿರುತ್ತೇವೆ. ತುಂಬ ಚಿಕ್ಕ ವಯಸ್ಸಿನಲ್ಲಿಯೇ ಅಂದರೆ ಹುಡುಗ-ಹುಡುಗಿ ಪ್ರಬುದ್ಧಕ್ಕೆ ಬರುವ ಮುಂಚಿತವಾಗಿಯೇ ನೆರವೇರುವ ವಿವಾಹಗಳನ್ನು ಬಾಲ್ಯ ವಿವಾಹ ಎಂದು ಕರೆಯಬಹುದು. ಬಾಲ್ಯ ವಿವಾಹದ ಕಾಲಘಟ್ಟದಲ್ಲಿ ಹೆಣ್ಣುಮಕ್ಕಳ ಜನಸಂಖ್ಯೆ ಕಡಿಮೆ ಇದ್ದಿರಬಹುದು. ಅಥವಾ ಅದೊಂದು ಕುರುಡು ಸಂಪ್ರದಾಯವಾಗಿ ಬೆಳೆದುಕೊಂಡು ಬಂದಿರಲೂಬಹುದು. ಇಲ್ಲವೇ ಹೆಣ್ಣಿನ ಬೌದ್ಧಿಕ, ದೈಹಿಕ ಸ್ವಾದೀನತೆಗೆ ಪುರುಷ ಪ್ರಧಾನ ಸಮಾಜ ವ್ಯವಸ್ಥೆ ಇದನ್ನೊಂದು ಅಸ್ತ್ರವಾಗಿ ಬಳಸಿರಲೂಬಹುದು. ಅಂತೂ ಈ ವಿವಾಹಕ್ಕೆ ಸಿಲುಕಿದವರು ಪ್ರಬುದ್ಧಕ್ಕೆ ಬರುವ ಮುಂಚೆಯೇ ಅಂದರೆ ಗಂಡ-ಹೆಂಡತಿ ದಾಂಪತ್ಯ ಸಮಾಗಮ ಮೊದಲಾದ ಸಂಗತಿಗಳ ಸರಳ ತಿಳುವಳಿಕೆಯು ಸಹ ಮೂಡುವ ಮೊದಲೇ ಗಂಡ-ಹೆಂಡತಿಯರಾಗಿ ಬಿಡುತ್ತಿದ್ದರು. ನಂತರ ಹೆಣ್ಣು 'ಋತುಮತಿ'ಯಾದಾಗ 'ಪ್ರಸ್ತ'(ಸಮಾಗಮ) ಕಾರ್ಯವನ್ನು ನೆರವೇರಿಸಿ ಅವರ ದಾಂಪತ್ಯ ಬದುಕಿಗೆ ನಾಂದಿ ಹಾಡಲಾಗುತ್ತಿತ್ತು. ಈ ಪ್ರಕ್ರಿಯೆಯಲ್ಲಿ ಅನೇಕ ಬಾರಿ ಗಂಡಿನ ವಯಸ್ಸು ಹೆಚ್ಚಾಗಿದ್ದು ಹೆಣ್ಣು ಋತುಮತಿಯಾದಾಗ ಆತ ಆದಾಗಲೇ ಮಧ್ಯವಯಸ್ಸಿಗೆ ಬಂದಿರುವ ಸಾಧ್ಯತೆಯೂ ಉಂಟು. ಅಂತೂ ಆತನ ವಯಸ್ಸು, ಮುಖಚರ್ಯೆ, ಹಾವ-ಭಾವ, ಅಭಿರುಚಿ, ನಡೆ-ನುಡಿ ಒಟ್ಟು ಆತನ ವ್ಯಕ್ತಿತ್ವ ಹೇಗೇ ಇದ್ದರೂ ಅವಳು ಆತನನ್ನು ಸ್ವೀಕರಿಸುವುದು ಅನಿವಾರ್ಯವಾಗುತ್ತಿತ್ತು. ಇಂತಹ ಸನ್ನಿವೇಶದಲ್ಲಿ ಹೆಣ್ಣು ಅನೇಕ ಬಾರಿ ತನ್ನ ಸಹಜ ಬಯಕೆಗಳನ್ನು ಹತ್ತಿಕ್ಕಿಕೊಂಡು ಬದುಕಬೇಕಾಗಿತ್ತು. ಕಾರಣ ಅವಳು ವಾಸಿಸುವ

ಸಾಮಾಜಿಕ ಪದ್ಧತಿಗಳು ಆತೆರನಾಗಿದ್ದವು(ಈಗಲೂ ಅವು ಬದಲಾಗಿಲ್ಲ ಆ ಮಾತು ಬೇರೆ!). ವಾಸ್ತವವಾಗಿ ಪ್ರತಿ ಹೆಣ್ಣಿಗೂ ತನ್ನ ಜೀವನ ಸಂಗಾತಿಯ ಬಗ್ಗೆ ತನ್ನದೇ ಆದಂತಹ ಸುಂದರ ಕಲ್ಪನೆಗಳು ಇರುತ್ತವೆ. ಅಭಿಪ್ರಾಯಗಳಿರುತ್ತವೆ. ತನ್ನ ಬಾಳಸಂಗಾತಿಯ ಒಂದು ಕುಡಿನೋಟ, ಮುಗುಳ್ನಗು ಅವಳಲ್ಲಿ ನವಿರಾದ ಭಾವನೆಗಳನ್ನು ಮೂಡಿಸಬಹುದು, ಆತನ ನಡೆ ನಿಲುವುಗಳು, ಹಾವ-ಭಾವಗಳು, ಗುಣ-ನಡತೆಗಳು, ಅಭಿಪ್ರಾಯ-ಅಭಿರುಚಿಗಳು ಆತನ ಒಟ್ಟು ವ್ಯಕ್ತಿತ್ವ ಅವಳಲ್ಲಿ ಒಂದು ಬಗೆಯ ಅನುಭೂತಿಯನ್ನು ಹುಟ್ಟಿಸಬಹುದು. ಮುಂದೆ ಸಮಾಗಮದ ಸಂದರ್ಭದಲ್ಲಿ ಆತನ ಸ್ಪರ್ಶ, ಬಿಸಿಯುಸಿರು, ಅವಳಲ್ಲಿ ರಸ ರೋಮಾಂಚನಗಳನ್ನುಂಟು ಮಾಡಿ ಬೇರೆಯದೆ ಲೋಕಕ್ಕೆ ಕರೆದೊಯ್ದು ಸ್ವರ್ಗಕ್ಕೆ ಕಿಚ್ಚು ಹಚ್ಚಬಹುದು. ಹೀಗೆ ಬಾಳಸಂಗಾತಿಯಿಂದ ಘಟಿಸುವ ಪ್ರತೀ ವಿದ್ಯಮಾನವೂ ಅವಳ ಭಾವಲೋಕವನ್ನು ಹೊಕ್ಕು, ಮೈ-ಮನಗಳನ್ನು ಆವರಿಸಿ ಪರಿಪೂರ್ಣತೆಯ ಒಂದು ಅರ್ಥ ಅನುಭವಗಳನ್ನು ತಂದು ಕೊಡಬಹುದು. ಹೀಗೆ ಮುಂದೆ ಬದುಕಿನುದ್ದಕ್ಕೂ ಈ 'ಸ್ಪಂದನಾಶೀಲತೆ'ಯನ್ನು ಉಳಿಸಿಕೊಂಡು, ಬೆಳೆಸಿಕೊಂಡು ಎಂತಹ ವಿಷಮ ಪರಿಸ್ಥಿತಿಗಳನ್ನು ಎದುರಿಸಿ ಎರಡು ಜೀವಗಳ ಭಾವಸಂಗಮದೊಂದಿಗೆ ಬದುಕುವುದೇ ನಿಜವಾದ ಪ್ರೀತಿ ಎನಿಸುವುದು. ಇದೇ ಪ್ರೀತಿಯ ಪಕ್ವತೆ. ಇದೇ ಸುಖೀ ದಾಂಪತ್ಯದ ತಿರುಳು. ಊಟ, ನಿದ್ರೆ, ಮೈಥುನಗಳನ್ನು ಮೀರಿ ಪ್ರೀತಿಯ ಆಯಾಮಗಳು ತೆರೆದುಕೊಳ್ಳುವ ಬಗೆಯಿದು. ಅದನ್ನೇ ಬೇಂದ್ರೆ ಅವರು-

ಅನ್ನಕೆ ಬಾಳಾಗಿ ಕಾಮಕೆ ಹೋಳಾಗಿ
ಮಾನಕೆ ಆಳಾಗಿ ಉಸಿರೆಳೆದುದು
ಬಾಳಲ್ಲ ಬದುಕಲ್ಲ; ಜೀವಜೀವಕೆ ಉ-
ದ್ದೀಪನವಾದುದೆ ಜೀವನವು

ಎಂದು ತಮ್ಮ ಸಖೀಗೀತೆಯಲ್ಲಿ ಹೇಳಿದ್ದಾರೆ. ಹೀಗೆ ದಾಂಪತ್ಯ ಬದುಕಿನಲ್ಲಿ ತನ್ನ ಬಾಳಸಂಗಾತಿಯಿಂದ ಇಷ್ಟೆಲ್ಲಾ ಪ್ರಕ್ರಿಯೆಗಳನ್ನು ನಿರೀಕ್ಷಿಸುವ ಹೆಣ್ಣಿಗೆ ಅಕಸ್ಮಾತಾಗಿ ಅವುಗಳು ಸಿಗದೇ ಹೋದರೆ? ಒಂದು-ಅಹು 'ಇದು ನನ್ನ ಕರ್ಮ' ಎಂದು ಜೀವಚ್ಛವದಂತೆ ಬದುಕುಬಹುದು('ಪ್ರೀತಿ ಇಲ್ಲದ ಜೀವನ ಮರಣಕ್ಕೆ ಸಮಾನ' ಎಂಬ ಗಾದೆ ಇಂತಹವರನ್ನು ಕಂಡೇ ಹುಟ್ಟಿರುವಂತಿದೆ!) ಎರಡು-'ಕಲ್ಯಾಣ ಶಕ್ತಿಯ ಕಾರ್ಯಕುಶಲತೆಯಿಂದ ಪಾಕವಾಗಲಿ ಪ್ರೇಮ...'(ಸಖೀಗೀತ) ಎಂಬ ಆಶಯಗಳೊಂದಿಗೆ ನಿರಂತರ ನಿರೀಕ್ಷೆಗಳಲ್ಲಿ ತನ್ನ ಬದುಕನ್ನು ಸವೆಸಿ ಅದರಲ್ಲಿ ಯಶಸ್ಸುಗೊಳಿಸಬಹುದು. ಮೂರನೆಯದಾಗಿ ಅಂದರೆ ಇವೆರಡೂ ಸಾಧ್ಯತೆಗಳು ಇಲ್ಲದ ಪಕ್ಷದಲ್ಲಿ ಅವಳು ಹೀಗೆ ಜೋಗಿಯ ಹಿಂದೆ ಹೊರಟು ಹೋಗಬಹುದು. ಕಿನ್ನೂರಿ ನುಡಿಸುವವನ ದನಿ ಮೆಚ್ಚಿ, ಬೆರಳಿನಂದವ ಮೆಚ್ಚಿ! ಬಹುಶಃ ತನ್ನ ಮನದಾಳದ ಅನಿಸಿಕೆ, ಅನುಭವಗಳನ್ನು ಅನಾವರಣಗೊಳಿಸಿ ಅದರಂತೆ ಬದುಕುವ ಛಾತಿ ಇರುವುದು ಜನಪದ ಸಾಹಿತ್ಯ ಲೋಕದ

ಮಹಿಳೆಗೆ ಮಾತ್ರವೇನೋ! ಈ ಕಥನ ಕವನದ ನಾಯಕಿ 'ಮೊಗ್ಗಾಗಿ ಬಾರೋ ತುರುಬೀಗೆ...' ಎಂದು ಜೋಗಿಯನ್ನು ಆಹ್ವಾನಿಸುವ ರೀತಿಯಂತೂ ಪುರುಷ ಪ್ರಧಾನತೆಗೆ ಪ್ರತಿರೋಧ ಒಡ್ಡುವ ಸಂಗಾತಿಯಾಗಿದೆ. ಆದರೆ ಈ ಪ್ರತಿರೋಧ ಯಾವುದೋ ಒಂದು ಚಪಲಕ್ಕೋ, ಅಹಂಕಾರಕ್ಕೋ ತಳೆದ ಪ್ರತಿರೋಧವಲ್ಲವೆಂಬುದನ್ನು ಇಲ್ಲಿ ಗಮನಿಸಬೇಕು. ಶಿಷ್ಟ ಸಂಪ್ರದಾಯದಲ್ಲಿ ಸಾಮಾನ್ಯವಾಗಿ ಪುರುಷನೊಬ್ಬ ವಿವಾಹೇತರ ಸಂಬಂಧಕ್ಕೆಳೆಸಿದರೆ ಅದನ್ನು ಹೆಂಡತಿಯಾದವಳು ಖಂಡಿಸಿದರೆ "ಅವನಿಗೇನು ಗಂಡ್ಸು ನಾಕ್ ಹೂವಾ ಮುಡಿತಾನೆ, ನಾವು ಹೆಣ್ಣುಮಕ್ಕಳು ನಮ್ಮ ಪಾಡಿಗೆ ತೆಪ್ಗಿರ್ಬೇಕು.." ಎಂದು ಹಿರಿಯರಾದ ಹೆಣ್ಣುಮಕ್ಕಳು ಆತನ ವರ್ತನೆಯನ್ನು ಸಮ್ಮತಿಸುವ ಸೂಚನೆಯ ಸ್ಥಿತಿಯಿದೆ! ಅದೇ ಕೆಲಸವನ್ನು ಆತನ ಹೆಂಡತಿಯಾದವಳು ಮಾಡಿದರೆ? ಅದರ ಕತೆಯೇ ಬೇರೆ! ಅಂದರೆ ಈ ಮಾತಿನ ಅರ್ಥ 'ಗಂಡಿ'ಗಿಂತ ಹೆಣ್ಣೇನು ಕಡಿಮೆ? ಆತ ವಿವಾಹಬಾಹಿರವಾಗಿ ನಾಲ್ಕು ಸಂಬಂಧಗಳನ್ನಿಟ್ಟುಕೊಂಡರೆ ಈಕೆ ಎಂಟು ಸಂಬಂಧಗಳನ್ನು ಇಟ್ಟುಕೊಳ್ಳಲಿ' ಎಂದಲ್ಲ. ಪುರುಷನೊಬ್ಬ, ಯಾವುದೋ ಚಪಲಕ್ಕೋ, ಮೋಜಿಗೋ, ಅಥವಾ ತನ್ನ ಪೌರುಷ ಮೆರೆಯಲೋ ವಿವಾಹಬಾಹಿರವಾದ ಸಂಬಂಧಕ್ಕೆಳೆಸುವುದಾದರೆ ಮಹಿಳೆ ತನ್ನ ಅಸಹಜ ಬದುಕಿನಿಂದ ಸ್ಪಂದನಾರಹಿತ ದಾಂಪತ್ಯ ಜೀವನದಿಂದ ಹೊರಬರುವ ಪ್ರಯತ್ನ ಅನುಚಿತ ಹೇಗೆ ಎಂಬ ವಿಚಾರ ಜನಪದ ಸಾಹಿತ್ಯ ಲೋಕದಲ್ಲಿ ಆ ರೀತಿಯ ಪ್ರಯತ್ನಗಳಿಗೆ ಆಸ್ಪದವಿದೆ. ಈ ಕಥನಗೀತೆಯ ನಾಯಕಿಯ ಗಂಡ ಒಳ್ಳೆಯವ ನಿಜ. ಆತನೇನು ಅನ್ಯ ಸಂಬಂಧಕ್ಕೆಳೆಸಿದಂತೆ ಕಾಣುವುದಿಲ್ಲ. ಆದರೂ ಆತನೊಂದಿಗೆ 'ಸ್ಪಂದನಾಶೀಲ' ದಾಂಪತ್ಯ ಅವಳಿಗೆ ಸಾಧ್ಯವಾಗುವುದಿಲ್ಲ. ಇದಕ್ಕೆ ಕಾರಣ ಆತನ ವಯಸ್ಸೂ ಇರಬಹುದು. ಅವರಿಬ್ಬರ ನಡುವೆ ವಯಸ್ಸಿನ ಅಂತರ ಅಪಾರವಿದ್ದು, ಅವರ ದಾಂಪತ್ಯ ಬದುಕಲ್ಲಿ ಸ್ಪಂದನಾರಹಿತತೆ ತಲೆದೋರಬಹುದು. ಆಗ ಅವಳು ಕಿನ್ನೂರಿ ನುಡಿಸುವವನ ದನಿ ಮೆಚ್ಚಿ ಬೆರಳಿನಂದವ ಮೆಚ್ಚಿ ಅದಮ್ಯ ಜೀವನೋತ್ಸಾಹದೊಂದಿಗೆ ಆತನೊಂದಿಗೆ ಹೊರಡುತ್ತಾಳೆ. ಅವಳಿಗೆ ತನ್ನ ಮೈ-ಮನಗಳ ನರನಾಡಿಗಳನ್ನು ತಟ್ಟಬಲ್ಲ ಪ್ರೀತಿ ಬೇಕು. ಆ ಪ್ರೀತಿಯನ್ನು ಜೋಗಿ ಅವಳಿಗೆ ಕೊಡಬಲ್ಲವನಾಗಿದ್ದಾನೆ. ಈ ಕಥನಕವನದ ನಾಯಕಿ ದಾಂಪತ್ಯದ ಎಲ್ಲೆಯನ್ನು ದಾಟಿದ್ದರೂ ಅವಳ ಪಾತ್ರದ ಗೇಯತೆಗೆ ಧಕ್ಕೆ ಬರುವುದಿಲ್ಲ. ಇಂತಹ ಸಂಗತಿಗಳು ಜನಪದ ಸಾಹಿತ್ಯ ಲೋಕದಲ್ಲಿ ಮಾತ್ರ ಸಾಧ್ಯವೇನೋ! ಅಂಧಪತನದ ಹಾದಿಯಲ್ಲಿ (ಶಿಷ್ಟ ಸಂಪ್ರದಾಯದಲ್ಲಿ ಅದು ಖಂಡಿತವಾಗಿಯೂ ಅಂಧಪತನವೇ ಸರಿ. ಅಲ್ಲಿ ಮಹಿಳೆಯ ಮಾನಸಿಕ ತುಮುಲಗಳಿಗಿಂತ ಸಂಪ್ರದಾಯ ಶರಣತೆಗೆ ಹೆಚ್ಚಿನ ಬೆಲೆ!) ಹೆಣ್ಣನ್ನು ಸಹ ಮಾನವೀಯ ದೃಷ್ಟಿಕೋನದಿಂದ ನೋಡಲಾಗಿದೆ. ಪಾತ್ರಗಳು ಇಲ್ಲಿ ಸಹಜವಾಗಿಯೇ ಅರಳಿಕೊಂಡಿವೆ. ಅದಮ್ಯವಾದ ಜೀವನ ಪ್ರೀತಿಯನ್ನು ಉಕ್ಕಿಸುವ ಕಥನಕಾವ್ಯ ಇದಾಗಿದೆ. ಇದೇ ಕಥನಕಾವ್ಯ ವಸ್ತುಶಿಷ್ಟ ಕಾವ್ಯದಲ್ಲಾಗಿದ್ದರೆ? ಅಥವಾ ನಮ್ಮ ಜನ್ನ ಮಹಾಕವಿಯ ಕೈಗೇನಾದರೂ ಈ ಕಾವ್ಯವಸ್ತು ಸಿಕ್ಕಿದ್ದರೆ? ಇಲ್ಲಿನ ಪಾತ್ರಗಳು

ಅಮೃತಮತಿ-ಅಷ್ಟಾವಂಕರಂತೆ ಅಕಾರಳ ವಿಕಾರಳವಾಗಿ ಇದು ಇನ್ನೊಂದು ಯಶೋಧರ ಚರಿತೆಯಾಗುತ್ತಿತ್ತು! ಏನ್ಮಾಡೋದು ಸ್ವಾಮಿ! ಕಾವ್ಯ ವಸ್ತುವೊಂದರ ಪಾತ್ರಗಳು ಕವಿಯ ಮೂಗಿನ ನೇರಕ್ಕೆ ಕುಣಿಯಬೇಕಾದ್ದು ಕಾವ್ಯ ಧರ್ಮ(?)! ಅದು ಅವುಗಳ (ಪಾತ್ರಗಳು) ಕರ್ಮ!.

ಜನಪದ ಹಾಗೂ ಶಿಷ್ಟ ಕಾವ್ಯಗಳ ನಡುವಿನ ಅಂತರವು ಕ್ರಮವಾಗಿ ಸಹಜ-ಅಸಹಜಗಳ ನಡುವಿನ ಅಂತರವಾಗಿದೆ. ಜನಪದದಲ್ಲಿ ಯಾವುದು ಸಹಜವೋ ಶಿಷ್ಟದಲ್ಲಿ ಅದು ಅಸಹಜವಾಗಿ ಬಿಡುತ್ತದೆ!(ಜನಪದ ಕಾವ್ಯದಲ್ಲಿ ಶಿಷ್ಟ ಮೌಲ್ಯಗಳು ಅಲ್ಲಲ್ಲಿ ನುಸುಳಿವೆಯಾದರೂ ಅದು ಕಾವ್ಯದ ಒಟ್ಟು ಆಶಯವಲ್ಲ) ಕಾವ್ಯ ವಸ್ತುವೊಂದರ ಪಾತ್ರಗಳು ಜನಪದದಲ್ಲಿ ಜೀವಂತವಾಗಿ ಅರಳಿಕೊಂಡರೆ ಅದೇ ಪಾತ್ರಗಳು ಶಿಷ್ಟದಲ್ಲಿ ಅಕಾರಳ ವಿಕಾರಳವಾಗಿಬಿಡುತ್ತವೆ! ಅದೇನೇ ಇರಲಿ ಈ ಕಥನಗೀತೆಯ ಹಿನ್ನೆಲೆಯಾಗಿ ಸಮಾಜದಲ್ಲಿ ಅನಿಷ್ಟ ಪದ್ಧತಿಯಾಗಿದ್ದ ಬಾಲ್ಯವಿವಾಹದ ಪ್ರಭಾವವನ್ನು ಊಹಿಸಬಹುದು. ಇದು ಹೌದಾದರೆ ಬಾಲ್ಯವಿವಾಹ ಪದ್ಧತಿಯ ಉಪ್ಪೋತ್ಪನ್ನವೇ ಈ ಕಥನಗೀತೆ ಎನ್ನಬಹುದು.

ನಾವಿಂದು ಬಾಲ್ಯವಿವಾಹದ ಆಚೆ ನಡಿಗೆಯನ್ನು ಸಾಗಿಸಿದ್ದೇವೆ. ಆದರೂ ಅನೇಕ ಕಾರಣಗಳಿಂದಾಗಿ ಭಾಗಶಃ ಮಹಿಳೆಯರು'ಸಂವೇದನಾರಹಿತ' ದಾಂಪತ್ಯ ಜೀವನದ ಸಂಕೋಲೆಗಳಲ್ಲಿ ಸಿಕ್ಕು ನರಳುತ್ತಿದ್ದಾರೆ. ಬದಲಾಗುತ್ತಿರುವ ಪರಿಸ್ಥಿತಿಗಳು ಕಾಲ-ದೇಶಗಳನ್ನು ಮೀರಿ ಅವರ ಸಂಕೋಲೆಗಳಿಗೆ ಹೊಸ ಆಯಾಮಗಳನ್ನು ತಂದುಕೊಡುತ್ತಲಿವೆ. 'ಸಂವೇದನಾಶೀಲ' ದಾಂಪತ್ಯ ನೆಲೆಗೊಳ್ಳಲು ನಮ್ಮ ಸಾಮಾಜಿಕ ಸಂರಚನೆಗಳಲ್ಲಿಯೇ ಬದಲಾವಣೆಗಳಾಗಬೇಕಿದೆ. ಹೊಸ ತಿಳುವಳಿಕೆಗಳು ಮೂಡಬೇಕಿದೆ. ಸ್ಪಂದನಾಶೀಲ ದಾಂಪತ್ಯವು ಸ್ವಸ್ಥ ಕುಟುಂಬದ ತಳಹದಿಯಾಗಿದ್ದು ಸಮಾಜದ ಒಳಿತು ಅದರಲ್ಲಡಗಿದೆ. ಇದು ಸಾಕಾರವಾಗಬೇಕಾದರೆ ನಮ್ಮ ಶಿಕ್ಷಣ ಸೌಲಭ್ಯಗಳು ಗ್ರಾಮೀಣ ಹೆಣ್ಣುಮಕ್ಕಳಿಗೂ ವಿಸ್ತರಿಸಬೇಕಿದೆ. ಮದುವೆಯಂತಹ ಪ್ರಮುಖ ಸಂಗತಿಗಳಲ್ಲಿ ಅದು ಮುಖ್ಯವಾಗಿ ಬಾಳಸಂಗಾತಿ ಆಯ್ಕೆ ವಿಷಯದಲ್ಲಿ ಮಹಿಳೆಯರಿಗೆ ಅವಕಾಶ ಕಲ್ಪಿಸಬೇಕಿದೆ. ಮಹಿಳೆಯ ಮನಸ್ಸಿನ ಭಾವ, ಲಯ, ಅಭಿರುಚಿಗಳಿಗೆ ಅನುಗುಣವಾಗಿ ಅವಳ ಬಾಳಸಂಗಾತಿಯ ಆಯ್ಕೆಯ ಸ್ವಾತಂತ್ರ್ಯ ಅವಳಿಗಿರಬೇಕು. ಇದು ಅವಳ ಹಕ್ಕೂ ಕೂಡ.

# ಓದಿಗೆ ನೆರವು

*ಅನುಸೂಯಾ ಕದಂ*

**ಪಿಎಚ್.ಡಿ ವಿದ್ಯಾರ್ಥಿನಿ**

ಕನ್ನಡದಲ್ಲಿ ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿದಂತೆ ನಡೆಯುತ್ತಿರುವ ಅಧ್ಯಯನಗಳು ಕೇವಲ ಮೂರು ದಶಕಗಳಿಂದ ಈಚಿನವು ಎನ್ನಬಹುದು. ಸಂಖ್ಯೆಯ ದೃಷ್ಟಿಯಿಂದ ಈ ಕುರಿತು ಬಂದಿರುವ ಕೃತಿಗಳು ಅಷ್ಟೇನೂ ವಿಸ್ತೃತವಾಗಿಲ್ಲ. ಹಾಗಾಗಿ ಈಗಾಗಲೇ ಈ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ತಜ್ಞರಿಗೆ ಹಿರಿಯರಿಗೆ ಈ ಎಲ್ಲಾ ಕೃತಿಗಳ ಪರಿಚಯ ಇರುವುದು ಸಹಜ. ಆದರೆ ಹೊಸದಾಗಿ ಈ ಕ್ಷೇತ್ರವನ್ನು ಪ್ರವೇಶಿಸಿದವರಿಗೆ ಹಾಗೂ ವಿದ್ಯಾರ್ಥಿಗಳಿಗೆ ಈ ಮೂರು ದಶಕಗಳಲ್ಲಿ ಈ ಕ್ಷೇತ್ರದಲ್ಲಿ ನಡೆದಿರುವ ಅಧ್ಯಯನಗಳನ್ನು ಪರಿಚಯಿಸುವುದು ಉಪಯುಕ್ತವಾಗುತ್ತದೆ ಈ ಕಾರಣದಿಂದ ಪ್ರಸ್ತುತ ಸಂಚಿಕೆಯಿಂದ ಕಳೆದ ಮೂರು ದಶಕಗಳಲ್ಲಿ ಕನ್ನಡದಲ್ಲಿ ಪ್ರಕಟಗೊಂಡ ಮಹಿಳಾ ಅಧ್ಯಯನ ಸಂಬಂಧಿ ಕೃತಿಗಳನ್ನು ಸಾಧ್ಯವಾದಷ್ಟು ವಿಸ್ತಾರವಾಗಿ ಪರಿಚಯಿಸಲು ಉದ್ದೇಶಿಸಲಾಗಿದೆ.

ಈ ಸಂಚಿಕೆಯಲ್ಲಿ ಸೈದ್ಧಾಂತಿಕ ಮತ್ತು ತಾತ್ವಿಕ ಚಿಂತನೆ ಚರ್ಚೆಗಳನ್ನು ಒಳಗೊಂಡ ಕೆಲವು ಪುಸ್ತಕಗಳನ್ನು ಪಟ್ಟಿ ಮಾಡಿ ಅವುಗಳಲ್ಲಿ ಕೆಲವನ್ನು ವಿವರಗಳಲ್ಲಿ ಪರಿಚಯಿಸಲಾಗಿದೆ. ಈ ಪ್ರಯತ್ನವನ್ನು ಮುಂದಿನ ಸಂಚಿಕೆಗಳಲ್ಲಿ ಇನ್ನಷ್ಟು ಬೆಳೆಸುತ್ತಾ ಹಳೆಯ ಹಾಗೂ ಹೊಸ ಪ್ರಕಟಣೆಗಳ ಪಟ್ಟಿಕೊಡುವುದು. ಅವುಗಳಲ್ಲಿ ಮುಖ್ಯ ಚರ್ಚೆ ಇರುವಂಥವನ್ನು ವಿವರವಾಗಿ ಪರಿಚಯಿಸುವುದು ಉದ್ದೇಶವಾಗಿದೆ.

ಈ ಕ್ಷೇತ್ರದಲ್ಲಿ ಬಂದಿರುವ ಇಂಗ್ಲೀಶ್ ಪುಸ್ತಕಗಳು ಅಪಾರ ಸಂಖ್ಯೆಯಲ್ಲಿವೆ. ಅನೇಕ ಆಯಾಮಗಳ ಚರ್ಚೆಗಳನ್ನು ಬೆಳೆಸಿದ ದೇಶಿಯ ಹಾಗೂ ವಿದೇಶಿಯ ಚಿಂತಕರ ಇಂಗ್ಲೀಶ್ ಕೃತಿಗಳು ಸಾಕಷ್ಟು ಸಂಖ್ಯೆಯಲ್ಲಿ ವರ್ಷ ವರ್ಷವು ಪ್ರಕಟಗೊಳ್ಳುತ್ತಲೇ ಇರುತ್ತವೆ. ಅನೇಕ ಅನಿವಾರ್ಯ ಕಾರಣಗಳಿಂದಾಗಿ ಈ ಎಲ್ಲ ಪುಸ್ತಕಗಳನ್ನು ನಾವು ನೋಡುವುದು ಸಾಧ್ಯವಾಗಲಾರದು. ಆದರೂ ಒಂದು ನಿಯಮಿತ ಕ್ರಮದಲ್ಲಿ ಆಬಗ್ಗೆ ಗಮನಹರಿಸಿ ಅಂತಹ ಮುಖ್ಯ ಇಂಗ್ಲೀಶ್ ಕೃತಿಗಳ ಪಟ್ಟಿಯನ್ನು ನೋಡಲೂ, ಸಾಧ್ಯವಾದರೆ ಅವುಗಳಲ್ಲಿ ಕೆಲವನ್ನಾದರೂ ವಿವರಗಳಲ್ಲಿ ಪರಿಚಯಿಸಲು ಯೋಜಿಸಲಾಗಿದೆ.

ಈ ಪ್ರಯತ್ನ ಬಹುಮುಖ್ಯವಾಗಿ ವಿದ್ಯಾರ್ಥಿಗಳನ್ನು, ಹೊಸದಾಗಿ ಈ ಕ್ಷೇತ್ರದಲ್ಲಿ ಪ್ರವೇಶ ಪಡೆಯಲು ಬಯಸುವವರನ್ನು ಗಮನದಲ್ಲಿಟ್ಟುಕೊಂಡಿದೆ.

**ಪುಸ್ತಕ ಪರಿಚಯ**

**ಮಹಿಳೆಯರ ಮೇಲಾಗುತ್ತಿರುವ ದೌರ್ಜನ್ಯಗಳು**

ಲೇ : ವೀಣಾ ಸಂಕನಗೌಡರ

ಪ್ರ : ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ

ಪು : ೮೭, ೧೯೯೪

ಪ್ರಸ್ತುತ ಕೃತಿಯು ವೀಣಾ ಸಂಕನಗೌಡರ ಅವರ ಉಪನ್ಯಾಸ ಶಿಬಿರದ್ದು, ಮಹಿಳೆ ಯಾವರೀತಿಯಲ್ಲಿ ಶೋಷಣೆಗೆ ಸಮಸ್ಯೆಗಳಿಗೆ ಗುರಿಯಾಗುತ್ತಿದ್ದಾಳೆ ಎಂಬುದನ್ನು ವಿವರಿಸುತ್ತದೆ. ಇಲ್ಲಿ ನಾಲ್ಕು ಜಿಲ್ಲೆಗಳ ಸಮೀಕ್ಷೆಯ ಮೂಲಕ ಮಹಿಳೆಯು ವಿವಿಧ ರೂಪದಲ್ಲಿ ದೌರ್ಜನ್ಯಕ್ಕೆ ಒಳಗಾಗಿದ್ದಾಳೆ ಎಂಬುದನ್ನು ಅಂಕಿ-ಅಂಶಗಳ ಮೂಲಕ ಸ್ಪಷ್ಟ ಚಿತ್ರಣ ನೀಡುತ್ತದೆ. ಮಹಿಳೆಯ ಶೋಷಿತ ವಿವಿಧ ರೂಪಗಳನ್ನು ಲೇಖಕಿ ವಿವರಿಸಿದ್ದಾರೆ. ಸಮಾಜದಲ್ಲಿರುವ ಸಾಮಾಜಿಕ ಪಿಡುಗುಗಳಾದ ಬಾಲ್ಯವಿವಾಹ, ಸತಿಸಹಗಮನ, ದೇವದಾಸಿ ಪದ್ಧತಿ, ವರದಕ್ಷಿಣೆ, ಅತ್ಯಾಚಾರ, ಲಿಂಗಬೇಧ ಹೀಗೆ ಹತ್ತುಹಲವು ಸಮಸ್ಯೆಗಳ ಆಗರದಲ್ಲಿ ಇಂದು ಮಹಿಳೆ ಬದುಕುತ್ತಿದ್ದಾಳೆ. ಈ ಆಧುನಿಕ ಯುಗದಲ್ಲಿ ಮಹಿಳಾ ಜಾಗೃತಿ ಆಂದೋಲನ ನಡೆಯುತ್ತಿದ್ದರೂ ಮಹಿಳೆ ಇನ್ನೂ ಹೆಚ್ಚಿನ ಸಮಸ್ಯೆಗಳಿಗೆ ಸಿಲುಕಿದ್ದಾಳೆ ಎಂಬುದನ್ನು ಈ ಕೃತಿಯಿಂದ ತಿಳಿದುಕೊಳ್ಳಬಹುದು.

**ಸ್ತ್ರೀಶಕ್ತಿ ಜಾಗೃತಿ**

ಲೇ : ಸರಲಾದೇವಿ
ಟಿ.ಎಸ್.ಅನಂತರಂಗಾಚಾರಿ

ಪ್ರ : ಕರ್ನಾಟಕ ಸರ್ವೋದಯ ಮಂಡಲ ಬೆಳಗಾವಿ

ಪು : ೯೪, ಬೆಲೆ:ರೂ.೧೫-೦೦, ೧೯೭೪

ಈ ಕೃತಿಯು ಸ್ತ್ರೀ ಜಾಗೃತಿ ಸಪ್ತಾಹದಲ್ಲಿ ನಡೆದ ಚರ್ಚೆಗಳಲ್ಲಿನ ಒಂದು ವೈಚಾರಿಕ ಗುಚ್ಛವಾಗಿದೆ. ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವ ನೇರವಾಗಿ ಮಹಿಳೆಯರ ವ್ಯಕ್ತಿತ್ವ ಮತ್ತು ವಿಕಾಸದ ಮೇಲೆ ಆಗುತ್ತಿದೆ.ಹಾಗೂ ಬೌದ್ಧಿಕ ಸಭ್ಯತೆಯು ವಿರುದ್ಧ ಆಧ್ಯಾತ್ಮಿಕ ಸಂಸ್ಕೃತಿ ಹೇಗೆ ಜಾಗೃತವಾಗಬೇಕೆಂಬುದರ ಆಳವಾದ ಚರ್ಚೆ ಇಲ್ಲಿದೆ. ತಮ್ಮ ವಿಚಾರ ತಿಳಿಸಲು ಶಕ್ತರಲ್ಲದ ಮಹಿಳೆಯರಿಗೂ ವಿಚಾರವು ಸರಳವಾಗಿ ತಿಳಿಯುವರೀತಿಯಲ್ಲಿ

ಹಾಗೂ ಮಹಿಳೆಯರು ಯಾವ ರೀತಿಯಲ್ಲಿ ಬದಲಾವಣೆಯಾಗಬೇಕು, ತನ್ನ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬಹುದು ಎಂಬುದನ್ನು ವಿವಿಧ ಲೇಖಕ-ಲೇಖಕಿಯರ ವಿಚಾರಗಳ ಮೂಲಕ ತಿಳಿದುಕೊಳ್ಳಬಹುದು. ಸ್ತ್ರೀ ಆತ್ಮಬಲದ ಆಧಾರದಿಂದಲೇ ಸ್ವಾಲಂಬಿಯಾಗಲ್ಲಳು. "ಹೆಣ್ಣು ಸುರಕ್ಷಿತವಾಗಿರಬಾರದು ಸ್ವರಕ್ಷಿತರಾಗಬೇಕು" ಎಂಬುದನ್ನು ತಿಳಿಸುತ್ತದೆ.

ಸ್ತ್ರೀಪರ ಕಾಳಜಿಯ ಚಿಂತನೆಗಳು ಈ ಕೃತಿಯ ಮುಖ್ಯ ಬೇರು ಸಮಕಾಲೀನ ಜಗತ್ತಿನ ವೈಚಾರಿಕ ವಿಕಾಸದಲ್ಲಿ ಮಹಿಳೆಯರು ತಮ್ಮದೇ ದನಿಯನ್ನು ಬಿತ್ತಲು ಬೇಕಾದ ಪೂರ್ವಸಿದ್ಧತೆಗಳ ಯತ್ನವನ್ನು ಪ್ರತಿಬಿಂಬಿಸುವಂತೆ ಇಲ್ಲಿನ ಬರಹಗಳಲ್ಲಿ ನಾವು ಗಮನಿಸಬಹುದು. ಕನ್ನಡದಲ್ಲಿ ವೈಚಾರಿಕ ವಿಕಾಸದಲ್ಲಿ ಮಹಿಳೆಯರ ಒಳಸೊಲ್ಲುಗಳನ್ನು ಧ್ಯಾನಿಸಿ ಆಲಿಸಬೇಕಾದ ಪರಿಸರ ಈ ಕಾಲದಲ್ಲೂ ಮುಕ್ತವಾಗಿ ಇಲ್ಲದಿರುವಾಗ 'ಸ್ತ್ರೀಶಕ್ತಿ ಜಾಗೃತಿ' ಯಂತಹ ಬರಹಗಳನ್ನು ನಾವು ನಮ್ಮ ಮುಂದಿನ ಶೋಧಗಳಿಗೆ ಗುಣಾತ್ಮಕವಾಗಿ ಓದಿನ ಮತ್ತು ಹೋರಾಟದ ಸಂವೇದನೆಗೆ ಬಳಸಿಕೊಳ್ಳಬಹುದು.

ಆಧುನಿಕ ಕನ್ನಡ ಸಣ್ಣ ಕತೆಗಳು ಒಂದು ಸ್ತ್ರೀವಾದಿ ಅಧ್ಯಯನ

ಲೇ : ಗಿರಿಜಾಶಾಸ್ತ್ರೀ

ಪ್ರ : ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

ಪು : ೩೬ ಬೆಲೆ:ರೂ.೧೦-೦೦, ೨೦೦೦

ಈ ಪ್ರಸ್ತುತ ಕೃತಿಯು ಕತೆಗಳಲ್ಲಿ ಮಹಿಳೆಯ ಪಾತ್ರಗಳ ಬಗ್ಗೆ ತಿಳಿಸುತ್ತದೆ. ನವೋದಯದಿಂಗ ಹಿಡಿದು ನವ್ಯೋತ್ತರದವರೆಗಿನ ಕತೆಗಳನ್ನು ನಾವು ವೀಕ್ಷಿಸಿದಾಗ ಸ್ತ್ರೀ ಪಾತ್ರಗಳ ಬದಲಾವಣೆ ಕಂಡುಬರುತ್ತದೆ. ಮುಂಚೆ ಲೇಖಕರು ಸ್ತ್ರೀಯರನ್ನೇ ತನ್ನ ಕತೆಯ ಶೀರ್ಷಿಕೆ ಹಾಗೂ ಕೇಂದ್ರಬಿಂದುವಾಗಿರಿಸಿಕೊಂಡು ನಮ್ಮ ಪುರುಷಪ್ರಧಾನ ಸಮಾಜದ ಪಾರಂಪರಿಕ ದೃಷ್ಟಿಕೋನದಲ್ಲಿಯೇ ಸಿದ್ಧ ಮಾದರಿಗಳ ಅನುಕರಣೆಯಾದರೆ ನವ್ಯ ಕಥಾ ಸಾಹಿತ್ಯದಲ್ಲಿ ಸ್ತ್ರೀಪರವಾದಂತಹ ನಮ್ಮ ಸಾಮಾಜಿಕ ಮಾನದಂಡಗಳ ವಿರುದ್ಧ ಪ್ರತಿಭಟಿಸುವಂತಹ ಕತೆಗಳು ಕಂಡುಬರುತ್ತವೆ. ಅದೇರೀತಿ ನವ್ಯೋತ್ತರ ಸಂದರ್ಭದಲ್ಲಿ ಇತ್ತೀಚಿನ ಆಧುನಿಕ ಬದಲಾವಣೆ ಕಂಡುಬರುತ್ತದೆ. ಮಹಿಳೆ ಇಂದು ಜಾಗೃತಳಾಗಿ ತನ್ನ ಅಸ್ತಿತ್ವವನ್ನು ಶೋಧಿಸಿಕೊಳ್ಳುತ್ತಿದ್ದಾಳೆ.

ಕನ್ನಡದ ಕತೆಗಳಲ್ಲಿ ಸ್ತ್ರೀಯ ಪರಿಕಲ್ಪನೆಯಲ್ಲಿ ವಿಕಾಸವಾಗುತ್ತಿರುವ ಅನೇಕ ಮಾದರಿಗಳನ್ನು ಗುರುತಿಸುವ ಪ್ರಯತ್ನ ಇಲ್ಲಿನ ಕತೆಗಳಲ್ಲಿದೆ. ಆಧುನಿಕತೆಯತ್ತ ಹೇಗೆ ಮುನ್ನಡೆಯುತ್ತಿದ್ದಾಳೆ ಎಂಬುದನ್ನುಸ್ಪಷ್ಟಪಡಿಸಿಕೊಳ್ಳುವಲ್ಲಿ ಈ ಕೃತಿಯು ತುಂಬಾ ಉಪಯುಕ್ತವಾಗಿದೆ.

STATUS OF WOMEN AND FAMILY WELFARE
NIRANJAN, 2000
KANISHKA PUBLISHERS NEW DELHI
Pp.156, Rs.30-00

ಆಧುನಿಕ ಯುಗದಲ್ಲಿ ಮಹಿಳೆಯ ಕೌಟುಂಬಿಕ ಸ್ಥಿತಿಗತಿಗಳ ಬಗ್ಗೆ ಕುಟುಂಬ ಕಲ್ಯಾಣ ಹಾಗೂ ಮಹಿಳೆಯ ಸ್ಥಾನಮಾನದ ಬಗ್ಗೆ ಈ ಕೃತಿ ಬೆಳಕು ಚೆಲ್ಲುತ್ತದೆ. ಕುಟುಂಬದ ಎಲ್ಲ ಕಾರ್ಯಗಳನ್ನು ಮಹಿಳೆ ನಿರ್ವಹಿಸುತ್ತಾಳೆ. ಆದರೂ ಅವಳ ಕೆಲಸಕ್ಕೆ ಬೆಲೆ ಇಲ್ಲ. ಅದೇ ಪುರುಷ ಹೊರಗೆ ಕೆಲಸ ಮಾಡುತ್ತಾನೆ. ಆತ ಉತ್ಪಾದಕ ಎಂದು ಪರಿಗಣಿಸಲಾಗುತ್ತದೆ. ಕುಟುಂಬದಲ್ಲಿನ ಪ್ರತಿಯೊಂದು ನಿರ್ಣಯದ ಅಧಿಕಾರ ತಾನೇ ಪಡೆದಿರುತ್ತಾನೆ. ಮಹಿಳೆಯ ಅಭಿವೃದ್ಧಿಯಾಗಬೇಕಾದರೆ ಅವಳ ಮೂಲ ಬೇಡಿಕೆಗಳೇನು ಎಂಬುದನ್ನು ಅರಿತು ಮಹಿಳೆಯನ್ನೇ ಕೇಂದ್ರಬಿಂದುವಾಗಿಟ್ಟುಕೊಂಡು ಯೋಜನೆಗಳನ್ನು ರೂಪಿಸಬೇಕು.ಲಿಂಗಸಮಾನತೆ ಆಯುರ್ ಆರೋಗ್ಯ ಆರ್ಥಿಕ ಸಬಲತೆ, ಸಮಾಜದಲ್ಲಿ ಹಾಗೂ ಕುಟುಂಬದಲ್ಲಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರ ಅವಳಿಂದು ಪಡೆಯಬೇಕಾಗಿದೆ. ಭಾರತೀಯ ಜನಸಂಖ್ಯಾ ನಿಯಂತ್ರಣಕ್ಕಾಗಿ ಸ್ತ್ರೀ-ಪುರುಷ ಇವರೀರ್ವರಲ್ಲಿ ಯಾರಾದರೂ ಶಸ್ತ್ರಚಿಕಿತ್ಸೆ ಪಡೆಯಬಹುದು. ನಮ್ಮ ಸಮಾಜದಲ್ಲಿ ಮಹಿಳೆಯೇ ಶಸ್ತ್ರಚಿಕಿತ್ಸೆಗೊಳಗಾಗುತ್ತಾಳೆಯೇ ಹೊರತು ಪುರುಷನಲ್ಲ ಎಂಬ ಸ್ಪಷ್ಟ ಚಿತ್ರಣ ನೀಡುತ್ತದೆ.

**ಗಮನಿಸಿದ ಪುಸ್ತಕಗಳು**

೦೧. ಅನುಪಮ ನಿರಂಜನ
ಶುಭಕಾಮನೆ, ೧೯೭೩
ವಾಣಿ ಪ್ರೆಸ್, ಮೈಸೂರು

೦೨. ಸಾವಿತ್ರಿ ಕೆ.
ಕೊಳಚೆ ಪ್ರದೇಶದಲ್ಲಿ ಮಹಿಳೆ, ೧೯೭೫
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೦೩. ಅಂಜನಾ ಗೋವಿಂದರಾಜು
ಅನಾಥ ಮಹಿಳೆಯರು, ೧೯೭೫
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೦೪. ಶಾಂತಾದೇವಿ ಮಾಳವಾಡ
ಮಹಿಳಾ ಚೇತನ, ೧೯೭೬
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೦೫. ಪದ್ಮಾ ಎಂ ಶೆಣೈ
ಭಾರತೀಯ ಸ್ತ್ರೀಸಂಸ್ಕೃತಿ ಮತ್ತು ಸಮಾಜ,೧೯೭೬
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೦೬. ಸರೋಜಿನಿ ಶಿಂತ್ರಿ
ಮಹಿಳೆ-ಸಮಸ್ಯೆಗಳು-ಸಾಧನೆಗಳು, ೧೯೭೬
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೦೭. ಸರೋಜಿನಿ ಶಿಂತ್ರಿ
ಮಹಿಳೆ ನಡೆದು ಬಂದ ದಾರಿ, ೧೯೭೭
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೦೮. ಶರ್ಮಾ ಕೆ. ಎಸ್.
ಮಹಿಳಾ ವಿಮೋಚನೆ(ಸಂ), ೧೯೭೮
ಪುರೋಗಾಮಿ ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ

೦೯. ವಿಮಲಾ ಎನ್.ವಿ.
ತ್ರಿವೇಣಿ ವ್ಯಕ್ತಿ ಮತ್ತು ಸಾಹಿತ್ಯ, ೧೯೮೨
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೦. ವಿಮಲಾ ರಣದಿವೆ
(ಅನು)ರಾಹು:ಬಂಡವಾಳಶಾಹಿ ರಾಷ್ಟ್ರಗಳಲ್ಲಿ ಮಹಿಳೆಯರ ಸ್ಥಿತಿಗತಿ, ೧೯೮೪
ಸೌಮ್ಯ ಪ್ರಕಾಶನ, ರೈಚೂರ

೧೧. ವಿಮಲಾ ರಣದಿವೆ
ಸಮಾಜವಾದಿ ದೇಶಗಳಲ್ಲಿ ಮಹಿಳಾ ಕಾರ್ಮಿಕರ ಸ್ಥಾನಮಾನ, ೧೯೮೬
ಸೌಮ್ಯ ಪ್ರಕಾಶನ, ರೈಚೂರ

೧೨. ಒಡೆಯರ್ (ಡಿ ಹೆಗಡೆ)
"ಜವಾಹರಲಾಲ್ ನೆಹರು ಮತ್ತು ಭಾರತೀಯ ಮಹಿಳೆ", ೧೯೮೮
ದಕ್ಷಿಣ ಕನ್ನಡ ಮಿಥುನ ಪ್ರಕಾಶನ, ಮಂಗಳೂರು

೧೩. ಮಾಲತಿ ಎ.ಪಿ.
ಮಹಿಳೆ-ಸಮಾಜ ಕಲ್ಯಾಣ, ೧೯೮೩
ಮನೋವಿಕಾಸ ಪುಸ್ತಕಮಾಲೆ, ಮೈಸೂರು

೧೪. ಶಾಂತಾದೇವಿ ಮಾಳವಾಡ
ಸಾರ್ವಜನಿಕ ರಂಗದಲ್ಲಿ ಮಹಿಳೆ, ೧೯೯೦
ಸಹ್ಯಾದ್ರಿ ಪ್ರಕಾಶನ, ಮೈಸೂರು

೧೫. ಶೈಲಜಾ ಉಡಚಣ
ವಚನಕಾರರ ದೃಷ್ಟಿಯಲ್ಲಿ ಸ್ತ್ರೀ, ೧೯೯೧
ಗ್ರೀನಬಲ್ಪ್ ಪ್ರಕಾಶನ, ಗುಲಬರ್ಗಾ

೧೬. ಕಮಲಾ ಸಂಪಳಿ
ನಮ್ಮ ವೀರ ವನಿತೆಯರು, ೧೯೯೨
ಅಭಿರಾಮ ಪ್ರಕಾಶನ, ಬೆಂಗಳೂರು

೧೭. ಇಂದಿರಾ
(ಸಂ)ಚಿತ್ತವೃತ್ತ, ೧೯೯೩
ಸಂದೀಪ ಪ್ರಕಾಶನ, ಅತ್ತಾಡಿ

೧೮. ರೋಹಿಣಿ ಬಿ.ಎಂ.
ಸ್ತ್ರೀ ಸಂವೇದನೆ, ೧೯೯೫
ಹೇಮಾಂಶು ಪ್ರಕಾಶನ, ಬೆಂಗಳೂರು

೧೯. ಉಜ್ವಲಾ ಹಿರೇಮಠ
"ಮಹಿಳೆಯರ ಪ್ರಗತಿಗೆ ಸಂಪನ್ಮೂಲಗಳ ಕ್ರೋಢೀಕರಣ", ೧೯೯೫
ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೨೦. ಮಂಗಲಾ ಕಾಳೆ
ಸ್ತ್ರೀ ವಿಮೋಚನಾ ಹೋರಾಟಗಳು, ೧೯೯೬
ಅನಾರ್ಯ ಪ್ರಕಾಶನ, ಧಾರವಾಡ

೨೧. ಅನುಪಮಾ ನಿರಂಜನ
ಮಾನಿನಿ ಪ್ರಗತಿಯತ್ತ ಮಹಿಳಾ ಪ್ರಜ್ಞೆ, ೧೯೯೬
ಪಿ.ಆರ್. ಪ್ರಿಂಟರ್ಸ್, ಮೈಸೂರು

೨೨. ಮ.ನ.ಜವರಯ್ಯ
ದಲಿತವರ್ಗದ ಶರಣರು ಮತ್ತು ಶರಣೆಯರು, ೧೯೯೭
ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು

೨೩. ನೀಲಮ್ಮ ಕತ್ನಳ್ಳಿ
ಮಹಿಳೆ:ಹಲವು ಮುಖಗಳು, ೧೯೯೭
ರೇಣುಕಾ ಪ್ರಕಾಶನ, ಶಹಾಬಾದ

೨೪. ವಿಜಯಾ ದಬ್ಬೆ
ನಾರಿ:ದಾರಿ-ದಿಗಂತ, ೧೯೯೭
ರಚನಾ ಪ್ರಕಾಶನ, ಮೈಸೂರು

೨೫. ಅರವಿಂದ
ಸ್ತ್ರೀಶಕ್ತಿ, ಅನು:ಜಿ.ಕುಲಕರ್ಣಿ, ೧೯೯೮
ದ.ರಾ.ಬೇಂದ್ರೆ ಸ್ನೇಹ ಮಂಡಲ, ಬೆಂಗಳೂರು

೨೬. ಶೈಲಜಾ ಉಡಚಣ
ನಾನು-ನಾವು ಮತ್ತು ಸಾಹಿತ್ಯ, ೧೯೯೯
ಚೇತನ ಪ್ರಕಾಶನ, ಗುಲಬರ್ಗಾ

೨೭. ಚೆನ್ನಣ್ಣ ವಾಲೀಕಾರ
ಮಹಾರಾಷ್ಟ್ರ ರಾಜ್ಯ ತುಂಬ ಹರಿಯುತ್ತಿರುವ ವೇಶ್ಯೆ ಸಹೋದರಿಯರ ಕಣ್ಣೀರು
ಕಡಲಿನ ಕೋಗಿಲೆ ಗಾನ, ೧೯೯೯
ಅಪ್ಪಾಸಾಹೇಬ ವಾಲೀಕಾರ ಪ್ರಕಾಶನ, ಗುಲಬರ್ಗಾ

೨೮. ಎಚ್.ಎಸ್.ಶ್ರೀಮತಿ
ಚಹರೆ, ೧೯೯೯
ಇಳಾ ಪ್ರಕಾಶನ, ಬೆಂಗಳೂರು

೨೯. ಎಂ. ಉಷಾ
ಮಹಿಳೆ ಮತ್ತು ಪತ್ರಿಕೆ, ೧೯೯೯
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೦. ಕೇಶವ ಶರ್ಮಾ
ಸ್ತ್ರೀ ಮತ್ತು ರಾಜಕಾರಣ, ೨೦೦೦
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೧. ಬಿ.ಎನ್ .ಸುಮಿತ್ರಾಬಾಯಿ
ಪಶ್ಚಿಮದ ಸ್ತ್ರೀವಾದಿ ವಿಮರ್ಶಾ ಪಂಥಗಳು, ೨೦೦೦
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೨. ಕೆ.ವಿಜಯಶ್ರೀ
ಕನ್ನಡ ಪತ್ರಿಕೆಗಳು ಮತ್ತು ಸಾಹಿತ್ಯ, ೨೦೦೦
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೩. ಎಚ್.ಎಸ್.ಶ್ರೀಮತಿ
ಸ್ತ್ರೀವಾದಿ ಚಿಂತನೆ ಕೆಲವು ಪ್ರಶ್ನೆಗಳು ಸಂದೇಹಗಳು, ೨೦೦೦
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೪. ಗಿರಿಜಾ ಶಾಸ್ತ್ರಿ
ಆಧುನಿಕ ಕನ್ನಡ ಸಣ್ಣ ಕತೆಗಳು ಒಂದು ಸ್ತ್ರೀವಾದಿ ಅಧ್ಯಯನ, ೨೦೦೦
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೫. ಸವಿತಾ ನಾಯಕ
ಬುಡಕಟ್ಟು ಮಹಿಳೆಯರ ಪ್ರಸಾದನ ಕಲೆ, ೨೦೦೦
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

01. Shakunthala Narasimhan
Sati, 1990
Viking By Penguin Books India Ltd.

02. H.C.Upadhyaya
Status of Women in India Vol.II, 1991
Anmol Publications New Delhi

03. S.Rama Sharma
Women and Education, 1995
Discovery Publishing, New Delhi

04. Susan Frank Persons
Feminism and Christion Ethics, 1996
Cambridge University Press, New York

05. Rehana Ghadially
Women in Indian Society, 1996
Sage Publications, New Delhi

06. Patricia Oberoi
Social Reform Sexuality and Tate, 1996
Sage Publications, New Delhi

07. Meenakshi Thappan
Embodiment
Essays on Gender and Identity, 1997
Oxford University Press, New Delhi

08. Laxmi Devi
Women Participation in work Force, 1998
Anmol Publication, New Delhi

09. Maitreya Dixit
Women and Achievement, 1998
Kanishka Publishers, Distributors, New Delhi

10. Hildal Smith
Women Writers and The Early Modern British Political Tradition, 1998
Cambridge University Press, New York

11. Suman Gupta
Women in modern India, 1999
National Publishing House, Delhi

12. Rehana Sikri
Women and Sexual Exploitation Harassment at work, 1999
Kanishka Publishers Distributors, New Delhi

13. Samita Sen
Women and Labour in Late Colonial India The Bengal Jute Industry, 1999
Cambridge University Press, New York

14. Fatima Ehtesham Siddioi
Political Women Country experiences in Identity and Gender Debate, 1999
Kanishka Publishers Distributors, New Delhi

15. Digumarti Bhaskara Rao
Digumarti Pushpa Latha
The Status of World's Women, 1999
Discovery Publishing House, New Delhi

16. Dipangshu Chakraborty
Atrocities on Indian Women, 1999
A.P.H.Publishing Corportation, New Delhi

17. Susance Seymour
Women Family and Child Care in India, 1999
Press Syndicate of the University of Cambridge

18. Renu Ohri
University and Working Women, 1999
Anmol Publications Pvt. Ltd., New Delhi

19. Kalpana Roy
Women's Oppression and Protective Law, 1999
Rajat publication, New Delhi

20. Sunanda Sagar Rose Meyer
Women's Rights Search for Identity, 2000
Dominant Publishers, New Delhi

21. L. Thara Bhai
Women's Studies in India, 2000
A.P.H. Publishing Corporation, New Delhi

22. Niranjana
Status of Women and Family Welfare, 2000
Kanishka Publishers Distributors, New Delhi

23. S.A.H Moinuddin
Divorce and Muslim Women, 2000
Rawat Publications, Jaipur, New Delhi

## ಈ ಸಂಚಿಕೆಯಲ್ಲಿ

**ವಿಜಯಾ**
ನಂ. ೮, ೨೫ನೇ ಮುಖ್ಯರಸ್ತೆ
ಮುನೇಶ್ವರ ಬ್ಲಾಕ್, ಗಿರಿನಗರ
ಬೆಂಗಳೂರು ೫೬೦ ೦೮೫

**ಉಷಾದಾತಾರ್**
ರೀಡರ್
ಸಂಗೀತ ಮತ್ತು ನೃತ್ಯ ವಿಭಾಗ
ಜ್ಞಾನಭಾರತಿ
ಬೆಂಗಳೂರು ವಿಶ್ವವಿದ್ಯಾನಿಲಯ
ಬೆಂಗಳೂರು ೫೬೦ ೦೫೬

**ಚಂದ್ರಮತಿ ಸೋಂದಾ**
ನಂ. ೫೫೧/ಎಸ್ 'ಚಿಂತನ'
೨೪ನೇ ತಿರುವು, ೨ನೇ ಹಂತ
ಹೆಬ್ಬಾಳು
ಮೈಸೂರು ೫೭೦ ೦೧೭

**ಜಯಮಾಲಾ**
ಸಂಶೋಧನಾ ವಿದ್ಯಾರ್ಥಿ
ಸಮಾಜಶಾಸ್ತ್ರ ವಿಭಾಗ
ಮಂಗಳಗಂಗೋತ್ರಿ
ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳೂರು

**ಗುಲಾಬಿ ಬಿಳಿಮಲೆ**
ಸಿ-೧೩೦ ಎಂ.ಸಿ.ಎಫ್ ಟೌನ್‌ಶಿಪ್
ಕುಂಜತ್ತ ಬೈಲು
ಮಂಗಳೂರು ೧೫

**ಸಾರಾ ಅಬೂಬಕ್ಕರ್**
ಮಾರ್ಟಿನ್ ಪಾಯಸ್ ರಸ್ತೆ
ಮಂಗಳೂರು

**ಜಯಲಕ್ಷ್ಮೀ ಶ್ರೀನಿವಾಸನ್**
ಬೆಂಗಳೂರು

**ಕೆ.ಶರೀಫಾ**
ಎ.ಪಿ.ಎಂ.ಸಿ
ಹರಿಹರ ೫೭೭ ೬೦೧
ದಾವಣಗೆರೆ ಜಿಲ್ಲೆ

**ವನಮಾನಲ ಕಟ್ಟೇಗೌಡರ**
ಗಾಂಧೀ ಕಾಲೋನಿ
ಹೊಸಪೇಟೆ

**ಸಿ.ಎಸ್.ಲಕ್ಷ್ಮಿ**
ಅಧ್ಯಕ್ಷರು
SPARROW
ಮುಂಬಯಿ

**ಎಚ್.ಎಸ್.ಶ್ರೀಮತಿ**
ಪ್ರವಾಚಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಶೈಲಜಾ ಇಂ.ಹಿರೇಮಠ**
ಅಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ನಾಗವೇಣಿ ಎಚ್**
ಸಹಾಯಕ ಗ್ರಂಥಪಾಲಕರು
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಅನುಸೂಯ ಕದಂ**
ಸಂಶೋಧನಾ ವಿದ್ಯಾರ್ಥಿ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಸಬೀಹಾ ಭೂಮಿಗೌಡ**
ಕನ್ನಡ ಅಧ್ಯಯನ ವಿಭಾಗ
ಮಂಗಳಗಂಗೋತ್ರಿ
ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳೂರು

ಮಹಿಳೆಯ ಅಸ್ಮಿತೆ, ಅಸ್ತಿತ್ವಗಳನ್ನು ಗುರುತಿಸುವ, ಅವಳ ಬದುಕನ್ನು ಸುಗಮವಾಗಿಸುವ ದಿಸೆಯಲ್ಲಿ ಚಿಂತನೆ ನಡೆಸುವ ಮಾಧ್ಯಮಗಳಿಗಾಗಿ ಹುಡುಕಾಟ ನಡೆಸಬೇಕಿದೆ. ಏಕೆಂದರೆ ಈವರೆಗೂ ಈ ಪುರುಷಪ್ರಧಾನ ಸಮಾಜಕ್ಕೆ ಮಹಿಳೆಯನ್ನು ದುಡಿಸಿಕೊಳ್ಳುವುದು ಹೇಗೆ ಎಂಬುದೇ ಚಿಂತೆಯಾಗಿದೆಯೇ ಹೊರತು ಅವಳ ಅಗತ್ಯಗಳನ್ನು ಗಮನಿಸಬೇಕೆಂದು ಅನಿಸಿದ್ದಿಲ್ಲ. ಇಂದಿನ ಜಾಗ್ರತ ಮಹಿಳೆ ತನ್ನ ವರ್ತಮಾನ, ಭವಿಷ್ಯಗಳನ್ನು ತಿದ್ದಿ ರೂಪಿಸುವ ಸಾಮರ್ಥ್ಯವನ್ನು ಕ್ರಮೇಣ ಪಡೆಯುತ್ತಿದ್ದಾಳೆ. ಈ ಹಂತದಲ್ಲಿ ಗಂಭೀರವಾದ ಚಿಂತನೆ, ಚರ್ಚೆ, ಸಲಹೆ, ಸೂಚನೆಗಳನ್ನು ಕೊಡುತ್ತಾ ಅವಳ ಪ್ರಯತ್ನಕ್ಕೆ ನೆರವಾಗುವ ಪತ್ರಿಕೆಗಳ ಅಗತ್ಯವನ್ನು ಪೂರೈಸುವ ಪ್ರಯತ್ನವಾಗಿ ಈ ಮಹಿಳಾ ಅಧ್ಯಯನ ಪತ್ರಿಕೆ ಕೆಲಸ ಮಾಡುತ್ತಿದೆ. ಇಲ್ಲಿನ ಚಿಂತನೆ, ಚರ್ಚೆಗಳು ತಾತ್ತ್ವಿಕ ನೆಲೆಯ ಶೋಧಗಳಲ್ಲಿರುವ ವಿದ್ವಾಂಸರೂ, ಕ್ರಿಯಾಕ್ಷೇತ್ರಗಳಲ್ಲಿರುವ ಕಾರ್ಯಕರ್ತರೂ ಪರಸ್ಪರ ಸಂವಾದ ನಡೆಸಲು ನೆರವಾಗುವಂತಿರಲಿ ಎಂಬ ಆಶಯವಾಗಿವೆ.